# ಸೋಲಿಗ ಕನ್ನಡ : ಸಮಾಜೋಭಾಷಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಮೋಹನ್ ಕುಮಾರ್ ಎಸ್.ಈ

ಮಾರ್ಗದರ್ಶಕರು

ಡಾ.ಪಿ.ಮಹಾದೇವಯ್ಯ

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬

೨೦೧೭

# ಸೋಲಿಗ ಕನ್ನಡ : ಸಮಾಜೋಭಾಷಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

ಮೋಹನ್ ಕುಮಾರ್ ಎಸ್.ಈ

ಮಾರ್ಗದರ್ಶಕರು

ಡಾ.ಪಿ.ಮಹಾದೇವಯ್ಯ

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೭

## ಸಂಶೋಧಕರ ಪ್ರಮಾಣ ಪತ್ರ

**ಸೋಲಿಗ ಕನ್ನಡ : ಸಮಾಜೋಭಾಷಿಕ ಅಧ್ಯಯನ** ಎಂಬ ಮಹಾಪ್ರಬಂಧವನ್ನು **ಡಾ.ಪಿ.ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ.ಸ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

S.E Mohan k.

**ಮೋಹನ್ ಕುಮಾರ್ ಎಸ್.ಈ**
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 4·02·17

# ಮಾರ್ಗದರ್ಶಕರ ಪ್ರಮಾಣ ಪತ್ರ

**ಮೋಹನ್ ಕುಮಾರ್ ಎಸ್.ಈ** ಅವರು **ಸೋಲಿಗ ಕನ್ನಡ : ಸಮಾಜೋಭಾಷಿಕ** ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. **ಪಿಎಚ್.ಡಿ.,** ಪದವಿಗೆ ಕನ್ನಡ ವಿಶ್ವವಿದ್ಯಾಲಯದಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

8.3.12

ಡಾ.ಪಿ.ಮಹಾದೇವಯ್ಯ
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ:

## ಪರಿವಿಡಿ

## ಅಧ್ಯಾಯ-ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ

**ಪೀಠಿಕೆ**

ಭಾಷೆ, ಸಮಾಜ ಮತ್ತು ಸಂಸ್ಕೃತಿ ಸಂಬಂಧಗಳ ಕುರಿತು ಮಾತನಾಡುವಾಗ ಭಾಷೆ ಬಿಟ್ಟು ಸಂಸ್ಕೃತಿಯಿಲ್ಲ, ಸಂಸ್ಕೃತಿ ಬಿಟ್ಟು ಸಮಾಜವಿಲ್ಲ. ಹೀಗಾಗಿ ಸಂಸ್ಕೃತಿ ಸೂಚಕ ಮತ್ತು ಸಮಾಜ ಸೂಚಕವಾಗಿ ಭಾಷೆಯ ಸ್ವರೂಪ ಹೇಗಿದೆ ಎಂಬುದನ್ನು ತಿಳಿಯಬೇಕಾಗಿದೆ. ಸಮಾಜದಲ್ಲಿ ವ್ಯಕ್ತಿ ಬಳಸುವ ಮಾತು ಸಾಮಾಜಿಕ ಸಂಬಂಧಗಳಿಂದ ಕೂಡಿರುತ್ತದೆ. ಹಾಗಾಗಿ ಆ ವ್ಯಕ್ತಿಯ ಮಾತು ಯಾವಾಗಲೂ ಸಂಸ್ಕೃತಿ ಸೂಚಕವಾಗಿರುತ್ತದೆ. ಈ ಹಿನ್ನಲೆಯಲ್ಲಿ ಸೋಲಿಗರ ಭಾಷೆಯು ವಿಶಿಷ್ಟತೆಯಿಂದ ಕೂಡಿರುವುದನ್ನು ನೋಡಬಹುದು. ಇಂತಹ ವಿಶಿಷ್ಟ ಸಂಸ್ಕೃತಿ ಹೊಂದಿರುವ ಸೋಲಿಗ ಸಮುದಾಯದ ಜನರು ಸಂಭೋದನೆ ಮಾಡುವಾಗ 'ಏನುಡ ಕುನ್ನ' ಎಂದು ಬಳಕೆ ಮಾಡುತ್ತಾರೆ.

ಆನೆಗ ಬಂದದೆ ಮಕ್ಕ ಮರಿ ಹುಸಾರು
ಬೆಳ್ಳ ಗಂಬುಗು ನುಗ್ರುತು,
ಅಂಯ್ಯ ಮೆನೆಲಿ ತಂಗ್ಬು ಬೆಂಗಳು ತಿಮ್ಮದು ಮಾಕುಮದು
ಮಕ್ಯಾಗ ನಿರು ನಿಡಿಯ ತಂದ್ರು ಕೊಡದಿಲ್ಲ ಕನೊ ಎತ್ತಕಾವ ಒದೊ

ಮುಂತಾದ ಮಾತುಗಳು ಸೋಲಿಗರ ನುಡಿಯನ್ನು ಪ್ರತಿನಿಧೀಕರಿಸುತ್ತವೆ. ಈ ನುಡಿ ಮಾದರಿಗಳಿಂದ ಹೀಗೆ ಭಾಷೆ ಸಮಾಜ ಮತ್ತು ಸಂಸ್ಕೃತಿ ಸೂಚಕವಾಗಿ ಬಳಕೆಯಲ್ಲಿದೆ ಎಂಬುದು ತಿಳಿದುಬರುತ್ತದೆ.

ಸೋಲಿಗ ಸಮಾಜವನ್ನು ವಿಶ್ಲೇಷಣೆ ಮಾಡುವಾಗ ಅವರು ಬಳಸುವ ವಸ್ತುಗಳಾಗಿರಬಹುದು, ಸಂಬೋಧನ ರೂಪಗಳಾಗಿರಬಹುದು, ಸಂಬಂಧವಾಚಕ ಪದಗಳಾಗಿರಬಹುದು, ವ್ಯಕ್ತಿನಾಮಗಳು ಇರಬಹುದು ಅಥವಾ ಅವರು ಬಳಸುವ ನುಡಿಮಾದರಿಗಳಾಗಿರಬಹುದು ಇವೆಲ್ಲವೂ ಅನನ್ಯ ಕುರುಹುಗಳಾಗಿರುವುದನ್ನು ಗಮನಿಸಬಹುದಾಗಿದೆ.

ಸಮಕಾಲೀನ ಸಂದರ್ಭದಲ್ಲಿ ಕನ್ನಡ ಮತ್ತು ಸೋಲಿಗರ ಸಂಬಂಧ ಎಂತಹದ್ದು ಎಂಬುದನ್ನು ತಿಳಿಯುವ ಅಗತ್ಯವಿದೆ. ಸೋಲಿಗರನ್ನು ಕನ್ನಡ ನುಡಿ ಹೇಗೆ ನೋಡುತ್ತಿದೆ ಎಂಬುದು ಗಮನಿಸುವಂತಹ ಅಂಶವಾಗಿದೆ. ಕನ್ನಡ ಮತ್ತು ಸೋಲಿಗರ ಸಂಬಂಧವನ್ನು ಎರಡು ಹಂತಗಳಲ್ಲಿ ವಿಶ್ಲೇಷಣೆ ಮಾಡಬಹುದಾಗಿದೆ.

ಮೊದಲನೆಯ ಹಂತ: ಸೋಲಿಗರು ಮತ್ತು ಕನ್ನಡ ಸಂಬಂಧ

ಎರಡನೆಯ ಹಂತ: ಸೋಲಿಗರ ಕನ್ನಡ

ಸೋಲಿಗರನ್ನು ಕನ್ನಡ ಭಾಷೆ ಪ್ರಧಾನವಾಗಿ ನೋಡದೆ, ಅಧೀನವಾಗಿ ನೋಡುತ್ತಿರುವುದು ಗಮನಿಸುವಂತಹ ಅಂಶ. ಸೋಲಿಗರು ಕನ್ನಡ ಭಾಷೆಯೊಂದಿಗೆ ಏಕಭಾಷಿಕ ನೆಲೆಯಲ್ಲಿ ತಮ್ಮ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ಈ ಹಿನ್ನಲೆಯಿಂದ ಕನ್ನಡ ನುಡಿಯ ಚಾರಿತ್ರಿಕ, ಭಾಷಿಕ ಅಂಶಗಳು ಇವರ ನುಡಿಯಲ್ಲಿ ಬಳಕೆಯಲ್ಲಿರುವುದು ಗಮನಿಸುವಂತಹ ಅಂಶಗಳಾಗಿವೆ. ಸೋಲಿಗರು ಮತ್ತು ಕನ್ನಡ ಸಂಬಂಧವನ್ನು ಗಮನಿಸಿದಾಗ, ಸೋಲಿಗರು ತಮ್ಮ ನುಡಿಯನ್ನು ಬಿಟ್ಟುಕೊಟ್ಟು ಪ್ರಮಾಣೀಕರಣದಿಂದ ಭಾಷೆಗೆ ಬರಬೇಕು ಎಂಬ ಒತ್ತಾಯ ಇದ್ದಂತಿದೆ. ಅಂದರೆ ಕನ್ನಡ ಪ್ರಧಾನಧಾರೆಗೆ ಗುರುತಿಸಿಕೊಳ್ಳಬೇಕಾದರೆ, ಸೋಲಿಗರು ಮಾತನಾಡುವ ಕನ್ನಡ ಪ್ರಭೇಧವನ್ನು ಬಿಡಬೇಕೆಂಬ ಒತ್ತಾಯ ಇದೆ.

ನಮ್ಮ ಸಾಮಾಜಿಕ ಸಂದರ್ಭದಲ್ಲಿ ಹೆಚ್ಚಿನದಾಗಿ ಒಬ್ಬ ವ್ಯಕ್ತಿಯು ಅಭಿವೃದ್ಧಿಯನ್ನು ಗುರುತಿಸುವಾಗ, ಆತ ತನ್ನ ಸಾಮಾಜಿಕ ಪರಿಸರದ ಭಾಷೆಯನ್ನು ಇಟ್ಟಕೊಂಡಿರುವುದನ್ನು ಗಮನಿಸಿ ಅಳೆಯುತ್ತಿರುತ್ತೇವೆ(ಮೌಲ್ಯಮಾಪನ ಮಾಡುತ್ತಿರುತ್ತೇವೆ). ಈ ವಿಚಾರ ಕೇವಲ ಸೋಲಿಗರಿಗೆ ಮಾತ್ರ ಅನ್ವಯಸದೆ ಎಲ್ಲಾ ಕನ್ನಡ ಭಾಷಿಕರಿಗೆ ಅನ್ವಯಿಸುವುದು. ಆತ ಮಾತಾನಾಡುತ್ತಿದ್ದರೆ ಸೋಲಿಗ ಎಂಬುದು ಗೊತ್ತಾಗುವುದೇ ಇಲ್ಲ. ಅಷ್ಟು ಚೆನ್ನಾಗಿ ಮಾತನಾಡುತ್ತಾನೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿರುತ್ತೇವೆ. ಅಂದರೆ ಈ ಮಾತಿನ ಹಿಂದೆ ತನ್ನ ಸಾಮಾಜಿಕ ಪರಿಸರದ ಕನ್ನಡ ರೂಪವನ್ನು ಬಿಟ್ಟು ಮುಖ್ಯದಾರಿಗೆ ಬರಬೇಕೆಂಬ ಒತ್ತಾಯವಿದೆ. ಈ ಒತ್ತಾಯ ಶೈಕ್ಷಣಿಕ ಮತ್ತು ಸಾಮಾಜಿಕ ನೆಲೆಗಳಲ್ಲಿ ಸೋಲಿಗರ ಮೇಲು ಇವೆ. ಅಂದರೆ ಸೋಲಿಗರು ತಾವು ಮಾತನಾಡುವ ಕನ್ನಡವನ್ನು ಕಳೆದುಕೊಳ್ಳಬೇಕು ಅದನ್ನು ಬಿಟ್ಟುಕೊಡಬೇಕೆಂಬ ಒತ್ತಾಯವಿದೆ. ಸೋಲಿಗರಾದವರು ಕನ್ನಡ ಅದು ಬಳಕೆಗೆ ಮತ್ತು ಕಲಿಕೆಗೆ

ಯೋಗ್ಯವಲ್ಲವೆಂಬ ಅಭಿಪ್ರಾಯವನ್ನು ತಾಳುವವರಿದ್ದಾರೆ. ಶೈಕ್ಷಣಿಕವಾಗಿ ಹಿಂದುಳಿದಿರುವುದಕ್ಕೆ ಅವರ ಕನ್ನಡವೇ ಕಾರಣವೆಂಬ ಅಭಿಪ್ರಾಯಪಡುವವರಿದ್ದಾರೆ.

ಸೋಲಿಗರು ಏಕಭಾಷಿಕ ಸಮುದಾಯವಾಗಿದ್ದು, ಸೋಲಿಗರು ಇಂದು ಶೈಕ್ಷಣಿಕರಾಗಿರುವ ಅಕ್ಷರಸ್ಥರು ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ. ಜಾಗತೀಕರಣದ ಪ್ರಭಾವದಿಂದ ಅಕ್ಷರ ಜಗತ್ತಿಗೆ ನಿಧಾನಗತಿಯಲ್ಲಿ ಸೋಲಿಗರು ಹೆಜ್ಜೆ ಇಡುತ್ತಿದ್ದಾರೆ. ಈ ಹಿನ್ನಲೆಯಲ್ಲಿ ಅವರು ದ್ವಿಭಾಷಿಕರಾಗುತ್ತಿದ್ದಾರೆ.

ಬಿಳಿಗಿರಿರಂಗನ ಬೆಟ್ಟದಲ್ಲಿ ನೆಲೆಸಿರುವ ಸೋಲಿಗರು ಮತ್ತು ಬಿಳಿಗಿರಿರಂಗಸ್ವಾಮಿಯ ಸಂಬಂಧ ಅನನ್ಯವಾದುದು. ಸಾಮಾನ್ಯವಾಗಿ ದೇವರು ಮತ್ತು ಮಾನವರ ನಡುವೆ ಒಂದು ಅಂತರ ಇದ್ದೇ ಇರುತ್ತದೆ. ಜನ ಸಾಮಾನ್ಯರು ದೇವರನ್ನು ಕುರಿತು ಗೌರವ ಸೂಚಕವಾಗಿ ಸಂಬೋಧನೆ ಮಾಡುವ ಪರಿಪಾಠ ಇದೆ. ಆದರೆ ಬಿಳಿಗಿರಿರಂಗನ ಬೆಟ್ಟದಲ್ಲಿ ನೆಲೆಸಿರುವ ಬಿಳಿಗಿರಿರಂಗಸ್ವಾಮಿ ಸೋಲಿಗರ ಹೆಣ್ಣುಮಗಳಾದ ಕುಸುಮಬಾಲೆಯನ್ನು ಮದುವೆ ಆಗಿರುವುದರಿಂದ ಸೋಲಿಗರು ಬಿಳಿಗಿರಿರಂಗಸ್ವಾಮಿಯನ್ನು ರಂಗ ಬಾವ ಎಂದು ಸಂಬೋಧನೆ ಮಾಡುವರು. ಬಿಳಿಗಿರಿರಂಗಸ್ವಾಮಿ ಸೋಲಿಗರ ಎಲ್ಲ ತಲೆಮಾರಿನವರಿಗೆ 'ಬಾವ' ಆಗಬೇಕಾಗಿದೆ. ಅದರಲ್ಲೂ ಸೋಲಿಗರ ಹೆಣ್ಣುಮಕ್ಕಳು ಸಹ ಬಿಳಿಗಿರಿರಂಗನನ್ನು 'ಬಾವ' ಎಂದೆ ಸಂಬೋಧನೆ ಮಾಡುತ್ತಾರೆ.

ಜೀವ ಸಂಕುಲಗಳಲ್ಲಿ ಮಾನವನು ಅತ್ಯಂತ ಶ್ರೇಷ್ಠ ಜೀವಿ. ಇದಕ್ಕೆ ಕಾರಣವಾದ ಅನೇಕ ಅಂಶಗಳೆಂದರೆ ಆತ ವಿಚಾರಶೀಲನು, ಆಲೋಚನಾ ಸಾಮರ್ಥ್ಯವುಳ್ಳವನು ಆಗಿದ್ದಾನೆ. ಹಾಗೆಯೇ ಭಾಷೆಯ ಮೇಲೆ ಪ್ರಭುತ್ವ ಸಾಧಿಸಿರುವ ಏಕೈಕ ಜೀವಿಯೆಂದರೆ ಮಾನವ. ಭಾಷೆಯೆಂಬುದು ಮಾನವನಿಗೆ ಇತರ ದೈಹಿಕ ಅವಯವಗಳಂತೆ ಜನ್ಮದತ್ತವಲ್ಲ. ಅದು ಮಾನವ ತಾನು ಪ್ರಯತ್ನಪೂರ್ವಕವಾಗಿ ರೂಢಿಸಿಕೊಂಡಿರುವಂತಹ ಯಾದೃಚ್ಚಿಕ ಉಚ್ಚರಿತ ಧ್ವನಿಸಂಕೇತಗಳ ವ್ಯವಸ್ಥೆಯಾಗಿದೆ. ಅದು ಮಾನವನ ವೈಯಕ್ತಿಕ ಸಿದ್ಧಿ ಸಾಧನವಾಗಿದ್ದು, ತನ್ನ ಪರಿಸರದ ಜನರು ಬಳಸುವ ಭಾಷೆಯನ್ನು ಅನುಕರಿಸಿ ಪ್ರಯತ್ನ ಪೂರ್ವಕವಾಗಿ ಕಲಿಯುವ ವಿನಿಮಯ ಮಾಧ್ಯಮವಾಗಿದೆ. ಭಾಷೆ ಸಂಸ್ಕೃತಿಯ ಪ್ರತೀಕವಾಗಿದ್ದು, ಒಂದು ಭಾಷೆಯನ್ನಾಡುವ ಜನರ ಜೀವನ ವಿಧಾನ ಮತ್ತು ಆಚಾರ-ವಿಚಾರ ಸಂಪ್ರದಾಯಗಳನ್ನು ಆ ಜನರು ಬಳಸುವ ಭಾಷೆಯ ಮೂಲಕ ತಿಳಿಯಬಹುದಾಗಿದೆ.

ಸಮುದಾಯದ ಜೀವನ ವಿಧಾನ ಹಾಗೂ ಸಂಸ್ಕೃತಿಯ ಕುರಿತಾಗಿ ಹೆಚ್ಚಿನ ಅಧ್ಯಯನ ನಡೆಯಬೇಕಾದ ಅಗತ್ಯವಿದೆ. ಸಮಾಜದ ಅವಿಭಾಜ್ಯ ಅಂಗವಾದ ಭಾಷೆ ಸಮಾಜದ ಬದಲಾದ ಚಟುವಟಿಕೆಗಳ ಪ್ರತಿಬಿಂಬವಾಗಿದೆ. ಸಮಾಜ ಅಭಿವೃದ್ಧಿ ಹೊಂದಿದಂತೆ ಭಾಷೆಯು ಅಭಿವೃದ್ಧಿ ಹೊಂದುವ ಜೊತೆಗೆ ಸಂಸ್ಕೃತಿಯೂ ಬದಲಾಗುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವನ್ನು

ಕೈಗೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಭಾಷೆ ಮತ್ತು ಸಮಾಜದ ಸಹಸಂಬಂಧದ ಹಿನ್ನಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದ್ದು, ಕರ್ನಾಟಕದ ಪಾರಂಪರಿಕ ಬುಡಕಟ್ಟಾದ ಸೋಲಿಗ ಸಮುದಾಯವನ್ನು ಸಾಮಾಜಿಕ ಭಾಷಾವೈಜ್ಞಾನಿಕ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಸಾಮಾಜಿಕ ಹಿನ್ನಲೆಯಲ್ಲಿ ನಡೆದಿರಬಹುದಾದ ಅಧ್ಯಯನಗಳಲ್ಲಿ ಭಾಷಿಕವಾಗಿ ನಡೆಸಿರುವ ಅಧ್ಯಯನಗಳು ಕಡಿಮೆಯಿದೆ.ಇಲ್ಲಿ ಕೆಲವೊಂದು ಆಯಾಮಗಳನ್ನು ಮಾನದಂಡವಾಗಿಟ್ಟುಕೊಂಡು ಸಮಾಜೋಭಾಷಿಕ ಅಧ್ಯಯನವನ್ನು ಮಾಡಲಾಗಿದೆ. ಹಾಗಾಗಿಯೇ ಈ ಸಾಮಾಜಿಕ ವೈವಿಧ್ಯತೆಗೆ ಅನುಗುಣವಾಗಿ ನಡೆಯುವ ಭಾಷಿಕ ಅಧ್ಯಯನವು ಇದಾಗಿದೆ.

ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ಹಾಗೂ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುತ್ತಾ ಸಾಗುತ್ತದೆ. ಹೀಗೆ ಪ್ರಾದೇಶಿಕ ಹಿನ್ನಲೆಯಲ್ಲಿ ಒಂದು ಭಾಷೆಯ ವಿವಿಧ ರೂಪಗಳನ್ನು ಗುರುತಿಸಿದರೆ ಅದು ಪ್ರಾದೇಶಿಕ ಉಪಭಾಷೆಯಾಗುತ್ತದೆ. ಹಾಗೆಯೆ ಭಾಷೆಯನ್ನು ವಿಭಿನ್ನ ಸಮುದಾಯ ಬಳಸುವ ಭಾಷೆಯ ಆಧಾರದ ಮೇಲೆ ಒಂದು ಭಾಷೆಯ ಉಪಭಾಷೆಗಳನ್ನು ಗುರುತಿಸಿದರೆ, ಅದು ಸಾಮಾಜಿಕ ಉಪಭಾಷೆ ಎನಿಸಿಕೊಳ್ಳುತ್ತದೆ. ಆದ್ದರಿಂದ ಭಾಷೆಯ ಸಾಮಾಜಿಕ ಹಿನ್ನಲೆಯಲ್ಲಿ ಕೈಗೊಳ್ಳುವ ಭಾಷಿಕ ಅಧ್ಯಯನವನ್ನು ಸಮಾಜೋಭಾಷಿಕ ಅಧ್ಯಯನವೆಂದು ಕರೆಯುತ್ತಾರೆ. ಸಾಮಾಜಿಕ ವೈವಿಧ್ಯತೆ ಆಧಾರದ ಮೇಲೆ ಭಾಷಿಕ ಅಧ್ಯಯನ ಮಾಡಬೇಕಾದ ಅಗತ್ಯವಿದೆ. ಸಾಮಾಜಿಕ ಭಾಷಿಕ ಅಧ್ಯಯನ ಪ್ರಸ್ತುತ ದಿನಗಳಲ್ಲಿ ಅಗತ್ಯವಿದೆ.

ಭಾಷೆ ಒಂದು ಸಾಮಾಜಿಕ ಪ್ರಕ್ರಿಯೆ. ಇದು ಸಾಮಾಜಿಕ ವ್ಯವಸ್ಥೆಯಲ್ಲಿ ಕಾಲ, ದೇಶ, ಪರಿಸರಕ್ಕೆ ಅನುಗುಣವಾಗಿ ಅಭಿವ್ಯಕ್ತಿ ಮಾಧ್ಯಮವಾಗಿ ನಿಲ್ಲಬಲ್ಲ ಸಮರ್ಥ ಸಾಧನ. ಸಂಘ ಜೀವಿಯಾದ ಮಾನವನ ವೈಯಕ್ತಿಕ ಸಿದ್ಧಿ ಸಾಧನಗಳಲ್ಲಿ ಭಾಷೆ ಪ್ರಮುಖವಾದುದು. ಭಾಷೆ ಸಮಾಜದ ಅವಿಭಾಜ್ಯ ಅಂಗ. ಭಾಷೆಯಿಲ್ಲದ ಸಮಾಜವನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಅಂತೆಯೇ ಸಮಾಜವಿಲ್ಲದೆ ಭಾಷೆ ಅಸ್ಥಿತ್ವದಲ್ಲಿರುವುದೂ ಸಾಧ್ಯವಿಲ್ಲ. ಹೀಗಾಗಿ ಭಾಷೆ ಮತ್ತು ಸಮಾಜ ಸಹಸಂಬಂಧವನ್ನು ಹೊಂದಿದೆ.

ಭಾಷೆ ಮತ್ತು ಸಮಾಜದ ನಡುವಿನ ಸಂಬಂಧ ಅನನ್ಯವಾದುದು. ಭಾಷೆಯಿಂದ ಒಂದು ಸಮುದಾಯದ ರಚನಾ ವ್ಯವಸ್ಥೆಯನ್ನು ಬಹು ಸುಲಭವಾಗಿ ತಿಳಿಯಬಹುದಾಗಿದೆ. ಅಂತೆಯೇ ಸಮಾಜದ ರಚನಾ ವಿನ್ಯಾಸ ಮತ್ತು ವಿಶೇಷತೆಯನ್ನು ಸುಲಭವಾಗಿ ಸಮರ್ಪಕ ರೀತಿಯಲ್ಲಿ ಸೂತ್ರೀಕರಿಸಿ ವಿವರಿಸಬಹುದಾಗಿದೆ. ಸಮಾಜದ ವ್ಯಕ್ತಿ ಸರ್ವ ಸ್ವತಂತ್ರನಾಗಿರದೆ, ಸಮಾಜದ ಒಂದು ಭಾಗವಾಗಿದ್ದಾನೆ. ಸಮಾಜದಲ್ಲಿ ನಡೆಯುವ ಪ್ರತಿಯೊಂದು ಚಟುವಟಿಕೆಯಲ್ಲಿ ಅವನ ಪಾತ್ರವಿರುತ್ತದೆ. ಭಾಷೆಯು ಸಂಸ್ಕೃತಿ ಪ್ರತೀಕವಾಗಿದೆ. ಸಮಾಜದ ಜೀವಂತ ಚಟುವಟಿಕೆಗಳ ಮೂಲ ಭಾಷೆ. ಸಮಾಜದಿಂದ ವ್ಯಕ್ತಿಯನ್ನು ಹೇಗೆ ಬೇರ್ಪಡಿಸಲು ಸಾಧ್ಯವಿಲ್ಲವೊ,ಹಾಗೆಯೇ

ಭಾಷೆಯನ್ನು ಸಮಾಜದಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಭಾಷೆ ಸಮಾಜದ ಎಲ್ಲ ಚಟುವಟಿಕಗಳ ಆಧಾರ ಸ್ತಂಭವಾಗಿದೆ. ಜಗತ್ತಿನಲ್ಲಿ ಸಮಾಜವಿಲ್ಲದೆ ಭಾಷೆ ಇಲ್ಲ. ಹಾಗೆಯೇ ಭಾಷೆಯಿಲ್ಲದೆ ಸಮಾಜವಿಲ್ಲ. ಸಮಾಜದ ಅವಿಭಾಜ್ಯ ಅಂಗವಾದ ಭಾಷೆ ಸಮಾಜದ ಬದಲಾದ ಚಟುವಟಿಕೆಗಳ ಪ್ರತಿಬಿಂಬವಾಗಿದೆ. ಸಮಾಜ ಅಭಿವೃದ್ಧಿ ಹೊಂದಿದಂತೆ ಭಾಷೆಯೂ ಅಭಿವೃದ್ಧಿ ಹೊಂದುತ್ತದೆ; ಸಂಸ್ಕೃತಿ ಬದಲಾಗುತ್ತದೆ. ಸಂಸ್ಕೃತಿಯ ಪ್ರತೀಕವಾದ ಭಾಷೆ; ಮಾನವನ ಜೀವನ ಶೈಲಿ ಸಂಸ್ಕೃತಿ, ಆಚಾರ-ವಿಚಾರ, ಸಂಪ್ರದಾಯ ಬದಲಾದಂತೆ ಅದಕ್ಕೆ ಪೂರಕವಾಗಿ ಮಾನವನ ಭಾಷೆಯೂ ಬದಲಾವಣೆ ಹೊಂದುತ್ತ ಬರುತ್ತದೆ.

**ಅಧ್ಯಯನ ಉದ್ದೇಶ**

ಕರ್ನಾಟಕದಲ್ಲಿ ನೆಲೆಸಿರುವ ಬುಡಕಟ್ಟುಗಳಲ್ಲಿ ಸೋಲಿಗ ಸಮುದಾಯವು ತನ್ನದೇ ಆದ ಸಾಂಸ್ಕೃತಿಕ ಮತ್ತು ಭಾಷಿಕವಾದ ಮಹತ್ವದ ಸಂಗತಿಗಳನ್ನು ಒಳಗೊಂಡಿದೆ. ಈ ಸಮುದಾಯವು ಮಲೆಮಹದೇಶ್ವರ, ಬಿಳಿಗಿರಿರಂಗನಬೆಟ್ಟ, ಕೊಡಗು, ಹೆಗ್ಗಡದೇವನಕೋಟೆ ಮುಂತಾದ ಪ್ರದೇಶಗಳಲ್ಲಿ ವಾಸಿಸುತ್ತಿವೆ. ಇವರು ದಟ್ಟವಾದ ಕಾಡಿನಲ್ಲಿ ವಾಸವಾಗಿರುವುದರಿಂದ, ತಮ್ಮದೇ ಆದ ಪ್ರತ್ಯೇಕವಾದ ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಅವರ ಕನ್ನಡ ನುಡಿ ಬರಹದ ಭಾಷೆಗಿಂತ ತೀರ ಭಿನ್ನವಾದ ಕನ್ನಡ, ಹಾಗಾಗಿ ಇದೊಂದು ಉಪಭಾಷೆಯಾಗಿದೆ.

ಬುಡಕಟ್ಟು ಸಮುದಾಯವನ್ನು ಕುರಿತು ಭಾಷಿಕ ಅಧ್ಯಯನಗಳು ವಿವರಣಾತ್ಮಕ ಶೈಲಿಯಲ್ಲಿ ನಡೆದಿವೆ. ಆದರೆ ಸಮಾಜೋಭಾಷಿಕ ನೆಲೆಯಲ್ಲಿ ಅಧ್ಯಯನಗಳು ಆಗಿರುವುದು ತುಂಬ ವಿರಳ. ಈ ಹಿನ್ನಲೆಯಲ್ಲಿ ಸಮಾಜೋಭಾಷಿಕ ನೆಲೆಯಲ್ಲಿ ಸೋಲಿಗ ಕನ್ನಡವನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ಇವರು ಬಳಕೆ ಮಾಡುವ ಕನ್ನಡ ಒಂದೇ ರೀತಿಯಲ್ಲಿ ಇಲ್ಲ. ಸಮಯ ಸಂದರ್ಭಗಳಲ್ಲಿ ಬಳಕೆಯಾಗುವ ಕನ್ನಡ ನುಡಿ ರಚನೆ ಬೇರೆಯಾಗಿದೆ.

ಸೋಲಿಗರ ಭಾಷಿಕ ಅನನ್ಯತೆಯ ಕೆಲವು ಸಂಗತಿಗಳು ಅವರ ಸಂಸ್ಕೃತಿಯಲ್ಲಿ ಬಿಂಬಿತವಾಗಿದೆ. ಅವುಗಳು ಮೂಲ ಕನ್ನಡಕ್ಕೆ ಹತ್ತಿರವಾದವು. ಇವರ ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ, ನಿಷೇಧ ಮುಂತಾದವುಗಳ ಸಮಗ್ರ ರೂಪವನ್ನು ಅಧ್ಯಯನ ಮಾಡಿ ಭಾಷಿಕವಾದ ಅಂಶಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಭಾಷೆ ದಿನದಿಂದ ದಿನಕ್ಕೆ ಬದಲಾಗುವ ಸಾಮರ್ಥ್ಯವನ್ನು ಹೊಂದಿದೆ. ಇದು ಭಾಷೆಯ ಗುಣಧರ್ಮವು ಹೌದು. ಯಾವುದೇ ಒಂದು ಭಾಷೆಯನ್ನಾಡುವ ಜನರ ಸಂಸ್ಕೃತಿ ಬದಲಾದಂತೆ ಆ ಸಮುದಾಯದ ಭಾಷಿಕ ಸಂಗತಿಗಳು ಬದಲಾಗುತ್ತವೆ. ಇಂದೂ ಸೋಲಿಗರು ಆಧುನಿಕತೆಯ ಮುಕ್ತವಾಹಿನಿಗೆ ಕಾಲಿರಿಸಿದ್ದಾರೆ. ಹೀಗಾಗಿ ಅವರ ಭಾಷೆಯಲ್ಲಿಯೂ ಬದಲಾವಣೆ ಕಂಡುಬರುತ್ತದೆ. ಇವರ ಜೀವನಶೈಲಿ ಮತ್ತು ಸಂಸ್ಕೃತಿಯೊಂದಿಗೆ ಭಾಷೆಯು ಹೇಗೆ ಬದಲಾವಣೆಯ ರೂಪವನ್ನು ಪಡೆದುಕೊಂಡಿದೆ ಎಂಬುದರ ಬಗ್ಗೆ ಚರ್ಚಿಸಲಾಗಿದೆ.

ಸೋಲಿಗ ಭಾಷೆ ಮೂಲ ಕನ್ನಡದ ರೂಪಗಳನ್ನು ಉಳಿಸಿಕೊಂಡಿದೆ. ಅದನ್ನು ಹಳೆಯ ತಲೆಮಾರಿನವಲ್ಲಿ ಇಂದಿಗೂ ಉಳಿಸಿಕೊಂಡು ಬಂದಿದೆ; ಬರುತ್ತಲಿದೆ. ಹೀಗಾಗಿ ಕನ್ನಡದ ಉಪಭಾಷೆಯಾಗಿ ಪ್ರಾಚೀನ ಕನ್ನಡ ಭಾಷೆಯ ಅನೇಕ ಭಾಷಿಕ ಸಂಗತಿಗಳನ್ನು ತಿಳಿಯಪಡಿಸುತ್ತವೆ. ಸೋಲಿಗರು ಕನ್ನಡ ಭಾಷೆಯನ್ನು ಬೇರೆ ಬೇರೆ ಸಂದರ್ಭದಲ್ಲಿ ಬಳಸುವ ಮಾದರಿಗಳ ಬಗೆಗೆ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ. ಅಲ್ಲದೆ ಸೋಲಿಗ ಕನ್ನಡದ ಬಳಕೆಯ ನೆಲೆಗಳಾದ ಗಾದೆಗಳು, ಒಗಟುಗಳು, ಸಂಬೋಧನಾ ರೂಪಗಳು, ಸ್ಥಳನಾಮಗಳು, ವ್ಯಕ್ತಿನಾಮಗಳು ಮುಂತಾದ ವಲಯಗಳಲ್ಲಿ ಭಾಷೆಯ ಬಳಕೆಯ ಮಾದರಿಯ ವಿಶಿಷ್ಟತೆಗಳನ್ನು ಕುರಿತು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಹಾಗೆಯೇ ಸೋಲಿಗರು ತಮ್ಮದೇ ಆದ ಪಾರಂಪರಿಕ ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದಾರೆ. ಇವರು ಅಲೆಮಾರಿ ಜನಾಂಗದವರಾಗಿದ್ದು, ತಮ್ಮದೇ ಆದ ಕಾನೂನು ಕಟ್ಟಳೆಗಳನ್ನು ಹೊಂದಿದ್ದಾರೆ. ತಮ್ಮ ಆಹಾರಕ್ರಮ, ವಾಸದನೆಲೆ, ಹಬ್ಬ ಆಚರಣೆಗಳು, ದೈವನಾಮಗಳು, ನಂಬಿಕೆಗಳು ಮುಂತಾದವುಗಳ ಬಗೆಗೆ ಈ ಅಧ್ಯಯನದಲ್ಲಿ ಭಾಷಿಕವಾಗಿ ವಿವೇಚಿಸಲಾಗಿದೆ.

ಸೋಲಿಗರು ನೆಲೆಸಿರುವ ವಾಸಸ್ಥಳಗಳಿಗೆ 'ಪೋಡು' ಎಂದು ಕರೆಯುವರು. ಈ ಪೋಡಿನಲ್ಲಿ ಹತ್ತರಿಂದ ಹದಿನೈದು ಕುಟುಂಬಗಳು ನೆಲೆಸಿರುತ್ತವೆ. ಆದರೆ ಆ ಪೋಡುಗಳಿಗಿರುವ ಹೆಸರು ಅಲ್ಲಿಯ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ಇರುತ್ತವೆ. ಉದಾ: ಮಂಜಿಗುಂಡಿ ಪೋಡು, ಬಂಗ್ಲೆಪೋಡು, ಬುತಾಣಿಪೋಡು, ಗೊಂಬೆಗಲ್ಲುಪೋಡು, ಕೆರೆದಿಂಬಪೋಡು ಹೀಗೆ ಪೋಡುಗಳ ಕುರಿತಾಗಿ ವಿವರಣೆಯಿದೆ.

ಸಮಾಜ ಮತ್ತು ಭಾಷೆಯ ನಡುವೆ ಮಹತ್ತರವಾದ ಸಂಬಂಧವಿದೆ. ಆದ್ದರಿಂದ ಭಾಷೆ ಸಮಾಜದಲ್ಲಿ ತನ್ನದೇ ಆದ ರೂಪವನ್ನು ಪಡೆದುಕೊಂಡಿದೆ. ಹೀಗಾಗಿ ಭಾಷೆಯಿಲ್ಲದೆ ಸಮಾಜವನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯ. ಯಾವುದೇ ಒಂದು ಸಮಾಜದಲ್ಲಿ ಸಾಮಾಜಿಕ ಭಿನ್ನಾಂಶಗಳು ಗೋಚರಿಸುತ್ತವೆ. ವಿಭಿನ್ನ ವಯೋಮಿತಿಯ ಜನರು ಭಿನ್ನ ವೃತ್ತಿ ಮತ್ತು ಲಿಂಗಾಧಾರಿತ ಹಾಗೂ ಅಕ್ಷರಸ್ಥ-ಅನಕ್ಷರಸ್ಥ ವ್ಯಕ್ತಿಗಳ ನಡುವೆ ಇಂತಹ ಸಾಮಾಜಿಕ ಭಿನ್ನಾಂಶಗಳು ಗೋಚರಿಸುತ್ತವೆ. ಪ್ರತಿಯೊಂದು ಬುಡಕಟ್ಟುಗಳು ಭಾಷಾ ಬಳಕೆಯಲ್ಲಿ ವಿವಿಧ ಮಾದರಿಯಲ್ಲಿ ಬಳಸುತ್ತವೆ. ಅಂದರೆ ವ್ಯವಹಾರಿಕವಾದ ಮತ್ತು ಕೌಟುಂಬಿಕ ವಲಯದಲ್ಲಿ ತಮ್ಮದೆ ಆದ ಭಾಷೆಯನ್ನು ಬಳಕೆ ಮಾಡುತ್ತಾರೆ.

ಪ್ರಸ್ತುತ ಅಧ್ಯಯನದಲ್ಲಿ ಸೋಲಿಗರ ಆಚಾರ-ವಿಚಾರ, ಸಂಪ್ರದಾಯ, ನಂಬಿಕೆ, ಸಾಮಾಜಿಕತೆ, ಧಾರ್ಮಿಕತೆ, ವಿಧಿವಿಧಾನಗಳು, ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳು ನಡೆಯುವ ಬಗೆಗೆ ಸಾಂಸ್ಕೃತಿಕ ಅಂಶಗಳ ಬಗೆಗೆ ಮಹತ್ತರ ವಿಚಾರಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಸೋಲಿಗ ಬುಡಕಟ್ಟು ಸಮುದಾಯ ಬಳಸುವ ಭಾಷೆ, ಬರಹದ ಭಾಷೆಗಿಂತ ಭಿನ್ನವಾಗಿದೆ. ಅಲ್ಲದೆ ಹಳೆಗನ್ನಡ ಭಾಷೆಯ ಅನೇಕ ಅಂಶಗಳು ಸೋಲಿಗ ಕನ್ನಡದಲ್ಲಿ ಉಳಿದುಕೊಂಡಿದೆ. ಹೀಗಾಗಿ ಸೋಲಿಗರು ಬಳಸುವ ಮತ್ತು ಸೋಲಿಗರನ್ನು ಕುರಿತು ಬಳಸುವ ಕನ್ನಡದ ರಚನೆಗಳನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ಅಲ್ಲದೆ ಪ್ರಸ್ತುತ ಈ ಮಹಾಪ್ರಬಂಧದಲ್ಲಿ ವಿವರಣಾತ್ಮಕ ಮಾಹಿತಿಯನ್ನು ಆಧರಿಸಿ ಸಾಮಾಜಿಕವಾಗಿ ಅವರ ಕನ್ನಡದ ಬಳಕೆಯನ್ನು ಬೇರೆ ಬೇರೆ ನೆಲೆಗಳಲ್ಲಿ ಅಧ್ಯಯನ ಮಾಡಲಾಗಿದೆ.

**ವ್ಯಾಪ್ತಿ**

ಕರ್ನಾಟಕದಲ್ಲಿ ಸುಮಾರು ೬೦ ಕ್ಕಿಂತ ಅಧಿಕ ಬುಡಕಟ್ಟುಗಳು ನೆಲೆನಿಂತಿವೆ. ಇವುಗಳು ತಮ್ಮದೇ ಆದ ಸಾಂಸ್ಕೃತಿಕ ಚೌಕಟ್ಟಿನ ಅಡಿಯಲ್ಲಿ ಬದುಕುತ್ತಿವೆ. ಅವುಗಳಲ್ಲಿ ಸೋಲಿಗ ಬುಡಕಟ್ಟು ಸಮುದಾಯವು ಒಂದಾಗಿದ್ದು, ಹೆಚ್ಚಾಗಿ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲೂಕಿನ ಬಿಳಿಗಿರಿರಂಗನ ಬೆಟ್ಟದಲ್ಲಿ ಕಂಡುಬರುತ್ತಾರೆ. ಪ್ರಸ್ತುತ ಅಧ್ಯಯನವು ತನ್ನದೇ ಆದ ವ್ಯಾಪ್ತಿಯನ್ನು ಒಳಗೊಂಡಿದೆ. ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತಲಿರುವ ಹನ್ನೆರಡು ಪೋಡುಗಳಾದ ಬಂಗ್ಲೆಪೋಡು, ಪುರಾಣಿ ಪೋಡು, ಹೊಸಪೋಡು, ಕಲ್ಯಾಣಿಪೋಡು, ಮಂಜಿಗುಂಡಿಪೋಡು, ಯರಕನಗದ್ದೆ ಕಾಲೋನಿ, ಸೀಗೆಬೆಟ್ಟಪೋಡು, ಕೆರೆದಿಂಬಪೋಡು, ಸಂಪಿಗೆಪೋಡು, ಗೊಂಬೆಗಲ್ಲುಪೋಡು, ಕೆ.ಗುಡಿ, ಭೂತಾಣಿಪೋಡು, ಕೆ.ದೇವರಳ್ಳಿಪೋಡುಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ.

ದಟ್ಟವಾದ ಕಾಡು ಮತ್ತು ಬೆಟ್ಟಗುಡ್ಡಗಳಿಂದ ಆವರಿಸಿರುವ ಈ ಮೇಲಿನ ಪೋಡುಗಳ ಜನರು ನಾಗರಿಕ ಸಮಾಜದಿಂದ ದೂರ ಇದ್ದು, ತನ್ನದೇ ಆದ ಭಾಷಿಕ ಮತ್ತು ಸಾಂಸ್ಕೃತಿಕ ಚಹರೆಯಲ್ಲಿ ಬದುಕುತ್ತಿದ್ದಾರೆ. ಇವರ ಬದುಕಿನ ಜೀವನಶೈಲಿ ಭಿನ್ನವಾಗಿದ್ದು, ತಾವು ಮಾತನಾಡುವ ಭಾಷೆಯು ಸಹ ನಾಗರಿಕ ಸಮಾಜ ಬಳಸುವ ಭಾಷೆಗಿಂತ ವಿಶಿಷ್ಟವಾಗಿದೆ. ಆದ್ದರಿಂದ ಇವರು ಬಳಸುವ ಭಾಷೆಗೆ ಸೋಲಿಗ ನುಡಿ ಅಥವಾ ಸೋಲಿಗ ಕನ್ನಡ ಎಂದು ಕರೆಯಲಾಗಿದೆ.

ಈ ಅಧ್ಯಯನವು ಹೆಚ್ಚು ಕ್ಷೇತ್ರಕಾರ್ಯವನ್ನು ಒಳಗೊಂಡಿದೆ. ಅಲ್ಲಿನ ವಕ್ತೃಗಳನ್ನು ಭೇಟಿ ಮಾಡಿ ಅವರು ನೀಡಿದಂತಹ ಮಾಹಿತಿಯನ್ನು ಆಧಾರವಾಗಿ ಇಟ್ಟುಕೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಒಟ್ಟಿನಲ್ಲಿ ಇದುವರೆಗಿನ ವಿದ್ವಾಂಸರ ಚರ್ಚೆ ಮತ್ತು ಗ್ರಂಥಗಳ ಪರಮಾರ್ಶನ, ಕ್ಷೇತ್ರಕಾರ್ಯಗಳ ಮೂಲಕ ಇಲ್ಲಿಯ ಅಧ್ಯಯನವನ್ನು ಪೂರೈಸುವ ಪ್ರಯತ್ನವನ್ನು ಮಾಡಲಾಗಿದೆ.

**ಸ್ವರೂಪ**

ಮೂಲತಃ ಸೋಲಿಗ ಸಮುದಾಯವು ಅರಣ್ಯವಾಸಿ ಬುಡಕಟ್ಟು, ಇವರು ತಮ್ಮ ಬದುಕಿನ ನಿರ್ವಹಣೆಗಾಗಿ ಕಾಡನ್ನು ಹೆಚ್ಚು ಅವಲಂಬಿಸಿರುವುದು ಅಲ್ಲದೆ, ಭಾಷಿಕವಾಗಿ ವಿಶಿಷ್ಟವಾಗಿದೆ.

ಈ ಹಿನ್ನಲೆಯಲ್ಲಿ ಸಮಾಜೋಭಾಷಿಕ ನೆಲೆಯಲ್ಲಿ ಸಮಗ್ರವಾಗಿ ಅಧ್ಯಯನ ಮಾಡುವುದೇ ಈ ಮಹಾಪ್ರಬಂಧದ ಆಶಯ.

ಅಧ್ಯಯನದ ದೃಷ್ಟಿಯಿಂದ ಪ್ರಸ್ತುತ ಈ ಮಹಾಪ್ರಬಂಧವನ್ನು ಒಟ್ಟು ಆರು ಅಧ್ಯಾಯಗಳನ್ನಾಗಿ ವಿಭಾಗಮಾಡಿಕೊಳ್ಳಲಾಗಿದೆ. ಮುಖ್ಯವಾಗಿ ಈ ಅಧ್ಯಾಯಗಳು ಈ ಕೆಳಗಿನ ವಸ್ತು ವಿಷಯಗಳನ್ನು ಒಳಗೊಂಡಿವೆ.

ಮೊದಲನೆಯ ಅಧ್ಯಾಯವು ಒಟ್ಟಾರೆ ಮಹಾಪ್ರಬಂಧದ ತಾತ್ವಿಕ ನಿಲುವನ್ನು ಸ್ಥೂಲವಾಗಿ ವಿವರಿಸುತ್ತದೆ. ಇಲ್ಲಿ ಅಧ್ಯಯನದ ಉದ್ದೇಶ ವ್ಯಾಪ್ತಿ,ಸ್ವರೂಪ, ಸಮೀಕ್ಷೆ ಮತ್ತು ವೈಧಾನಿಕತೆಯನ್ನು ಕುರಿತಾಗಿದೆ. ಒಟ್ಟು ಸಂಶೋಧನೆಗೆ ಒಂದು ವಿಮರ್ಶಾತ್ಮಕ ಪ್ರವೇಶವನ್ನು ಒದಗಿಸಿಕೊಡುತ್ತದೆ.

ಎರಡನೆಯ ಅಧ್ಯಾಯದಲ್ಲಿ ಸೋಲಿಗರ ಐತಿಹಾಸಿಕ ಹಿನ್ನಲೆ ಮತ್ತು ಅಧ್ಯಯನ ಸಮೀಕ್ಷೆಯನ್ನು ವಿವರಿಸುತ್ತದೆ. ಇಲ್ಲಿ ಮುಖ್ಯವಾಗಿ, ಭೌಗೋಳಿಕ ಲಕ್ಷಣ, ಹುಟ್ಟು, ಪೌರಾಣಿಕ ಹಿನ್ನಲೆ, ಜೀವನ ಶೈಲಿ ಅವರ ವಾಸಸ್ಥಾನ, ಒಳಪಂಗಡಗಳು, ಕುಲಗಳು ಇಂತಹ ಸಂಗತಿಗಳನ್ನು ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಸೋಲಿಗ ಕನ್ನಡದ ಬಳಕೆಯ ನೆಲೆಗಳು ಯಾವ ಯಾವ ರೂಪಗಳಲ್ಲಿ ಬಳಕೆಯಾಗುವ ಬಗೆಯನ್ನು ನಿರೂಪಿಸಿದೆ. ಗಾದೆಗಳು, ಒಗಟುಗಳು, ಸಂಬೋಧನ ರೂಪಗಳು, ವ್ಯಕ್ತಿನಾಮಗಳ ಬಳಕೆ ಪರಂಪರೆ ಆಧುನಿಕ ಸಂದರ್ಭ, ಸ್ಥಳನಾಮಗಳು, ಇವರ ಭೌಗೋಳಿಕ ಪರಿಸರದ ಹಿನ್ನಲೆಯಲ್ಲಿ ರೂಪುಗೊಂಡಿದೆ. ಸೋಲಿಗರಲ್ಲಿ ಸಾಮಾನ್ಯವಾಗಿ ಒಂದು ಗುಂಪಿಗೂ ಒಂದು ದೈವವಿರುತ್ತದೆ. ಆದ್ದರಿಂದ ಅವರು ತಮ್ಮ ದೇವರ ಹೆಸರನ್ನು ಆಧರಿಸಿ ತನ್ನ ಹೆಸರುಗಳನ್ನು ಕರೆದುಕೊಳ್ಳುವ ಸಂಪ್ರದಾಯವಿದೆ. ಅಲ್ಲದೆ ಸ್ಥಳನಾಮಗಳನ್ನು ಭೌಗೋಳಿಕ ಪ್ರದೇಶ ವಿಶಿಷ್ಟತೆಯ ಹಿನ್ನಲೆಯಿಂದ ಕರೆದುಕೊಂಡಿರುವ ಪದ್ಧತಿ ಇವರಲ್ಲಿದೆ. ಅಲ್ಲದೆ ಗಾದೆಗಳು ಒಗಟುಗಳ ಮೂಲಕ ಸಮುದಾಯದ ಅಸ್ಮಿತೆಯನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಆಚರಣೆ ಮತ್ತು ಸಂಪ್ರದಾಯಗಳು, ಇಲ್ಲಿ ಸೋಲಿಗರು ತಾವು ಪಾರಂಪರಿಕವಾಗಿ ಆಚರಿಸುತ್ತಾ ಬಂದಿರುವ ಹಬ್ಬ ಹರಿದಿನಗಳು, ನಂಬಿಕೆಗಳು ಮತ್ತು ನಿಷೇಧಗಳ ಬಗೆಗೆ ಈ ಅಧ್ಯಾಯದಲ್ಲಿ ಚರ್ಚಿಸಿದೆ. ಸೋಲಿಗರು ತಮ್ಮ ದೈವಗಳ ಆಧಾರದ ಹಿನ್ನಲೆಯಲ್ಲಿ ಮೂಲ ದೈವ ಮತ್ತು ಕುಲದೈವಗಳಿಗೆ ನಡೆದುಕೊಳ್ಳುವುದು. ಈ ದೈವಗಳಲ್ಲದೆ ಆಧುನಿಕತೆಯ ಪ್ರಭಾವದಿಂದ ನಾಗರೀಕ ಸಮುದಾಯಗಳು ಆರಾಧಿಸುವ ದೈವಗಳ ಮೊರೆಹೋಗಿರುವ ಸಂದರ್ಭಗಳಿವೆ. ಅಲ್ಲದೆ ಇವರು ಆಚರಿಸುವ ಹಬ್ಬಗಳು ರೊಟ್ಟಿ ಹಬ್ಬ, ಹೊಸರಾಗಿ ಹಬ್ಬ, ಪೈರುಪೂಜೆ, ಮಾರಮ್ಮನ ಹಬ್ಬ, ದೊಡ್ಡಜಾತ್ರೆ, ಚಿಕ್ಕಜಾತ್ರೆ, ಮುಂತಾದವುಗಳನ್ನು ಆಚರಿಸುವ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಭಾಷಿಕ ಪರಿಸರ ಸೋಲಿಗರಲ್ಲಿ ತಲೆಮಾರುಗಳ ಆಧಾರದ ಮೇಲೆ ಭಾಷೆಯ ರಚನೆಯನ್ನು ಗುರುತಿಸಲಾಗಿದೆ. ಸೋಲಿಗರ ನುಡಿರಚನೆಯಲ್ಲಿ ವಚನ, ವಿಭಕ್ತಿ ಪ್ರತ್ಯಯ, ಸಂಖ್ಯಾವಾಚಕಗಳನ್ನು ಧ್ವನಿ ನಿಯಮವನ್ನು ಆಧರಿಸಿದ ವಿಷಯಗಳ ಸಾದರಪಡಿಸಲಾಗಿದೆ. ಮೂರು ತಲೆಮಾರುಗಳ ಅಂತರದಲ್ಲಿ ಭಾಷೆಯ ರಚನೆ ಮತ್ತು ಬಳಕೆಯ ನಡುವೆ ಆಗುವ ಬದಲಾವಣೆಯ ಕುರಿತು ಇಲ್ಲಿ ವಿವೇಚಿಸಲಾಗಿದೆ. ಹಾಗೆಯೇ ಸಾಮಾಜಿಕ-ನೆಲೆಗಳಲ್ಲಿ ಉಂಟಾಗುವ ಭಾಷಿಕ ಭಾಷೆಯ ರಚನೆಯನ್ನು ಸೋಲಿಗರ ನುಡಿಬೆರಕೆ ಮತ್ತು ನುಡಿ ಪಲ್ಲಟಗಳ ಕುರಿತಾಗಿದ್ದು ಆ ನುಡಿ ಬೆರೆಕೆಯು ಹೊಸ ತಲೆಮಾರಿನ ಸೋಲಿಗರಲ್ಲಿ ಕಂಡುಬರುತ್ತದೆ. ಅದು ಸೋಲಿಗ ಭಾಷೆಯಲ್ಲಿ ಯಾವ ರೀತಿ ಗೋಚರಿಸುತ್ತದೆ ಎಂಬುದರ ಬಗ್ಗೆ ಚರ್ಚಿಸಿದೆ.

ಅಧ್ಯಾಯ ಆರು ಇದು ಕೊನೆಯ ಅಧ್ಯಾಯವಾಗಿದ್ದು, ಸಮಾರೋಪ ಸಂಶೋಧನೆಯಲ್ಲಿ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ.

**ವೈಧಾನಿಕತೆ**

ಈಗಾಗಲೇ ಸೋಲಿಗರ ಕುರಿತಾಗಿ ಅಲ್ಪ ಸ್ವಲ್ಪ ಅಧ್ಯಯನಗಳಾಗಿವೆ. ಇಂತಹ ಅಧ್ಯಯನ ಗಳನ್ನು ಅಭ್ಯಸಿಸುವ ಮೂಲಕ ಅವುಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಸಮಾಜೋಭಾಷಿಕ ಅಧ್ಯಯನದ ವಿಧಾನವನ್ನು ಅಳವಡಿಸಿಕೊಂಡಿದೆ.

ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಭಾಷಾ ವೈಜ್ಞಾನಿಕ ಹಿನ್ನಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಅಧ್ಯಯನವು ಪೂರ್ಣ ಪ್ರಮಾಣದಲ್ಲಿ ಕ್ಷೇತ್ರಕಾರ್ಯದ ಮಾಹಿತಿಯೇ ಮುಖ್ಯವಾಗಿದ್ದು, ಕೆಲವು ಅನುಸಂಗಿಕ ಆಕರಗಳ ಮೂಲಕ ಭಾಷಿಕ ದತ್ತಾಂಶವನ್ನು ಸಂಗ್ರಹಿಸಿ ಅವುಗಳ ಮೂಲಕ ಅಧ್ಯಯನ ಮಾಡಲಾಗಿದೆ.

ಸಮಾಜೋಭಾಷಿಕ ನೆಲೆಯಲ್ಲಿ ಅಧ್ಯಯನ ಮಾಡುವುದು ಉದ್ಧೇಶವಾದ್ದರಿಂದ ಸಾಮಾಜಿಕ ಭಿನ್ನಾಂಶಗಳ ಆಧಾರದ ಮೇಲೆ ಅಂದರೆ, ವಯೋಮಾನ ಆಧಾರಿತ, ಅಕ್ಷರಸ್ಥ ಮತ್ತು ಅನಕ್ಷರಸ್ಥ ಮುಂತಾದ ಸಾಮಾಜಿಕ ದತ್ತಾಂಶಗಳನ್ನು ಪರಿಗಣಿಸಿ ಅಧ್ಯಯನ ಮಾಡಲಾಗಿದೆ.

ಅಲ್ಲದೆ ದತ್ತಾಂಶಗಳ ಸಂಗ್ರಹಣೆ ಅಗತ್ಯವಾದ ಪ್ರಶ್ನಾವಳಿಗಳನ್ನು ರಚಿಸಿ ಅದಕ್ಕೆ ಅನುಗುಣವಾಗಿ ಅಗತ್ಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಸೂಚಕರಿಂದ ಧ್ವನಿಮುದ್ರಣ ಮಾಡಿಕೊಂಡು ನಂತರ ಅವುಗಳನ್ನು ವಿಶ್ಲೇಷಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಸೋಲಿಗರು ಆಚರಿಸುವ ಆಚರಣೆಗಳಾದ ಹಬ್ಬ ಜಾತ್ರೆ ಧಾರ್ಮಿಕ ಆಚರಣೆ, ವಿಧಿವಿಧಾನ ನಂಬಿಕೆ ಮುಂತಾದವುಗಳನ್ನು ಅಧ್ಯಯನದಲ್ಲಿ ಸಂಗ್ರಹಿಸಲಾಗಿದೆ.

ಸೋಲಿಗರು ವಾಸವಿರುವ ಸ್ಥಳಗಳ ಚಾರಿತ್ರಿಕ ಹಿನ್ನಲೆ ಅವುಗಳ ಮಹತ್ವ ಮುಂತಾದ ಅಂಶಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಅಲ್ಲದೆ ಗಾದೆಗಳು, ಒಗಟುಗಳು,

ಸಂಬಂಧವಾಚಕಗಳು, ಸಂಬೋಧನರೂಪಗಳು, ಸ್ಥಳನಾಮಗಳು, ದೈವನಾಮಗಳ ಬಗೆಗೆ ಮಾಹಿತಿಯನ್ನು ಸಂಗ್ರಹಿಸಿ ಭಾಷಿಕವಾಗಿ ವಿಶ್ಲೇಷಿಸಲಾಗಿದೆ.

ಕಾಡಿನ ನಡುವೆ ಇರುವ ಸೋಲಿಗರ ಮಾತನಾಡುವ ಭಾಷೆಗೂ ನಗರದ ಆಸುಪಾಸಿನಲ್ಲಿ ನೆಲೆನಿಂತ ಸೋಲಿಗರ ಭಾಷೆಗಳ ನಡುವೆ ವ್ಯತ್ಯಾಸ ಕಂಡುಬರುತ್ತದೆ.

ಉದಾ:

ಸೋ.ನು: ನಿನು ಅವ್ವೆ ಚೆರಿಕು ಹೊನೆ ನನ್ನೊಡ್ಗ ಬರ್ಬೆಡ

ನೀನು ಅವ್ವನ ಜೊತೆಗೋಗು ನನ್ ಜೊತೆ ಬರಬೇಡ

ಸೋ.ನು: ಕಾಡ್ಗ ಒಯ್ತಿವಿ ಜೆನ ಕಿಲ್ದಕ. ನಿಮು ಬಂದರಾಯ

ಕಾಡಿಗೆ ಒಂಟೇವಿ ಜೇನು ಕೀಳೊಕೆ ನೀವು ಬರ್ತೀಯಾ

ಸೋನು: ನಮ್ಮಟ್ಟಿಗೆ ಬುಳ್ಕ ಇಲ್ಲೆ ಸಾ ದಾರಿಲ್ಲೆ ಸಾ

ನಮ್ಮ ಪೋಡಿಗೆ ಕರೆಂಟ್ ಇಲ್ಲಾ ಸಾರ್ ದಾರಿ ಇಲ್ಲಾ ಸಾರ್

ಹೀಗೆ ಸೋಲಿಗ ಸಮುದಾಯದ ಭಾಷಿಕ ಪರಿಸರ ವಿಶಿಷ್ಟವಾಗಿದೆ. ಕನ್ನಡ ನುಡಿ ಚರಿತ್ರೆಗೆ ಸೋಲಿಗ ಭಾಷಿಕ ಆಕೃತಿಗಳು ವಿಶಿಷ್ಟವಾದ ಕೊಡುಗೆಯಾಗಿದೆ. ಇವರು ಹಳೆಗನ್ನಡದ ಧ್ವನಿಗಳನ್ನು ಉಳಿಸಿಕೊಂಡಿರುವುದು ಕನ್ನಡದ ಮಹತ್ವದ ಸಾಮಾಜಿಕ ಉಪಭಾಷೆಯಾಗಿ ಕಂಡುಬರುತ್ತದೆ. ಸಮುದಾಯದ ಅನನ್ಯತೆಯನ್ನು ಗುರುತಿಸುವಂತಹ ಸಾಧನಗಳಲ್ಲಿ ಭಾಷೆಯು ಒಂದಾಗಿದೆ. ಭಾಷಿಕ ಆಕೃತಿಗಳ ಮೂಲಕ ಸೋಲಿಗ ಸಮುದಾಯವು ಒಂದು ದ್ವಿಭಾಷಿಕ ಸಮುದಾಯವಾಗಿದೆ. ಹೆಗೆಂದರೆ ಮನೆಯ ಆವರಣದಲ್ಲಿ ಸೋಲಿಗ ನುಡಿಯ ಬಳಕೆಯನ್ನು ಮಾಡುತ್ತಾರೆ. ಶೈಕ್ಷಣಿಕ ವಲಯದಲ್ಲಿ ಸೋಲಿಗ ಮಕ್ಕಳು ಸೋಲಿಗ ನುಡಿಯ ಮೂಲಕ ಕನ್ನಡವನ್ನು ಕಲಿಯುತ್ತಿದ್ದಾರೆ. ಸೋಲಿಗ ಕನ್ನಡ ನುಡಿಬಳಕೆ ಪರಿಸರ ಒಂದೇ ರೀತಿಯಲಿಲ್ಲ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಸೋಲಿಗರು ಮತ್ತು ತಲೆಮಾಲಿನವರು ಬಳಕೆ ಮಾಡುವ ಅನಿವಾರ್ಯತೆ ಇರುವುದರಿಂದ ಇವರ ಮೇಲೆ ಪ್ರಾದೇಶಿಕ ಒಳನುಡಿಯ ಪ್ರಭಾವವು ಆಗಿರುವುದು ಕಂಡುಬರುತ್ತದೆ.

# ಅಧ್ಯಾಯ-ಎರಡು

# ಸೋಲಿಗರ ಐತಿಹಾಸಿಕ ಹಿನ್ನೆಲೆ ಮತ್ತು ಅಧ್ಯಯನ ಸಮೀಕ್ಷೆ

# ಅಧ್ಯಾಯ–ಎರಡು

# ಸೋಲಿಗರ ಐತಿಹಾಸಿಕ ಹಿನ್ನೆಲೆ ಮತ್ತು ಅಧ್ಯಯನ ಸಮೀಕ್ಷೆ

## ೨.೧. ಭೌಗೋಳಿಕ ಲಕ್ಷಣ

ಭಾರತ ಅನೇಕ ಸಂಸ್ಕೃತಿಗಳ, ಬಹುಭಾಷೆಯ ವಿಭಿನ್ನ ಧರ್ಮಗಳ ನಾಡು. ಅಂತೆಯೇ ಕರ್ನಾಟಕ ರಾಜ್ಯವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದು, ಸಂಸ್ಕೃತಿಯ ಕುರುಹುಗಳೆನಿಸಿದ ಅನೇಕ ಬುಡಕಟ್ಟು ಸಮುದಾಯವನ್ನು ಹೊಂದಿದೆ. ಶಿಷ್ಟ ಸಮಾಜದಿಂದ ದೂರವಾಗಿದ್ದು, ನಾಗರಿಕ ಸಮಾಜಕ್ಕಿಂತ ಭಿನ್ನವಾದ ಜೀವನ ಕ್ರಮವನ್ನು ರೂಢಿಸಿಕೊಂಡು, ಬೆಟ್ಟ ಗುಡ್ಡಗಳಲ್ಲಿ ವಾಸಮಾಡಿಕೊಂಡು ತಮ್ಮದೇ ವಿಶಿಷ್ಟವಾದ ಸಮೂಹವನ್ನು ರೂಪಿಸಿಕೊಂಡಿರುವುದಕ್ಕೆ ಬುಡಕಟ್ಟು ಸಮುದಾಯವೆಂದು ಕರೆಯಲಾಗಿದೆ. ಇಂತಹ ಅನೇಕ ಬುಡಕಟ್ಟುಗಳಿಗೆ ಕರ್ನಾಟಕ ನೆಲೆಯಾಗಿದ್ದು, ಅವುಗಳಲ್ಲಿ ಪ್ರಮುಖವಾಗಿರುವ ಸೋಲಿಗ ಬುಡಕಟ್ಟು ಸಮುದಾಯವು ಒಂದಾಗಿದೆ. ಇವರನ್ನು ಆದಿವಾಸಿಗಳು, ಗಿರಿಜನರು, ಮೂಲ ನಿವಾಸಿಗಳೆಂದು ಕರೆಯುತ್ತಾರೆ. ಇವರು ಕರ್ನಾಟಕ ಮತ್ತು ತಮಿಳುನಾಡಿನ ಕೆಲವು ಜಿಲ್ಲೆಗಳಾದಂತಹ ನೀಲಗಿರಿ, ಪೆರಿಯಾರ, ಕೊಯಿಮತ್ತೂರು, ಸೇಲಂ ಮತ್ತು ಧರ್ಮಪುರಿ ಜಿಲ್ಲೆಗಳಲ್ಲಿ ಹರಡಿಕೊಂಡಿದ್ದಾರೆ. ಕರ್ನಾಟಕದ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಸೋಲಿಗರ ಒಟ್ಟಾರೆ ಜನಸಂಖ್ಯೆಯು ಶೇ ೯೦ ಜನರು ಇಲ್ಲಿಯೇ ಇದ್ದಾರೆ. ೧೯೮೧ ರ ಜನಗಣತಿಯ ಪ್ರಕಾರ ತಮಿಳುನಾಡಿನ ಸೋಲಿಗರ ಜನಸಂಖ್ಯೆ ೪೮೨೭. ತಮಿಳುನಾಡಿನಲ್ಲಿ ಇವರನ್ನು ಶೋಲಿಗ, ಸೋಲಿಗ, ಸೋಲಿಗಾರ ಮತ್ತು ಕಾಡು ಶೋಲಿಗಾರ ಎಂತಲೂ ಕರೆಯುತ್ತಾರೆ. ಇವರ ಮಾತೃಭಾಷೆ "ಶೋಲಿಗ ನುಡಿ" ಇತರರೊಂದಿಗೆ ಕನ್ನಡ ಮತ್ತು ತಮಿಳು ಭಾಷೆಯಲ್ಲಿ ಮಾತನಾಡುತ್ತಾರೆ.[೧] ದಟ್ಟವಾದ ಕಾಡಿನ ನಡುವೆ ವಾಸಿಸುತ್ತಿರುವುದರಿಂದ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿ ಸರ್ಕಾರದ ನಿರ್ಲಕ್ಷ್ಯಕ್ಕೆ

ಒಳಗಾಗಿರುವುದು ಕಂಡುಬರುತ್ತದೆ. ಅತ್ಯಂತ ಕಷ್ಟಕರವಾದ ಜೀವನವನ್ನು ನಡೆಸುತ್ತಿರುವ ಇವರು ಅನೇಕ ಸ್ವಯಂ ಸೇವಾ ಸಂಸ್ಥೆ ಮತ್ತು ಸರ್ಕಾರೇತರ ಸಂಸ್ಥೆಗಳ ಮೂಲಕ ಇತ್ತೀಚೆಗೆ ಸ್ವಲ್ಪ ಅಭಿವೃದ್ಧಿಯನ್ನು ಹೊಂದುತ್ತಿದ್ದು, ಸಮಾಜಮುಖಿ ಆಗುತ್ತಿದ್ದಾರೆ. ಹಿಂದೂಳಿದ ಜನಾಂಗವಾದ ಇವರು ತಮ್ಮ ವಿಶಿಷ್ಟ ಸಂಪ್ರದಾಯ, ಆಚಾರ, ವಿಚಾರಗಳು, ಮದುವೆ, ಮಂತ್ರ-ತಂತ್ರ ಬೇಸಾಯಕ್ರಮ, ಕೌಟುಂಬಿಕ ವ್ಯವಸ್ಥೆ ಮುಂತಾದವುಗಳಿಂದ ಒಂದು ಪ್ರತ್ಯೇಕ ಸಂಸ್ಕೃತಿಯನ್ನು ಹೊಂದಿ ಅವರದೇ ಆದ ಪ್ರತ್ಯೇಕ ಸಮಾಜದಂತೆ ಬದುಕುತ್ತಿದ್ದಾರೆ ದಟ್ಟವಾದ ಅರಣ್ಯದಲ್ಲಿ ನಾಡಿನ ಸಂಪರ್ಕದಿಂದ ದೂರ ಉಳಿದಿರುವ ಅವರ ಭಾಷೆ ಒಂದು ಭಿನ್ನಭಾಷೆ ಎನಿಸಿದೆ. ಸೋಲಿಗರು ದೈಹಿಕವಾಗಿ ಅಷ್ಟೇನೂ ಎತ್ತರವಿರದ ಕಂದು ಬಣ್ಣದ ದೇಹವನ್ನು ಹೊಂದಿದ್ದು, ಚಪ್ಪಟ್ಟೆ ಮೂಗು, ಗುಂಗುರು ಕೂದಲಿನಿಂದ ಕೂಡಿರುವ ಸೌಮ್ಯ ಸ್ವಭಾವದವರು. ಇವರು ಆರಂಭದಲ್ಲಿ ಕೆತ್ಲು ಬೇಸಾಯ ಅವಲಂಭಿಸಿ ವಲಸೆಯ ಜೀವನವನ್ನು ನಡೆಸುತ್ತಿದ್ದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಕಾಡಿನಲ್ಲಿ ಅಲೆಯುತ್ತಿದ್ದರು. ಆದರೆ ಇತ್ತೀಚೆಗೆ ಅರಣ್ಯ ಇಲಾಖೆಯು ಅರಣ್ಯ ಪ್ರವೇಶವನ್ನು ನಿರ್ಬಂಧಿಸಿದ್ದು. ಸರ್ಕಾರದಿಂದ ಮನೆಗಳನ್ನು ನಿರ್ಮಿಸಿಕೊಟ್ಟಿದ್ದು. ಒಂದು ಕಡೆ ನೆಲೆಸುವಂತೆ ನಿಬಂಧ ಹೇರಲಾಗಿದೆ. ಸೋಲಿಗರು ಕಿರು ಅರಣ್ಯ ಉತ್ಪನ್ನಗಳ ಸಂಗ್ರಹ ಮತ್ತು ಬೇಟೆಯಿಂದ ಜೀವನ ಸಾಗಿಸುವವರು. ಗೆಡ್ಡೆ ಗೆಣಸುಗಳನ್ನು ತಿಂದು ಜೀವನವನ್ನು ಹಾಗೆಯೇ ಕೆತ್ಲು ಬೇಸಾಯ ಮಾಡಿ ಜೀವನ ಸಾಗಿಸುವವರು. ಸೋಲಿಗರು ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ಕಂಡು ಬಂದರೂ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲೋಕಿನ ಬಿಳಿಗಿರಿರಂಗನ ಬೆಟ್ಟದ ಸೋಲಿಗರು ಮತ್ತು ಅದೇ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಮಹದೇಶ್ವರಬೆಟ್ಟದಲ್ಲಿ ನೆಲೆಸಿರುವ ಸೋಲಿಗರು ದಟ್ಟವಾದ ಅರಣ್ಯದಲ್ಲಿ ನೆಲೆಸಿರುವುದರಿಂದ ಇಂದಿಗೂ ತಮ್ಮ ಮೂಲ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಅಂತೆಯೇ ನಾಗರಿಕ ಸಮಾಜದಿಂದ ದೂರ ಉಳಿದಿರುವ ಇವರು ತಮ್ಮ ಭಾಷೆಯಲ್ಲಿರು ವೈವಿದ್ಯತೆಯನ್ನು ಉಳಿಸಿಕೊಂಡಿದ್ದು ಶಿಷ್ಟ ಭಾಷೆಗಿಂತ ಅದು ತೀರ ಭಿನ್ನವಾಗಿದೆ.

ಸೋಲಿಗರ ವಾಸಿಸುವಂತಹ ಮುಖ್ಯವಾದ ಸ್ಥಳವೆಂದರೆ ಬಿಳಿಗಿರಂಗನಬೆಟ್ಟ, ದಟ್ಟವಾದ ಕಾಡಿನ್ನು ಹೊಂದಿದ್ದು, ಇಲ್ಲಿ ಸೋಲಿಗ ಬುಡಕಟ್ಟು ಜನರ ವಿಭಿನ್ನ ಜೀವನ ಶೈಲಿಗೆ ಕಾರಣವಾಗಿದೆ. ಹಾಗೆಯೇ ನಾಗರೀಕ ಸಮಾಜದಿಂದ ಪ್ರತ್ಯೇಕವಾಗಿ ಜೀವಿಸಲು ಇಲ್ಲಿನ ದಟ್ಟವಾದ ಕಾಡು ಕಾರಣವಾಗಿದೆ. ಚಂಪಕಾರಣ್ಯವೆಂದು ಪ್ರಸಿದ್ಧವಾಗಿರುವ ಈ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನಲ್ಲಿ ಉತ್ತರ ಅಕ್ಷಂಶ ೧೧ ೫೩° ರಿಂದ ೧೨ ೩ ೧೫ ಮತ್ತು ಪೂರ್ವ ರೇಖಾಂಶ ೭೭ ೧೩ ೩೦ ರಿಂದ ೭೭ ೮ ೩೦ ರವರೆಗೆ ವಿಶಾಲವಾಗಿ ಹಬ್ಬಿದೆ. ಇಡೀ ಅರಣ್ಯವು ಪೂರ್ವ-ಪಶ್ಚಿಮವಾಗಿ ಸುಮಾರು ೬ ಮೈಲಿ ಅಗಲವಾಗಿದ್ದು, ದಕ್ಷಿಣ-

ಉತ್ತರವಾಗಿ ೧೦ ಮೈಲಿ ಉದ್ದವಾಗಿದೆ. ಈ ದಟ್ಟವಾದ ಅರಣ್ಯವು ಚಾಮರಾಜನಗರ, ಯಳಂದೂರು, ಕೊಳ್ಳೆಗಾಲ ತಾಲ್ಲೂಕುಗಳನ್ನು ಒಳಗೊಂಡಿದೆ. ಕೆಲವು ಕಡೆ ಬೆಟ್ಟಗಳನ್ನು ಹತ್ತಿ ಇಳಿದರೆ ತಮಿಳುನಾಡಿಗೆ ಹೋಗಬಹುದಾಗಿದೆ. ಬೇಸಿಗೆಯಲ್ಲಿ ಎಲೆ ಉದುರುವ ಸಸ್ಯಗಳನ್ನು ಒಳಗೊಂಡಿರುವ ಈ ಅರಣ್ಯವು ಮಳೆಗಾಲದಲ್ಲಿ ಹಚ್ಚ ಹಸಿರಿನಿಂದ ಕಂಗೊಳಿಸುತ್ತದೆ. ಬೇಸಿಗೆಯಲ್ಲಿ ತಂಪಾದ ಹಿತಕರ ಹವಾಮಾನದಿಂದ ಕೂಡಿದ್ದರೆ, ಚಳಿಗಾಲದಲ್ಲಿ ೮ ಸೆ.ಮೀ.ವರೆಗೂ ಉಷ್ಣಾಂಶ ಕಡಿಮೆಯಾಗಿ ವಿಪರೀತ ಚಳಿ ಇರುತ್ತದೆ. ವಾರ್ಷಿಕ ಸರಾಸರಿ ೫೪.೫೦ ಅಂಗುಲ ಮಳೆ ಬೀಳುತ್ತದೆ.[೨] ಇಲ್ಲಿ ಅನೇಕ ಬೆಲೆಬಾಳುವ ಮರಗಳಿವೆ. ಶ್ರೀಗಂಧ ತೇಗ, ಹೊನ್ನೆ, ಬೀಟೆ, ಮತ್ತಿ, ಹೆಬ್ಬೇವು, ಅರಳೆ ಮರಗಳು ಎತೇಚ್ಚವಾಗಿ ಬೆಳೆದಿವೆ. ಇಲ್ಲಿನ ಬೆಟ್ಟದ ನೆಲ್ಲಿಕಾಯಿ, ಸೀಗೆಕಾಯಿ, ಅಂಟುವಾಳ, ಬೆಟ್ಟದ ಸೀಬೆಕಾಯಿ, ಸುತ್ತಮುತ್ತಲಿನ ಪ್ರದೇಶಗಳಿಗೆ ಅಚ್ಚು–ಮೆಚ್ಚು. ಬಿದಿರು ಎತೇಚ್ಚವಾಗಿ ಬೆಳೆದಿದೆ. ಅದು ಕಾಗದದ ಕಾರ್ಖಾನೆಗಳಿಗೆ ಸರಬರಾಜಾಗುತ್ತದೆ. ಹಿಂದೆ ರಾಜ ಮಹಾರಾಜರು ಪ್ರಾಣಿ ಬೇಟೆಗಾಗಿ ಇಲ್ಲಿಗೆ ಆಗಮಿಸುತ್ತಿದ್ದಾರೆಂದು ಸ್ಥಳೀಯರು ಹೇಳುತ್ತಾರೆ. ಸಿಂಹವನ್ನು ಬಿಟ್ಟು ಉಳಿದೆಲ್ಲಾ ಪ್ರಾಣಿಗಳು ಇಲ್ಲಿ ಕಂಡಬರುತ್ತದೆ. ಇಲ್ಲಿ ಆನೆ, ಜಿಂಕೆ, ಕರಡಿ, ಮೊಲ, ಚಿರತೆ, ಹುಲಿ, ಕಡಬೆ, ಕಾಡೆಮ್ಮೆ, ನರಿ, ಹಂದಿ, ಕಾಡುಕೋಳಿ ಮುಂತಾದ ಪ್ರಾಣಿಗಳು ಕಂಡುಬರುತ್ತದೆ. ಆನೆಗಳು ಹೆಚ್ಚಾಗಿರುವ ಈ ಅರಣ್ಯವು ಆನೆಗಳ ಅಭಯಾರಣ್ಯವಾಗಿದೆ. ವಿಧವಿಧವಾದ ಹಾವುಗಳು ಇಲ್ಲಿ ಕಾಣಬಹುದು. ಈ ಪ್ರದೇಶವನ್ನು ಹುಲಿ ಅಭಯಾರಣ್ಯವನ್ನಾಗಿ ಮಾಡುವ ನಿಟ್ಟನಲ್ಲಿ ಯೋಜನೆಗಳು ರೂಪುಗೊಳ್ಳುತ್ತಿದ್ದು, ಅದಕ್ಕೆ ಕೇಂದ್ರ ಸರ್ಕಾರದ ಅನುಮತಿ ದೊರತಿದೆ. ಈ ಪ್ರದೇಶದಲ್ಲಿ 'ಮುಸುವ' ಎಂಬ ವಿಶಿಷ್ಟ ಕಪಿ ವರ್ಗವೂ ಇದೆ. ದಟ್ಟಾರಣ್ಯದ ನಡುವೆ ಶ್ರೀ ಬಿಳಿಗಿರಿರಂಗನಾಥಸ್ವಾಮಿಯ ಪುಣ್ಯಕ್ಷೇತ್ರವಿದ್ದು, ಅಪಾರ ಭಕ್ತರು ಇಲ್ಲಿಗೆ ಆಗಮಿಸುತ್ತಾರೆ. ಈ ಕ್ಷೇತ್ರದ ಆರಾಧ್ಯ ದೇವತೆಯಾದ  ಬಿಳಿಗಿರಿರಂಗಸ್ವಾಮಿಯ ದಿವ್ಯ ದರ್ಶನವನ್ನು ಪಡೆಯುತ್ತಾರೆ. ಈ ಕ್ಷೇತ್ರವು ಬೆಳ್ಳಿಕಲ್ಲ ಬೆಟ್ಟ ಎಂದು ಪ್ರಸಿದ್ಧವಾಗಿದೆ. ಈ ಪ್ರದೇಶವು ಪ್ರವಾಸಿಗರಿಗೆ ಅಚ್ಚುಮೆಚ್ಚಿನ ಪ್ರದೇಶವು ಆಗಿದೆ. ಹಚ್ಚ ಹಸಿರಿನಿಂದ ಕಂಗೊಳಿಸುವ ಈ ಕಾಡು ವಿದೇಶಿಗರನ್ನು ಕೈಬೀಸಿ ಕರೆಯುತ್ತಿದೆ. ಇಂತಹ ಗುಂಡಾರಣ್ಯದ ನಡುವೆ ಕಾಡು ಪ್ರಾಣಿಗಳ ಭಯದ ನೆರಳಲ್ಲೇ ಸೋಲಿಗ ಸಮುದಾಯದ ಜನರು ಜೀವನವನ್ನು ನಡೆಸುತ್ತಿರುವುದನ್ನು ಕಾಣುತ್ತೇವೆ.

ಚಾಮರಾಜನಗರ ಜಿಲ್ಲೆಯ ಭಾಗದಲ್ಲಿ ಬರುವಂತಹ ಪ್ರವಾಸಿ ಕೇಂದ್ರಗಳ ಪ್ರದೇಶಗಳಲ್ಲಿ ಸೋಲಿಗ ಬುಡಕಟ್ಟು ಸಮುದಾಯ ವಾಸವಾಗಿದ್ದಾರೆ.  ಈ ಪ್ರವಾಸಿ ಕೇಂದ್ರಗಳಾಗಿ ಚಾಮರಾಜನಗರ ಜಿಲ್ಲೆಯ ಭಾಗದ ಪ್ರದೇಶಗಳು ಹೆಚ್ಚು ಜನಪ್ರಿಯವಾಗಿವೆ. ಪ್ರವಾಸಿಗರು ಹೆಚ್ಚು ಹೆಚ್ಚು ಬಂದಂತೆ ಸೋಲಿಗ ಸಮುದಾಯಕ್ಕೆ ನಕಾರಾತ್ಮಕ ಮತ್ತು ಸಕಾರಾತ್ಮಕ ಎರಡು ರೀತಿ ಪರಿಣಾಮ ಬೀರುವುದನ್ನು ನೋಡಬಹುದಾಗಿದೆ. ಸಕಾರಾತ್ಮಕವಾಗಿ ಪ್ರವಾಸಿ ತಾಣಗಳಲ್ಲಿ ಸಣ್ಣ ಪುಟ್ಟ ವ್ಯಾಪಾರಕ್ಕಾಗಿ ಸೋಲಿಗ ಸಮುದಾಯ ತೆರೆದುಕೊಂಡಿರುವುದನ್ನು ಕಂಡುಬರುತ್ತದೆ. ಇದರಲ್ಲಿ ಸಾಮಾನ್ಯವಾಗಿ ಅರಣ್ಯದ

ಉತ್ಪನ್ನಗಳನ್ನು ಮಾರಾಟ ಮಾಡಿ ತಮ್ಮ ಜೀವನವನ್ನು ನಡೆಸುವುದರ ಜೊತೆಗೆ ಬೇರೊಂದು ಸಮುದಾಯದವರ ಜೊತೆ ಪರಸ್ಪರ ಒಡನಾಟ ಏರ್ಪಡುತ್ತದೆ. ಅಂತೆಯೇ ನಕಾರತ್ಮಕ ಪರಿಣಾಮಗಳೆಂದರೆ ಸೋಲಿಗ ಸಮುದಾಯದ ಮಕ್ಕಳು ಪ್ರವಾಸಿಗರ ಐಶಾರಾಮಿ ಜೀವನ ವಿಧಾನ, ಅವರ ನಡತೆ ಮತ್ತು ಅವರ ಒಂದು ವೇಷಭೂಷಣಗಳು ಮುಂತಾದವುಗಳ ಮೂಲಕ ತಮ್ಮದೇ ಸಮುದಾಯದ ಬಗ್ಗೆ ಕೀಳರಿಮೆ ಬೆಳಸಿಕೊಳ್ಳುವ ಸಾಧ್ಯತೆ ಇದೆ. ಅಂತೆಯೇ ನಗರದ ಆಕರ್ಷಣೆ ಹೆಚ್ಚಾಗಿ ಕಾಡುನ್ನು ತೊರೆದು ದುಡಿಯಲು ನಗರಗಳಿಗೆ ವಲಸೆ ಹೋಗುವ ಸಾಧ್ಯತೆಗಳೂ ಹೆಚ್ಚಾಗಿ ಕಂಡುಬರುತ್ತಿರುವುದನ್ನು ಗಮನಿಸಬಹುದಾಗಿದೆ. ಇಂತಹ ಪ್ರವಾಸಿ ತಾಣಗಳು ಇಲ್ಲಿ ನೋಡಬಹುದಾಗಿದೆ. ಬೂದಿಪಡಗ ವನ್ಯಜೀವಿ ವಿಶ್ರಾಂತಿ ಧಾಮ, ಬಿಳಿಗಿರಿರಂಗನ ಬೆಟ್ಟದಿಂದ ೨೫ ಕಿ.ಮಿ. ದೂರದಲ್ಲಿದೆ. ಕೆ.ಗುಡಿ. ಇಲಕ್ಕಿ ಪ್ರಕೃತಿಧಾಮ ಮತ್ತು ಜಂಗಲ್ ಲಾಡ್ಜ್ ಆನೆ ಸಫಾರಿ ಬಹಳ ಪ್ರಸಿದ್ದವಾಗಿದೆ. ಕೆ.ಗುಡಿ ದೇಶ ವಿದೇಶಗಳ ಪ್ರವಾಸಿಗರ ತಾಣವಾಗಿದೆ.

**ವಾಯುಗುಣ**

ಕರ್ನಾಟಕದ ವಾಯುಗುಣವು ಪ್ರದೇಶವಾರು ಏಕಮಾದರಿಯಲ್ಲಿ ಇಲ್ಲ ಜಿಲ್ಲೆಯಿಂದ ಜಿಲ್ಲೆಗೆ ವಾಯುಗುಣದಲ್ಲಿ ವೈಪರಿತ್ಯಗಳು ಕಂಡುಬರುತ್ತವೆ. ಅದೇ ರೀತಿ ಚಾಮರಾಜನಗರ ಜಿಲ್ಲೆಯ ವಾಯುಗುಣವು ಸಾಧಾರಣ ಸ್ಥಿತಿಯ ಮಾನ್ಸೂನ್ ವಾಯುಗುಣದಿಂದ ಕೂಡಿದೆ. ಇಲ್ಲಿ ಬಿಸಿಲು ಮತ್ತು ಚಳಿಗಾಲದಲ್ಲಿ ಹೆಚ್ಚಾಗಿ ಸೆಕೆ ಮತ್ತ ಚಳಿಯವಾತಾವರಣ ಕಂಡುಬರುತ್ತದೆ. ಇಲ್ಲಿಯ ಪಶ್ಚಿಮ ಭಾಗವು ಮಾನ್ಸೂನ್ ವಾಯುಗುಣ ಹೆಚ್ಚು ಮಳೆಯನ್ನು ಪಡೆಯುತ್ತವೆ. ಏಪ್ರಿಲ್ ತಿಂಗಳಲ್ಲಿ ದೈನಂದಿನ ಸರಾಸರಿ ಉಷ್ಣಾಂಶ. ೨೧.೪೦ ಗಳಷ್ಟಿರುತ್ತದೆ. ಅತ್ಯಂತ ಕೊರೆಯುವ ಚಳಿಯ ಮಾಸ ಡಿಸೆಂಬರ್ ಆಗಿದ್ದು, ಆ ತಿಂಗಳಲ್ಲಿ ಗರಿಷ್ಟ ಉಷ್ಣಾಂಶ ೨೭° ಡಿಗ್ರಿ ಸೆಲ್ಸಿಯಸ್ ಗಳಷ್ಟಿರುತ್ತದೆ. ವಾರ್ಷಿಕ ಮಳೆಯ ಪ್ರಮಾಣ ೬೭.೫೯ ಮಿ.ಲಿ ಮೀಟರ್. ವಾಸ್ತವಿಕ ಸರಾಸರಿ ಮಳೆ ಪ್ರಮಾಣ ೫೪೦ ಮಿ.ಮೀ ಹಾಗೂ ೯ ವೃಷ್ಟಿಮಾಪಕ ಕೇಂದ್ರಗಳು ಈ ತಾಲೂಕಿನಲ್ಲಿವೆ. ಬಿಳಿಗಿರಿರಂಗನಬೆಟ್ಟವು ಸಮುದ್ರಮಟ್ಟದಿಂದ ೫೮೯೦ ಅಡಿ ಎತ್ತರದಲ್ಲಿದೆ. ಚಳಿಗಾಲದಲ್ಲಿ ಚಳಿ ಹೆಚ್ಚಾಗಿದ್ದರೆ ಬೇಸಿಗೆಯಲ್ಲಿ ತಾಪ ಹೆಚ್ಚಾಗಿರುತ್ತದೆ. ವರ್ಷದಲ್ಲಿ ಸರಾಸರಿ ೫೪.೫೦ ಅಂಗುಲ ಮಳೆಯಾಗುತ್ತದೆ.ಇ ಹಚ್ಚಹಸಿರಾಗಿರುವಂತ ಈ ಕಾಡು ಬೇಸಿಗೆಯಲ್ಲಿ ಎಲೆಯುದುರಿ ಮರಗಳು ಬೋಳಾಗಿ ಕಾಣಿಸುತ್ತವೆ. ಎತ್ತ ನೋಡಿದರೂ ದಟ್ಟವಾದ ಕಾಡಿನಿಂದ ಆವೃತ್ತವಾಗಿದೆ. ಕಾಡಿನಲ್ಲಿ ತೇಗ. ಹೊನ್ನೆ, ಬೀಟೆ ಇತ್ಯಾದಿ ಬೆಲೆ ಬಾಳುವ ಕಾಡುಮರಗಳು ಸಸ್ಯಗಳು ಹೆಚ್ಚಾಗಿವೆ. ಸೋಲಿಗರು ಈ ದಟ್ಟಕಾಡಿನ ಮಧ್ಯೆ ಪೋಡುಗಳನ್ನು ಕಟ್ಟಿಕೊಂಡು ಕಾಡು ಪ್ರಾಣಿಗಳ ಭಯವಿದ್ದರೂ, ಸಾಹಸದಿಂದ ಬದುಕನ್ನು ಕಟ್ಟಿಕೊಂಡಿದ್ದಾರೆ. ಬಿಳಿಗಿರಿರಂಗನ ಬೆಟ್ಟದ ಸಾಲುಗಳ ಪೂರ್ವಘಟ್ಟಗಳ ಕೊನೆಗೊಳ್ಳುವ ತುದಿಯಾಗಿದೆ. ಇದು ಪೂರ್ವ ಪಶ್ಚಿಮ ಘಟ್ಟಗಳಿಗೆ ಸೇತುವೆಯಾಗಿದೆ. ಬಿಳಿಗಿರಿರಂಗನ ಬೆಟ್ಟದ

ಸಾಲುಗಳು ಮಲೆಮಾಹದೇಶ್ವರ ಬೆಟ್ಟ ಚಾಮರಾಜನಗರ ಜಿಲ್ಲೆಯ ವ್ಯಾಪ್ತಿಗೆ ಒಳಪಡುತ್ತದೆ. ಚಾಮರಾಜನಗರ ಜಿಲ್ಲೆಯು ಬೆಟ್ಟಗುಡ್ಡಗಳಿಂದ ಸಮೃದ್ಧವಾದ ಅರಣ್ಯ ಸಂಪತ್ತನ್ನು ಹೊಂದಿದೆ. ಬೆಟ್ಟಗುಡ್ಡ ಶ್ರೇಣಿಗಳೆಂದರೆ ಮಲೆಯೂರುಬೆಟ್ಟ, ಕರಿವರದರಾಯನಬೆಟ್ಟ, ಅರಕವಾಡಿಬೆಟ್ಟ, ಎಡಿಯೂರು ಬೆಟ್ಟ, ಯಡಬೆಟ್ಟ, ಎಣ್ಣೆಹೊಳೆ ಮಾದಪ್ಪನ ಬೆಟ್ಟ, ಅಣ್ಣ ತಮ್ಮಂದಿರ ಬೆಟ್ಟ, ಬಿಳಿಗಿರಿರಂಗನ ಬೆಟ್ಟ, ಕೊಂಗಳ್ಳಿಬೆಟ್ಟ, ದೊಡ್ಡಣೆ, ಗುಳಗುಡ್ಡ, ಹುಲುಗನ ಮುರಡಿಬೆಟ್ಟ, ಗೋಪಾಲಸ್ವಾಮಿ ಬೆಟ್ಟಗಳು ಕಂಡುಬರುತ್ತದೆ. ಚಾಮರಾಜನಗರ ತಾಲೂಕಿನ ಪೂರ್ವ ಆಗ್ನೇಯ ಭಾಗಗಳಲ್ಲಿ ಕುರುಚಲು ಕಾಡುಗಳಿವೆ. ಕೆಲವೆಡೆ ರಾಜ್ಯ ಅರಣ್ಯ, ಜಿಲ್ಲಾ ಅರಣ್ಯ ಮತ್ತು ಸಾಮಾಜಿಕ ಅರಣ್ಯಗಳನ್ನು ನಿರ್ಮಾಣ ಮಾಡಿ ನೆಡು ತೋಪುಗಳನ್ನು ಅಲ್ಲಲ್ಲಿ ಬೆಳೆಸಲಾಗಿದೆ. “ಅಪೂರ್ವ ಸಸ್ಯರಾಶಿಯನ್ನು ಪೋಷಿಸಿಕೊಂಡು ಬಂದಿರುವ ಇಲ್ಲಿನ ಬೆಟ್ಟ-ಗುಡ್ಡ ಅರಣ್ಯ ಪ್ರದೇಶಗಳು ವಿರಳ ಜಾತಿಯ ಪ್ರಾಣಿ ಪಕ್ಷಿಗಳನ್ನು ಪೋಷಿಸಿಕೊಂಡು ಬಂದಿವೆ. ಬಿಳಿಗಿರಿರಂಗನ ಬೆಟ್ಟದ ಹೊನ್ನೆಮೇಟಿ ಮುಂತಾದ ಕಡೆ ಅರಣ್ಯದಲ್ಲಿ ಸುಮಾಋ ೨೫೦ ಜಾತಿಯ ಪಕ್ಷಿಗಳನ್ನು ನೋಡಬಹುದಾಗಿದೆ. ಅಪಾರ ಔಷಧಿಯ ಸಸ್ಯಗಳು ಭಂಡಾರವನ್ನೇ ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದೆ. ಅನೇಕ ಗೆಡ್ಡೆಗೆಣಸು ಹಣ್ಣು ಹಂಪಲುಗಲೂ ಸಮೃದ್ಧವಾಗಿ ಬೆಳೆದಿರುವುದನ್ನು ಕಾಣಬಹುದು. ಸುಮಾರು ೧೪೦ ಕುಟುಂಬದ ೧೬೦೦ ವಿವಿಧ ಗಿಡಗಳನ್ನು ಈ ಬೆಟ್ಟದ ತಪ್ಪಲಿನಲ್ಲಿ ಕಾಣಬಹುದು. ಬೀಳಿಗಿರಿರಂಗನ ಬೆಟ್ಟದ ಸುತ್ತಮುತ್ತ ೪೭ ಹಳ್ಳಿಗಳಿದ್ದು, ಇಲ್ಲಿರುವವರು ಭಾಗಶಃ ಗಿರಿಜನರು. ಅದರಲ್ಲಿಯೂ ಸೋಲಿಗ ಸಮುದಾಯದವರು ಹೆಚ್ಚು ವಾಸವಿದ್ದಾರೆ. ಈ ಪ್ರದೇಶದ ಬಹುತೇಕ ಜನ ಅನಕ್ಷರಸ್ಥರಾಗಿದ್ದರೂ ನಾಗರೀಕತೆ ಬೆಳೆದಂತೆಲ್ಲಾ ಅನೇಕರು ವಿದ್ಯಾವಂತರಾಗಿ ಉದ್ಯೋಗ ಬಯಸಿ ಪಟ್ಟಣ ಸೇರಿದ್ದಾರೆ.

ಚಾಮರಾಜನಗರ ಜಿಲ್ಲೆಯ ಸೋಲಿಗರು ತಮ್ಮ ಸೋಲಿಗ ಭಾಷೆಯೊಂದಿಗೆ ಕನ್ನಡ ಭಾಷೆಯನ್ನು ಬಳಕೆ ಮಾಡುತ್ತಾರೆ. ಪಾಠ ಪ್ರವಚನ ಓದು ಬರಹ, ಕಲಿಕೆಯಲ್ಲಿ ಸೋಲಿಗ ನುಡಿಯಲ್ಲಿ ಕಲಿಕೆಯನ್ನು ಮಾಡವರು. ಜನಗಣತಿಯ ಪ್ರಕಾರ ಕರ್ನಾಟಕದಾದ್ಯಂತ ೨೫೦೦೦ ಜನಸಂಖ್ಯೆಯು ಕಂಡುಬರುತ್ತದೆ.೪ ಅದರಲ್ಲಿ ಸುಮಾರು ೮೦% ರಷ್ಟು ಸೋಲಿಗರು ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕಂಡುಬರುವರು. ಅವರ ಪ್ರಮುಖ ಕೇಂದ್ರಗಳು ಬಿಳಿಗಿರರಂಗನಬೆಟ್ಟ ಹಾಗೂ ಮಲೆಯಮಹದೇಶ್ವರ ಬೆಟ್ಟ, ಈ ಬೆಟ್ಟಗಳು ಎತ್ತರ ಪ್ರದೇಶಗಳಾಗಿದ್ದು ಅಲ್ಲಿನ ಭೌಗೋಳಿಕ ಪರಿಸರ ಸೋಲಿಗರ ಜೀವನ ನಿರ್ವಹಣೆಗೆ ಅನುಕೂಲಕರವಾಗಿದೆ. ಚಾಮರಾಜನಗರ ಅರಣ್ಯ ಪ್ರದೇಶಗಳಾದ ಬೆಡ್ರುಗಳಿ, ಕಾಡಿಗೆರೆ, ಗೊರಟ್ಟಿಗಳ್ಳಿಗಳಲ್ಲಿ ಕಾಫಿ, ಗೊಡಂಬಿ, ಕಿತ್ತಳೆ, ಏಲಕ್ಕಿ ಮೆಣಸು ಮುಂತಾದ ತೋಟದ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಬಿಳಿಗಿರಿರಂಗನ ಬೆಟ್ಟದ ಶ್ರೇಣಿಯಲ್ಲಿ ಕಂಡುಬರುವ ಕೆ.ಗುಡಿ, ಬೆಲವತ್ತ, ಮರಟೀಪಾಳ್ಯ,

ಹೊನ್ನೇಮೇಟಿ. ಕೆರೆದಿಂಬ ಪೊಡ, ಗೊಂಬೆಗಲ್ಲು ಪೋಡು ಕನ್ನೇರಕಾಲೋನಿ, ಭೂತಾಣಿ ಪೋಡು, ಬೆಡಗುಲಿ, ಹೊಸ ಪೋಡು, ಮಾರಿಗುಡಿ ಪೋಡು, ಕಾರನಜಡೆಯ ಪೋಡು, ಪುರಾಣಿ ಪೊಡು, ಯರಕನಗದ್ದೆಕಾಲೋನಿ, ಸೀಗೆಬೆಟ್ಟ ಕಾಲೋನಿ, ಬಂಗ್ಲೆ ಪೋಡು, ಮಂಜಿಗುಂಡಿ ಪೋಡು, ಕಲ್ಯಾಣಿ ಪೋಡು, ಇವು ಯಳಂದೂರ ತಾಲೂಕಿನ ವ್ಯಾಪ್ತಿಗೆ ಬರುತ್ತವೆ. ಈ ಸ್ಥಳಗಳಲ್ಲಿ ಬಹುತೇಕ ಸೋಲಿಗರು ನೆಲೆಸಿರುವುದನ್ನು ಕಾಣಬಹುದು. ಕೊಳ್ಳೇಗಾಲ ತಾಲೂಕಿನ ಮಲೆಯ ಮಹದೇಶ್ವರಬೆಟ್ಟ, ಗೊರಸಾನಿ, ಪಾಲರ, ಕೊಂಬುಡಿಕ್ಕಿ, ಆನೆವಾಲ ಈ ಸ್ಥಳಗಳಲ್ಲು ಸೋಲಿಗ ಸಮುದಾಯದವರು ಕಂಡುಬರುತ್ತಾರೆ. ಮೈಸೂರು ಜಿಲ್ಲೆಯ ಹುಣಸೂರು ತಾಲೂಕು, ಯಶೋಧಪುರ, ಹೆಗ್ಗಡದೇವನಕೋಟೆ ತಾಲೂಕು, ವಿರಾಜಪೇಟೆ, ಚಾಮರಾಜನಗರ ಜಿಲ್ಲೆಯಲ್ಲಿ ಅಷ್ಟೇ ಅಲ್ಲದೆ ಮೈಸೂರು ಜಿಲ್ಲೆಯ ಎರಡು ತಾಲೂಕುಗಳಲ್ಲಿ ಸೋಲಿಗರು ಅತಿ ಹೆಚ್ಚು ಕಂಡುಬರುತ್ತಾರೆ. ಇವರು ನಿಸರ್ಗದೊಡನೆ ಸೆಣಸುತ್ತ ಬದುಕುವಂತಹ ಶ್ರಮಜೀವಿಗಳು. ನಾಡಿನ ಸಂಪರ್ಕದೊಂದಿಗೆ ಇವರು ಬೆರೆಯಲು ಇಚ್ಛಿಸುವುದಿಲ್ಲ. ತಮ್ಮ ಸಂಸ್ಕೃತಿ ಮತ್ತು ಪ್ರಾಚೀನ ಪರಂಪರೆಯನ್ನು ರಕ್ಷಸಿಕೊಳ್ಳುವ ಕಾರಣಕ್ಕಾಗಿ ಇವರು ಬೇರೆಯವರೊಂದಿಗೆ ಬೆರೆಯುವದಿಲ್ಲ. ಆದರೆ ಆಧುನಿಕ ದಿನಗಳಲ್ಲಿ ಬೇರೆ ಬೇರೆ ಸಮುದಾಯದವರೊಂದಿಗೆ ಬೆರೆಯುವುದು ಅನಿವಾರ್ಯವಾಗಿದೆ. ಚಾಮರಾಜನಗರ ಜಿಲ್ಲೆಯ ವ್ಯವಸಾಯ ಪ್ರಧಾನ ಪ್ರದೇಶವಾಗಿದ್ದು, ಕೃಷಿಗೆ ಯೋಗ್ಯವಾದ ಕೆಂಪು ಮಿಶ್ರಿತ ಕಪ್ಪು ಮಣ್ಣು ಮತ್ತು ಮರಳು ಮಿಶ್ರಿತ ನುರುಜು ಮಿಶ್ರಿತ ಕೆಂಪು ಉಪ್ಪು ಮಣ್ಣು ಚೌಳು ಮಣ್ಣು ಮುಂತಾದ ವೈವಿಧ್ಯಮಯವಾದ ಮಣ್ಣನ್ನು ಹೊಂದಿದೆ.

**೨.೨. ಸೋಲಿಗ ಪದದ ಹುಟ್ಟು**

ಕರ್ನಾಟಕದ ಬುಡಕಟ್ಟುಗಳಲ್ಲಿ ತಮ್ಮ ಬುಡಕಟ್ಟಿನ ಹೆಸರಿನ ಕುರಿತಾಗಿ ತಮ್ಮದೇ ಆದ ಪಾರಂಪರಿಕ ಕುಲಕಸುಬುಗಳು ಅಥವಾ ಆಚರಣಾತ್ಮಕ ಹಿನ್ನಲೆಯಲ್ಲಿ ಉಗಮದಾಗುವುದರ ಬಗೆಗೆ ಕೆಲವೊಂದು ಐತಿಹ್ಯ ಅಥವಾ ದಂತ ಕಥೆಗಳ ಮೂಲಕ ನಿರೂಪಿಸುತ್ತವೆ ಅದೇ ರೀತಿ ಸೋಲಿಗ ಸಮುದಾಯವು ತಾವು ನೆಲೆನಿಂತ ಪ್ರಾದೇಶಿಕ ಹಿನ್ನಲೆಯಲ್ಲಿ ತಮ್ಮ ಬುಡಕಟ್ಟಿನ ಉಗಮವನ್ನು ಕುರಿತು ಮಾಹಿತಿಯನ್ನು ನೀಡುತ್ತವೆ. ಶೋಲಗ>ಶೋಲಿಗ>ಶೋಲಿಗಾರ್> ಸೋಲಿಗ ಹೀಗೆ ವಿವಿಧ ರೀತಿಗಳಲ್ಲಿ ಅವರ ಹೆಸರಿನ ಬಳಕೆಯಾಗಿದೆ. ಈ ಸೋಲಿಗ ಪದದ ಉತ್ಪತ್ತಿಯ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಡಾ. ಲೂಯಿಸ್ ರವರ ಪ್ರಕಾರ ಸೋಲಿಗ ಎನ್ನುವುದು ತಮಿಳಿನ ಶೋಲೈ ಆಗಿದೆ. ಶೋಲೈ ಎಂದರೆ ದಟ್ಟವಾದ ಕಾಡಿನಲ್ಲಿ ವಾಸಿಸುವ ಕಾರಣ ಈ ಹೆಸರು ಬಂದಿರುವ ಸಾಧ್ಯತೆ ಇದೆ. 'ಸೊಲ' ಎಂದರೆ ಬೆಟ್ಟ ಪ್ರದೇಶ ಮತ್ತು ಬಿದಿರು ತುಂಬಿದ ಕಾಡು ಎಂಬ ಅರ್ಥವೂ ಇದೆ.[3]

ಸೋಲಿಗ ಅಥವಾ ಸೋಲಿಗರು ಈ ಹೆಸರು ಹೇಗೆ ಬಂತು ಎಂಬುದಕ್ಕೆ ಸ್ವತ: ಸೋಲಿಗ ಸಮುದಾಯದಲ್ಲೇ ಉತ್ತರವಿಲ್ಲ. ಏಕೆಂದರೆ ಬಹಳಷ್ಟು ಸಂದರ್ಭಗಳಲ್ಲಿ ಒಂದು ಸಮುದಾಯದ

ಹೆಸರನ್ನು ಅನ್ಯರು ಸೂಚಿಸಿ ಅದನ್ನು ಬಳಸಿದ ಬಳಿಕ ಆ ಹೆಸರು ಅವರಿಗೆ ಖಾಯಂ ಆಗಿ ಉಳಿದಿರುವ ಸಾಧ್ಯತೆಗಳು ಹೆಚ್ಚು. ಒಟ್ಟಾರೆ ಸಮುದಾಯದ ಹಿರಿಯ ಯಜಮಾನ ಅಥವಾ ಅನುಭವಿಯೊಬ್ಬರನ್ನು ಈ ಕುರಿತು ವಿಚಾರಿಸಿದಾಗ ಅವರ ಹಿರಿಯರಿಂದ ತಿಳಿದುಕೊಂಡಿರುವ ಪೌರಾಣಿಕ ಕಥೆಯೊಂದನ್ನು ಹೇಳುವ ಮೂಲಕ ತಮ್ಮನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ಈ ಜಗತ್ತಿನ ಯಾವುದೇ ಸಮುದಾಯವನ್ನು ಕುರಿತು ಹೇಳುವಾಗ ಪೌರಾಣಿಕ ಮೂಲಗಳು ಬಹಳಷ್ಟು ಸಾರಿ ಕೇವಲ ಕಲ್ಪನೆ ಮಾತ್ರ ಎನ್ನದೇ ವಿಧಿಯಿಲ್ಲ. ಆದರ ಕೆಲವೊಮ್ಮೆ ಸತ್ಯಕ್ಕೆ ಹತ್ತಿರವಾದ ವಾಸ್ತವಾಂಶಗಳನ್ನು ಕಂಡುಕೊಳ್ಳುವುದು ಕಷ್ಟ ಸಾಧ್ಯ. ಆದ್ದರಿಂದ ಆ ಕುರಿತು ಹೆಚ್ಚು ಶ್ರಮ ವಹಿಸದೇ ಇರುವುದು ಒಳಿತು. ಭಾಷಾವಿಜ್ಞಾನಿಗಳು, ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಜಾನಪದ ಮತ್ತು ಬುಡಕಟ್ಟು ತಜ್ಞರುಗಳು ಅವರದೇ ಅಧ್ಯಯನ ಶಿಸ್ತಿನ ಹಾಗೂ ತಜ್ಞತೆಯ ಹಿನ್ನಲೆಯಲ್ಲಿ ವ್ಯಾಖ್ಯಾನಿಸಲು ಪ್ರಯತ್ನಿಸಿರುವುದರಿಂದ ಒಂದೊಂದು ದೃಷ್ಟಿಕೋನದಿಂದ ಅವೆಲ್ಲವೂ ಸರಿ ಎನಿಸುವುದುಂಟು.

ಎಂ.ಭೈರೇಗೌಡರು ಹೇಳಿರುವಂತೆ ಸೋಲಿಗರ ಮೂಲವನ್ನು ಕುರಿತು ಸೋಲಿಗರು ಮತ್ತು ಇರುಳಿಗರು ಒಂದೇ ತಾಯಿಯ ಮಕ್ಕಳಾಗಿದ್ದರೂ. ಕೆಲವು ಕಾರಣಾಂತರಗಳಿಂದ ಬೇರ್ಪಟ್ಟಿದ್ದಾರೆ ಎಂದು ತಿಳಿಸಿದ್ದಾರೆ. ಅವರು ಹೇಳುವಂತೆ ಸೋಲಿಗರು ಮತ್ತು ಇರುಳಿಗರು ಒಂದೇ ತಾಯಿಯ ಮಕ್ಕಳಾಗಿದ್ದು ಕಾರಯ್ಯ ಮತ್ತು ಬಿಲ್ಲಯ್ಯರನ್ನು ತನ್ನ ಮೂಲಪುರುಷರರೆಂದು ಒಪ್ಪಿಕೊಳ್ಳುತ್ತಾರೆ. ಕಾರಯ್ಯ ಬಿಲ್ಲಯ್ಯ ಎಂಬ ಸೋಲಿಗರ ಮತ್ತು ಇರುಳಿಗರ ಮೂಲಪುರುಷ ಈ ಹಿನ್ನಲೆಯಲ್ಲಿ ಗಮನಿಸಿದಾಗ ಸುಂಕಮ್ಮನ ಮಕ್ಕಳಾಗಿದ್ದು ಮಾದಪ್ಪನಿಗೆ ಬಿಕ್ಷೆಯಾಗಿ ನೀಡಿರುವುದನ್ನು ಸೋಲಿಗರು ಪುರಾಣಕಥೆಗಳಿಂದ ತಿಳಿದುಕೊಳ್ಳಬಹುದಾಗಿದೆ. ಡಾ. ಚಂದ್ರುಕಾಳೇನಹಳ್ಳಿ ಅವರು ಬೇಡಗಂಪಣ್ಣರು ಬಿಲ್ಲಯ್ಯನ ವಂಶಸ್ಥರು ಎಂತಲೂ ಸೋಲಿಗರು ಕಾರಯ್ಯನ ವಂಶಸ್ಥರು ಎಂತಲೂ ಹೇಳುತ್ತಾರೆ.

ಕೆ.ಕೆಂಪೇಗೌಡರು ಸೋಲಿಗರನ್ನು ಕುರಿತು ಭಾಷೆಯ ಹಿನ್ನಲೆಯಿಂದ ಈ ರೀತಿ ವ್ಯಾಖ್ಯಾನಿಸಿದ್ದಾರೆ. Soliga language structurally resembles Kannada than Tamil. Lexivally it resembles Tamil. Many are of the opinion that the Language of Soligas is the mixture of many south dravidin languages. While some other are of the opinion it is a Dialect of Kannada.[೬] ಹೀಗೆ ಸೋಲಿಗರ ಮೂಲವನ್ನು ಅಧ್ಯಯನಕಾರರು ಹೇಳಿದ್ದಾರೆ.

**೨.೩. ಪೌರಾಣಿಕ ಹಿನ್ನೆಲೆ**

ವ್ಯಕ್ತಿಗಳಿಗೆ ಮತ್ತು ಸ್ಥಳಗಳಿಗೆ ಮತ್ತು ಘಟನೆಗಳಿಗೆ ಸಂಬಂಧಿಸಿದ ಸತ್ಯವಾದ ಅಥವಾ ಕಾಲ್ಪನಿಕವಾದ ನಂಬಿಕೆಗಳನ್ನು ಒಳಗೊಂಡ ಕಥಾನಕಗಳನ್ನೆ ಪುರಾಣಗಳೆಂದು ಕರೆಯುತ್ತೇವೆ. ಪುರಾಣಕ್ಕೂ ಇತಿಹಾಸಕ್ಕೂ ಸಾಕಷ್ಟು ವ್ಯತ್ಯಾಸಗಳು ಕಾಣುತ್ತವೆ. ಪುರಾಣಗಳು ಪಾರಂಪರಾನುಗತವಾಗಿ ಬಂದಿರುವ ಕಥೆಯಾಗಿರುತ್ತವೆ. ಇದರಲ್ಲಿ ಬರುವ ಘಟನೆಗಳು ಕಾಲ್ಪನಿಕವಾಗಿರಬಹುದು ಅಥವಾ ನಿಜವಾಗಿರಬಹುದು. ಆದರೆ ಒಂದು ಘಟನೆ ಖಚಿತವಾಗಿ

ನಡೆದಿದೆ ಎಂಬುದನ್ನು ಆಧಾರಗಳಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾಗಿದೆ. ಪುರಾಣಗಳೆಂದರೆ ಬುಡಕಟ್ಟು ದೇವತೆಗಳಿಗೆ ಸಾಂಸ್ಕೃತಿಕ ವೀರರುಗಳಿಗೆ ಸಂಬಂಧಿಸಿದಂತೆ ಕಥೆಯಾಗಿರುತ್ತದೆ. ಒಂದು ದೇಶದ ಅಥವಾ ಒಂದು ಜನಾಂಗ ಅಥವಾ ಒಂದು ಬುಡಕಟ್ಟಿನ ಮೂಲವಾಗಿರುತ್ತದೆ. ಬುಡಕಟ್ಟುಗಳಲ್ಲಿ ಐತಿಹ್ಯ ಮತ್ತು ಪುರಾಣ ದಂತಕಥೆಗಳು ಬಹಳ ಪ್ರಮುಖ ಪಾತ್ರವಹಿಸುತ್ತವೆ. ಏಕೆಂದರೆ ಬುಡಕಟ್ಟು ಜನಜೀವನ ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿದೆ ಎಂಬುದರ ತಿಳುವಳಿಕೆಯನ್ನು ತಂದುಕೊಟ್ಟರೆ ಪುರಾಣ ಬುಡಕಟ್ಟಿನ ಅಸ್ತಿತ್ವಕ್ಕೆ ಅಗತ್ಯವಾದ ಕ್ರಿಯೆಯನ್ನು ಸೂಚಿಸುತ್ತದೆ.

ಆದ್ದರಿಂದಲೇ ತೀನಂ ಶಂಕರನಾರಾಯಣ ಅವರು ಒಂದು ಬುಡಕಟ್ಟಿನ ಬಗ್ಗೆ ತಿಳಿದುಕೊಳ್ಳಬೇಕಾದರೆ ಮೊದಲು ಆ ಬುಡಕಟ್ಟಿನ ಐತಿಹ್ಯ ಮತ್ತು ಪುರಾಣಗಳನ್ನು ತಿಳಿದುಕೊಳ್ಳಬೇಕು. ಏಕೆಂದರೆ ಬುಡಕಟ್ಟುಗಳು ತಮ್ಮ ಇತಿಹಾಸಕ್ಕಿಂತ ಪುರಾಣಗಳ ಮೇಲೆ ನಂಬಿಕೆ ಇಟ್ಟುಕೊಂಡಿರುತ್ತಾರೆ. ಆದ್ದರಿಂದಲೇ ಯಾವುದೇ ಒಂದು ಬುಡಕಟ್ಟಿನ ಹಿನ್ನಲೆಯ ಬಗ್ಗೆ ಕೇಳಿದರೂ ಪುರಾಣಗಳನ್ನೆ ಹೇಳುತ್ತಾರೆ.೭

ಹಾಗೆಂದ ಮಾತ್ರಕ್ಕೆ ಪುರಾಣಗಳೇ ಬುಡಕಟ್ಟು ಸಮುದಾಯಗಳ ಚರಿತ್ರೆಯನ್ನು ನಿರ್ಧರಿಸುವ ಮಾನದಂಡಗಳಲ್ಲ. ಕೆಲವು ಸಂದರ್ಭದಲ್ಲಿ ಇವು ಸೃಷ್ಟಿಕಥೆಗಳಾಗಿಯೂ ಕಂಡಬರುತ್ತದೆ.

ಉದಾ: ಒಂದಾನೊಂದು ಕಾಲದಲ್ಲಿ ಗಡಸಾಲೆ ಎಂಬ ಗುಡ್ಡದಲ್ಲಿ ಇಬ್ಬರು ಅಣ್ಣ ತಮ್ಮಂದಿರು ವಾಸವಾಗಿದ್ದರು. ಅಣ್ಣನ ಹೆಸರು ಕಾರಯ್ಯ, ತಮ್ಮನ ಹೆಸರು ಮಾದೇಶ್ವರ ಇವರಿಬ್ಬರೂ ಒಂದು ದಿನ ಅದೇ ಗುಡ್ಡದಲ್ಲಿದ್ದ ಸಾವಣನೆಂಬ ರಾಕ್ಷಸ ಕೈಗೆ ಸಕ್ಕಿದರು. ರಾಕ್ಷಸನು ಅವರನ್ನು ಕೊಲ್ಲದೆ, ಕಾರಯ್ಯನನ್ನು ಕಾಯುವುದಕ್ಕೂ ಮಾದೇಶ್ವರನನ್ನು ಮನೆ ಕೆಲಸಕ್ಕೂ ಬಳಸಿಕೊಂಡನು. ಒಂದು ದಿನ ಸಾವಣನೆಂಬ ರಾಕ್ಷಸನು ಮಾದೇಶ್ವರನನ್ನು ಕರೆದು ತನಗೆ ಒಂದು ಜೊತೆ ಜೋಡನ್ನು ಹೊಲಿದು ಕೊಡುವಂತೆ ಹೇಳಿದನು. ಮಾದೇಶ್ವರನಿಗೆ ಜೋಡು ಹೊಲೆಯುವುದಕ್ಕೆ ಬರುತ್ತಿರಲಿಲ್ಲ ಆದರೂ ಅವನು ನನ್ನನ್ನು ಬಂಧನದಿಂದ ಬಿಡುಗಡೆಮಾಡಿದರೆ, ಎಲ್ಲಿಯಾದರೂ ಹೋಗಿ ಆ ಕೆಲಸವನ್ನು ಕಲಿತು ನಿಮಗೆ ಜೋಡನ್ನು ಹೊಲೆದುಕೊಡುವೆ ಎಂದು ಹೇಳಿದನು. ಸಾವಣನು ಅದಕೊಪ್ಪಿ ಮಾದೇಶ್ವರನನ್ನು ಬಿಡುಗಡೆ ಮಾಡಿಕಳುಹಿಸಿದನು.

ಮಾದೇಶ್ವರನು ಅಲ್ಲಿಂದ ಕೃಷ್ಣದೇವರ ಬಳಿಗೆ ಬಂದು ತನ್ನ ಕಷ್ಟವನ್ನು ಹೇಳಿಕೊಂಡನು. ರಾಕ್ಷಸನಾದ ಸಾವಣನಿಂದ ಬಿಡುಗಡೆ ಹೊಂದುವ ಯಾವುದಾದರೂ ಉಪಾಯವನ್ನು ಸೂಚಿಸಬೇಕೆಂದು ಪ್ರಾರ್ಥಿಸಿಕೊಂಡನು. ಕೃಷ್ಣದೇವನು ಮಾದೇಶ್ವರನಿಗೆ ಮೊದಲು ಅರಗಿನಿಂದ ಅಂದವಾದ ಒಂದು ಜೊತೆ ಜೋಡನ್ನು ತಯಾರಿಸು. ನಂತರ ಅದನ್ನು ಸಾವಣನಿಗೆ ಒಪ್ಪಿಸುವ ಮೊದಲು ಆ ರಾಕ್ಷಸನಿರುವ ಸ್ಥಳದ ಸುತ್ತ ಮುತ್ತಲೂ ಇರುವ ಬಂಡೆಗಳು ಚೆನ್ನಾಗಿ ಕಾದಮೇಲೆ

ಜೋಡನ್ನು ಸಾವಣನಿಗೆ ಕೊಡು ಎಂದರು ಮಾದೇವ ಮಾದೇಶ್ವರನು ಅಂತೆಯೇ ಅರಗಿನಿಂದ ಒಂದು ಜೊತೆ ಜೋಡನ್ನು ಮಾಡಿ, ನಂತರ ಬಂಡೆಗಳ ಮೇಲೆ ಮರದ ದಿಮ್ಮಿಗಳನ್ನು ಒಟ್ಟಿ ಅವನ್ನೆಲ್ಲಾ ಚೆನ್ನಾಗಿ ಸುಟ್ಟನು. ಬಂಡೆಗಳು ಕಾದಿರುವುದನ್ನು ಗೊತ್ತಾಗದಂತೆ ಬೂದಿಯನ್ನು ತೆಗೆದು ಚೊಕ್ಕಟ್ಟಮಾಡಿದನು. ಅನಂತರ ಸಾವಣನು ವಾಸಿಸುತ್ತಿದ್ದ ಗುಹೆಗೆ ಹೋಗಿ, ತಾನು ಮಾಡಿಕೊಂಡು ಬಂದಿದ್ದ ಜೋಡನ್ನು ಅವನಿಗೆ ಒಪ್ಪಿಸಿದನು ಆ ಜೋಡುಗಳನ್ನು ನೋಡಿ ಸಾವಣನಿಗೆ ತುಂಬಾ ಸಂತೋಷವಾಯಿತು. ಅವನ್ನು ಧರಿಸಿಕೊಂಡು ಅವನ ಹತ್ತಿರವಿದ್ದ ಬಂಡೆಯಮೇಲೆ ನಡೆದಾಡಿದನು. ಬಂಡೆಯ ಶಾಖಕ್ಕೆ ಅರಗಿನ ಜೋಡುಗಳು ಸುಟ್ಟು ಕರಗಿಹೋದವು. ಶಾಖವು ರಾಕ್ಷಸನ ಕಾಲಿಗೂ ವ್ಯಾಪಿಸಿ ಕಾಲುಗಳು ಸುಟ್ಟು ಹೋಗಲು, ಸಾವಣನು ಬಂಡೆಯ ಮೇಲೆ ಬಿದ್ದುಬಿಟ್ಟನು. ಇದನ್ನೇ ಕಾಯುತ್ತಿದ್ದ ಅವನ ಶತ್ರುಗಳು ಸಾವಣನ ಮೇಲೆ ಕಲ್ಲುಹಾಕಿ ಅವನನ್ನು ಕೊಂದರು.

ತಮ್ಮನನ್ನು ಬಂಧಿಸಿಟ್ಟಿದ್ದ ಸಾವಣನನ್ನು ತಾನು ಕೊಂದ ಸಂತೋಷದ ವಿಷಯವನ್ನು ತಿಳಿಸಲು ಮಾದೇಶ್ವರನು ಅಣ್ಣ ಕಾರಯ್ಯನ ಬಳಿಗೆ ಓಡಿದನು. ತುಂಬ ಹೆಮ್ಮೆಯಿಂದ ನಡೆದ ಸಂಗತಿಯನ್ನೆಲ್ಲಾ ಬಣ್ಣಿಸಿದನು. ಆದರೆ ಇದರಿಂದ ಕಾರಯ್ಯನಿಗೆ ಸಂತೋಷವೇನೂ ಆಗಲಿಲ್ಲ. ತಮ್ಮನ್ನು ಸಾಕುತ್ತಿದ್ದ ಸಾವಣನನ್ನು ತಮ್ಮನು ಮೋಸದಿಂದ ಕೊಂದದ್ದು ಅವನಿಗೆ ಬೇಸರ ಉಂಟುಮಾಡಿತು. ಅಷ್ಟೇ ಅಲ್ಲದೆ ಇಂತಹ ಕಾರ್ಯ ಮಾಡುವಾಗ ಹಿರಿಯನಾದ ತನ್ನ ಸಲಹೆಯನ್ನೂ ಕೇಳದ ಬಗ್ಗೆ ಅವನಿಗೆ ಮಾದೇಶ್ವರನ ಮೇಲೆ ಕೋಪವೇ ಬಂತು. ತಮ್ಮನಿಗೆ ಸರಿಯಾದ ಶಿಕ್ಷೆ ಮಾಡಬೇಕೆಂದು ಅವನು ಕತ್ತಿ ಹಿರಿದು ಮಾದೇಶ್ವರನ ಕಡೆಗೆ ನುಗ್ಗಿದನು. ಮಾದೇಶ್ವರನು ಭಯಗೊಂಡು ಓಡಲು ಪ್ರಾರಂಭಿಸಿದನು. ಕಾರಯ್ಯನೂ ಓಡುತ್ತಾ ಅವನನ್ನು ಹಿಂಬಾಲಿಸಿದನು. ಮಾದೇಶ್ವರನು ಮೊದಲು ಉರುಮಲೆಗೆ ಓಡಿದನು. ಕಾರಯ್ಯನು ಅಲ್ಲಿಗೂ ಬರಲು, ಅಲ್ಲಿಂದ ಎಗ್ಗಾರಮಲೆಗೆ ಓಡಿದನು. ಕಾರಯ್ಯನು ಅಲ್ಲಿಗೂ ಬೆನ್ನಟ್ಟಿದಾಗ ಮಾದೇಶ್ವರ ಬೆಟ್ಟಕ್ಕೆ ಹೋಗಿ ಅಲ್ಲಿ ಒಂದು ಗುಹೆಯಲ್ಲಿ ಅವಿತುಕೊಂಡನು. ಕಾರಯ್ಯನು ಅಲ್ಲಿಯೂ ಬಿಡದೆ ಹಿಂದೆಯೇ ಬಂದು, ಮಾದೇಶ್ವರನು ಅವಿತು ಕೊಂಡಿದ್ದ ಗುಹೆಯ ಬಾಗಿಲಿಗೆ ಕುರಿ ಮಂದೆಯನ್ನು ಅಡ್ಡ ಹಾಕಿ ಒಬ್ಬ ಕುರುಬನನ್ನು ಕಾವಲು ಹಾಕಿದನು. ಇದರಿಂದ ಗುಹೆಗೆ ದುರ್ವಾಸನೆ ವ್ಯಾಪಿಸಿ, ಮಾದೇಶ್ವರನಿಗೆ ಒಳಗೆ ಉಸಿರಾಡುವುದೇ ಅಸಾಧ್ಯವಾಯಿತು. ಅವನು ಹೊರಗೆ ಬಂದು ಅಣ್ಣನ ಕ್ಷಮೆ ಬೇಡಿದನು. ತನು ಅಣ್ಣ ಕಾರಯ್ಯ ಪ್ರತಿಮೆ ಮಾಡಿಸಿ ಪೂಜಿಸುವುದಾಗಿ ಆಣೆ ಇಟ್ಟನು. ಕಾರಯ್ಯನ ಕೋಪ ಶಮನವಾಗಿ ಅವನು ತಮ್ಮನನ್ನು ಕ್ಷಮಿಸಿದನು. ಮಾದೇಶ್ವರನ ಬೆಟ್ಟ ಹತ್ತುವ ಮಾರ್ಗದಲ್ಲಿ ಕಾರಯ್ಯನ ಮೂರ್ತಿ ಇದೆ. ಬೆಟ್ಟಕ್ಕೆ ಹೋಗುವ ಯಾತ್ರಿಕರು ಮೊದಲು ಕಾರಯ್ಯನಿಗೆ ಪೂಜೆ ಸಲ್ಲಿಸುವರು. ಈ ಪದ್ಧತಿ ಇಂದಿಗೂ ನಡೆದುಕೊಂಡು ಬಂದಿದೆ. ಈ ಕಾರಯ್ಯನ ಮಕ್ಕಳೆ ಸೋಲಿಗರು ಹೀಗೆ ಒಂದು ಪುರಾಣ ಕಥೆಯನ್ನು ನೋಡಬಹುದಾಗಿದೆ.

ಒಮ್ಮೆ ಪಾರ್ವತಿ ಮತ್ತು ಪರಮೇಶ್ವರರು ತಮ್ಮ ಬೆವರಿನಿಂದ ಎರಡು ಬೊಂಬೆಗಳನ್ನು ಮಾಡಿ ಅವಕ್ಕೆ ಜೀವ ತುಂಬಿದ್ದರು. ಒಂದು ನೀಲಯ್ಯನಾಯಿತು, ಇನ್ನೊಂದು ಸಂಕಮ್ಮನಾಯಿತು. ಮುಂದೆ ವಂಶ ಇವರಿಂದ ಬೆಳೆಯಿತು, ಈ ಮಕ್ಕಳು ಸೋಲನ ಗೆಡ್ಡೆಯನ್ನು ಕಿತ್ತು ತಿಂದು ಜೀವಿಸುತ್ತಿದ್ದರು. ಹಾಗೆಯೇ ಅವರು ಗೆಡ್ಡೆಯನ್ನು ಕಿತ್ತು ಸುಟ್ಟು ತಿನ್ನುತ್ತಲೆ ಮುಪ್ಪಾದರು ಆದರೆ ಸೋಲನ ಹಂಬು ಮಾತ್ರ ಮತ್ತೆ ಮತ್ತೆ ಚಿಗುರಿ ಹೊಸ ಗೆಡ್ಡೆ ಬಿಟ್ಟಿತು. ಈ ಮುದುಕ ಒಮ್ಮೆ ಗೆಡ್ಡೆ ಕೀಳಲು ಬಂದಾಗ ಆ ಸೋಲನ ಹಂಬು ನಿನ್ನ ಕೈಯಿಂದ ನನ್ನ ಗೆಡ್ಡೆಯನ್ನು ಸಾಯುವರೆಗೂ ಕಿತ್ತರೂ ನನ್ನ ಸೋಲಿಸಕ್ಕೆ ಆಗಲ್ಲ. ಆದ್ದರಿಂದ ನನ್ನ ಗೆಡ್ಡೆಯನ್ನು ಕಿತ್ತು ಸೋತವನು ನೀನು ಸೋಲಿಗ ಎಂದು ಹೇಳಿತು. ಸೋಲನ ಗೆಣಸು ತಿನ್ನುತ್ತಿದ್ದುದರಿಂದ ಈ ಜನರಿಗೆ ಸೋಲಿಗರು ಎಂದು ಹೆಸರು ಬಂತು ಎಂಬುವುದು ಇವರ ಅಭಿಪ್ರಾಯವಾಗಿದೆ. ಇದೊಂದು ಐತಿಹ್ಯವೆ ಹೊರತು ಸತ್ಯಕ್ಕೆ ಹತ್ತಿರವಾದುದಲ್ಲ.

ಹಾಗೆಯೇ ಮತ್ತೊಂದು ಪೌರಾಣಿಕ ಕತೆಯನ್ನು ಕೇಳಿದಾಗ "ಪಾರ್ವತಿ ಪರಮೇಶ್ವರರಿಂದ ನೀಲಯ್ಯ ಮತ್ತು ನಿಜಗೆಂಪಯರ ಜನನವಾಗಿ ಮಹದೇಶ್ವರನ ದಯೆಯಿಂದ ಕಾರಯ್ಯ, ಬಿಲ್ಲಯ್ಯರು ಹುಟ್ಟಿದರು. ಅವರಿಂದ ವಂಶಾಭಿವೃದ್ಧಿಯಾದ ಮೇಲೆ ಈ ಗುಂಪಿನ ಜನರಿಗೆ ಒಬ್ಬ ರಾಜನಿದ್ದ. ಅವನು ಒಮ್ಮೆ ಶತ್ರು ರಾಜರ ವಿರುದ್ದ ಯುದ್ದ ಮಾಡಬೇಕಾಗಿ ಬಂತು. ಆ ಯುದ್ದದಲ್ಲಿ ಪರಾಜಿತನಾಗಿ ಜೀವ ರಕ್ಷಣೆಗೆಂದು ತನ್ನ ಪರಿವಾರದೊಡನೆ ಕಾಡಿಗೆ ಓಡಿಹೋದನು. ಅವನು ಯುದ್ಧದಲ್ಲಿ ಸೋತದ್ದರಿಂದ ಸೋಲು ರಾಜನೆಂದು ಹೆಸರಾಯಿತು" ಹಾಗಾದರೆ ಆ ರಾಜನ ಹೆಸರೇನು? ಯಾವ ಕಾಲ ಘಟ್ಟದಲ್ಲಿ ಈ ಯುದ್ಧ ಜರುಗಿತು ಎಂಬುದಕ್ಕೆ ಯಾವುದೇ ಆಧಾರಗಳಿಲ್ಲ ಅಥವಾ ಮೌಖಿಕ ಸಾಹಿತ್ಯ ರೂಪದಲ್ಲೂ ಈ ಸಂಬಂಧ ಸುಳಿವು ಸಿಗುವುದಿಲ್ಲ. ಆದ್ದರಿಂದ ಇದನ್ನು ಒಪ್ಪುವುದು ಸಾಧ್ಯವಿಲ್ಲ.

ಇನ್ನೊಂದು ಮಾಹಿತಿಯ ಪ್ರಕಾರ ಈ ಗುಂಪಿನ ಜನರಿಗೆ ಒಬ್ಬ ರಾಜನಿದ್ದ. ಅವನು ಒಮ್ಮೆ ತನ್ನ ಶತ್ರುರಾಜರ ವಿರುದ್ಧ ಯದ್ಧ ಮಾಡುವಾಗಿ ಸೋತು ಪ್ರಾಣ ರಕ್ಷಣೆಗೋಸ್ಕರ ತನ್ನ ಪರಿವಾರದೊಂದಿಗೆ ಕಾಡಿಗೆ ಓಡಿಹೋದ. ಯುದ್ದದಲ್ಲಿ ಸೋತ ಕಾರಣ ಸೋಲುರಾಜ ಎಂದು ಹೆಸರಾಯಿತು. ಅವನ ವಂಶಸ್ಥರಿಗೆ ಸೋಲಿಗರು ಎಂಬುದೇ ಮುಂದುವರಿದು ಸೋಲಿಗರಾದರು. ಇದಕ್ಕೆ ಯಾವುದೇ ತೆರನಾದ ಐತಿಹಾಸಿಕ ಆಧಾರಗಳಿಲ್ಲ. ಆದ್ದರಿಂದ ಇದು ನಿಜವೆಂದು ನಂಬುವಂತಿಲ್ಲ. ಸಾಮಾನ್ಯವಾಗಿ ಸೋಲಿಗರು ಗಂಡುಮಕ್ಕಳಿಗೆ ಹೆಸರನ್ನಿಡುವಾಗ ಅವರ ಹೆಸರಿನ ಮುಂದೆ 'ಗೌಡ' ಎಂಬುದನ್ನು ಸೇರಿಸುವುದುಂಟು. ಅಂದರೆ ಈ ಪದದ ಅರ್ಥ ಗ್ರಾಮದ ಮುಖ್ಯಸ್ಥ ಎಂದಿದೆ. ಮೂಲದಲ್ಲಿ ಗಾವುಂಡ ಎಂದಾಗಿತ್ತು. ಅನಂತರದಲ್ಲಿ ಗೌಡ ಆಗಿದೆ ಎಂಬುದು ಭಾಷಾತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ಸಂಬಂಧ ವಿಚಾರ ಮಾಡಿದಾಗ ಸೋಲಿಗರು ಗೌಡ

ಎಂಬ ಹೆಸರನ್ನಿಟ್ಟುಕೊಳ್ಳಬೇಕಾದರೆ ಇವರು ಈ ಮೊದಲು ಜೀವರಕ್ಷಣೆ ದೃಷ್ಟಿಯಿಂದ ಅಥವಾ ಅವರ ನಡುವೆ ಏರ್ಪಟ್ಟದ್ದ ಒಪ್ಪಂದ ಪ್ರಕಾರ ಕಾಡಿಗೆ ಬಂದು ನೆಲೆಸಿರುವ ಸಾಧ್ಯತೆ ಇದೆ.

Tribes of Mysore (luzi) The name (Shologa) is the curreption of the Tamil word colai or solai Tecket, and has reference to the dense Teckets amidst which they live. ಎಂದು ಹೇಳಿದ್ದಾರೆ. ಇವರ ಅಭಿಪ್ರಾಯವನ್ನು ತಳ್ಳಿಹಾಕುವಂತಿಲ್ಲ. ಇದಿಷ್ಟು ಅವರ ಹೆಸರನ್ನು ಕುರಿತು ತಿಳಿದುಬರುವ ಸಂಗತಿಯಾಗಿದೆ. ಇವುಗಳನ್ನು ಆಧರಿಸಿ ಹೇಳುವುದಾದರೆ ಸೋಲಿಗರು ಸೋತು ಓಡಿ ಹೋದವರು ಎಂಬುದು ಸ್ಪಷ್ಟವಾದ ಸಂಗತಿಯಾಗುತ್ತದೆ.

**೨.೪. ಜೀವನ ಶೈಲಿ**

ಸೋಲಿಗರು ಬಡವರು ಹಾಗೇ ಶ್ರಮಜೀವಿಗಳು ಸಹ ಆಗಿದ್ದಾರೆ. ಬಡತನದ ಕ್ರೂರತೆಯು ಎಷ್ಟೆಂದರೆ ತುಂಬಾ ಕಷ್ಟಪಟ್ಟು ದುಡಿದರೆ ಒಂದು ಹೊತ್ತಿನ ಆಹಾರ ಸಿಗುವುದು ಅಷ್ಟೇ ಕಷ್ಟವಾಗಿರುವಂತಹ ಸಂದರ್ಭದಲ್ಲಿ ಈ ಸೋಲಿಗ ಬುಡಕಟ್ಟು ಸಮುದಾಯದ್ದಲ್ಲಿದೆ. ಹಿಗಾಗಿ ಅವರ ಬದುಕಿನ ಹೆಚ್ಚು ಸಮಯವನ್ನು ಆಹಾರವನ್ನು ಹುಡುಕುವುದರಲ್ಲೆ ಕಳೆದು ಹೋಗುತ್ತದೆ. ಇವರು ರಾಗಿಯ ಹಿಟ್ಟು, ಅಂಬಲಿ, ಕಾಳು–ಕಡ್ಡಿ, ಗೆಡ್ಡೆಗೆಣಸು, ಸೊಪ್ಪು ಸದೆ ಇವರ ಸೋಲಿಗರ ಆಹಾರ. ಇವರಿಗೆ ಎಲ್ಲಾ ಕಾಲದಲ್ಲೂ ಎಲ್ಲಾ ಆಹಾರ ಸಾಮಗ್ರಿಗಳೂ ದೊರಕುವುದಿಲ್ಲ. ಹಬ್ಬ ಹರಿದಿನಗಳಲ್ಲಿ ಇದ್ದುದರಲ್ಲಿ ಸ್ವಲ್ಪ ಮಟ್ಟಿಗೆ ತಮ್ಮ ಬಡತನವನ್ನು ಮರೆತು ಬಾಳೆಹಣ್ಣು ಜೇನುತುಪ್ಪ ಇವುಗಳನ್ನು ಉಪಯೋಗಿಸುತ್ತಾರೆ. ಇವರ ಉಡುಪು ತುಂಬಾ ಸಾಧಾರಣವಾಗಿದ್ದು, ಸೋಲಿಗ ಗಂಡಸು ಧರಿಸುವುದು ಒಂದು ತುಂಡು ಪಂಚೆ ಅದನ್ನು ಸೊಂಟಕ್ಕೆ ಕಟ್ಟಿಕೊಳ್ಳುತ್ತಾರೆ. ತಲೆಗೆ ಇನ್ನೊಂದು ತುಂಡು ಸುತ್ತಿಕೊಳ್ಳುತ್ತಾರೆ. ಎದೆ ಕೈಕಾಲುಗಳು ಬೆತ್ತಲಾಗಿರುವಂತಹ ಸಂದರ್ಭ ಒಂದು ಕಾಲದಲ್ಲಿತ್ತು, ಇತ್ತೀಚಿನ ತಲೆಮಾರಿನಲ್ಲಿ ಆಧುನಿಕರಣದಿಂದ ಎಲ್ಲಾ ಉಡುಪುಗಳನ್ನು ಧರಿಸುವಂತಾಗಿದ್ದಾರೆ ಕಾಲ ಇದಾಗಿದೆ. ಹಿಂದೆ ಅಂದರೆ ಹಳೆಯ ತಲೆಮಾರಿನ ಹೆಂಗಸರು ಸೀರೆಯನ್ನು ಮಾತ್ರ ಉಡುತ್ತಿದ್ದರು, ರವಿಕೆಯನ್ನು ಬಳಸುತ್ತಿರಲಿಲ್ಲ. ಇತ್ತೀಚಿನ ತಲೆಮಾರುಗಳಲ್ಲಿ ಎಲ್ಲಾ ಬದಲಾವಣೆಯನ್ನು ಕಂಡು ಕೊಂಡಿದ್ದಾರೆ.

ಯಾವುದೇ ಜನ ವರ್ಗವಾಗಿರಲಿ ಅವರು ವಾಸ್ತವ್ಯವಿರುವ ಅಥವಾ ಬದುಕನ್ನು ಆಯ್ಕೆ ಮಾಡಿಕೊಂಡಿರುವ ಪ್ರದೇಶ ಅವರ ಜೀವನ ಶೈಲಿಯ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತದೆ. ಆ ಕಾರಣದಿಂದ ಸೋಲಿಗರು ಕಾಡನ್ನು ಆಶ್ರಯಿಸಿ ಬದುಕಲು ಆರಂಭಿಸಿದರು ಎಂಬುದರ ಬಗ್ಗೆ ಪೂರ್ಣ ಸತ್ಯ ತಿಳಿಯುವುದಿಲ್ಲ. ಆದರೆ ಅವರು ಕಾಡಿನಲ್ಲಿ ಬದುಕನ್ನು ಕಟ್ಟಿಕೊಂಡಿರುವುದು ಮಾತ್ರ ಸತ್ಯ. ಹಾಗೆಯೇ ಸೋಲಿಗರ ಆಹಾರ ಕ್ರಮವನ್ನು ಕುರಿತು ಹೇಳುವಾಗ ಅವರ ಹಿಂದಿನ ಆಹಾರ ಪದ್ಧತಿಯನ್ನು ಕುರಿತು ಹೇಳುವುದು ಸೂಕ್ತವಾಗಿರುತ್ತದೆ. ಸೋಲಿಗರಲ್ಲಿ

ಇಂದಿಗೂ ರೂಡಿಯಲ್ಲಿರುವ ಕಾಡಿನೊಳಗೆ ಪೋಡಿನ ಸ್ಥಿತಿಯನ್ನು ಗಮನಿಸಿದಾಗ ಕಳೆದ ೨೦೦-೩೦೦ ವರ್ಷಗಳ ಹಿಂದೆ ಹೇಗಿದ್ದಿರಬಹುದೆಂದು ಎಂಬುದು ಸ್ಪಷ್ಟವಾಗುತ್ತದೆ. ೨೧ ನೇ ಶತಮಾನದ ಎರಡನೆಯ ದಶಕದ ಆರಂಭದ ಸಂದರ್ಭದಲ್ಲೂ ದಟ್ಟಾರಣ್ಯದ ನಡುವೆ ಪೋಡು ಕಟ್ಟಿಕೊಂಡು ಬದುಕಿನ ಬಂಡಿಯನ್ನು ಸಾಗಿಸುತ್ತಿರುವ ಸೋಲಿಗರಿಗೆ ಇಂದಿಗೂ ತಮ್ಮ ನಿತ್ಯದ ಆಹಾರದಲ್ಲಿ ಗೆಡ್ಡೆ, ಗೆಣಸು, ಜೇನು ಬಹಳ ಮುಖ್ಯವಾದವುಗಳು. ಇವುಗಳ ಜೊತೆಗೆ ತಾವು ಬೆಳೆಯುವ ರಾಗಿಯೆ ಅವರಿಗೆ ಆಧಾರ. ಹಾಲನ್ನು ಕಾಣದೆ ಚಾಹಪುಡಿ ಮತ್ತು ಬೆಲ್ಲದಿಂದ ಸಿದ್ದಪಡಿಸಿದ ಕರಿ ಚಹಾ ಅವರಿಗೆ ಬೆಳಗಿನ ಚಳಿಯನ್ನು ಓಡಿಸುವ ಸಾಧನವಾಗಿದೆ. ಸೋಲಿಗರು ತಮ್ಮ ವಾಸ್ತವ್ಯಕ್ಕೆ  ಆಯ್ದುಕೊಂಡಿರುವ ಅರಣ್ಯ ಪ್ರದೇಶದಲ್ಲಿ ಪ್ರಾಣಿ ಮತ್ತು ಅಪಾರ ಸಸ್ಯ ಸಂಪತ್ತು ಇರುವುದರಿಂದ  ವರ್ಷದ ಎಲ್ಲಾ ಕಾಲದಲ್ಲಿಯೂ ಅವರಿಗೆ ಒಂದಲ್ಲಾ ಒಂದು ಹಣ್ಣು ಕಾಯಿ ಗೆಡ್ಡೆ-ಗೆಣಸು ಮಾಂಸಕ್ಕೆ ಪ್ರಾಣಿಗಳು ಲಭ್ಯವಾಗುತ್ತಿತ್ತು. ಅಲ್ಲದೆ ಬಹಳ ಸತ್ವಯುತ ಹಾಗೂ ವರ್ಷದ ಸರ್ವಕಾಲದಲ್ಲೂ ದೊರೆಯುವ ಜೇನು ಅವರಿಗೆ ಒಂದು ವರದಾನವೆಂದು ಹೇಳಬಹುದು.

**೨.೫. ವಾಸಸ್ಥಾನ**

ಸೋಲಿಗರು ಬುಡಕಟ್ಟು ಜನರು, ಅಲೆಮಾರಿ ಸಮುದಾಯದವರಾಗಿದ್ದಾರೆ. ಅಂದರೆ ಇವರು ಬೆಟ್ಟ ಗುಡ್ಡವನ್ನು ಬಿಟ್ಟು ಬೇರೆಲ್ಲೂ ಹೋಗುವುದಿಲ್ಲ. ಅಲ್ಲೇ ಸುತ್ತ ಮುತ್ತಲಿರುವ ಪ್ರದೇಶಗಳಿಗೆ ವಲಸೆಯನ್ನು ಹೋಗುತ್ತಾರೆ. ಈ ವಲಸೆಗೆ ಮುಖ್ಯ ಕಾರಣವೆಂದರೆ ಸಾಗಾಣಿಕೆ ಬೇಸಾಯ ಪದ್ಧತಿ. ಒಂದು ಕಡೆ ಮಣ್ಣಿನ  ಫಲವತ್ತತೆ ಕಡಿಮೆಯಾದ ನಂತರ ಮತ್ತೊಂದು ಕಡೆ ಹೋಗಿ ನೆಲೆಸಿ ಅಲ್ಲಿಯ ಸುತ್ತಮುತ್ತಲ ಪ್ರದೇಶಗಳನ್ನು ಹಸನು ಮಾಡಿ ವ್ಯವಸಾಯಕ್ಕೆ ಬಳಸುತ್ತಿದ್ದರು. ಹಾಗೆಯೇ ಕೆಲವೊಮ್ಮೆ ಕಾಲರ, ಪ್ಲೇಗು, ಗೋರ ಮುಂತಾದ ಸಾಂಕ್ರಾಮಿಕ ರೋಗಗಳು ಭಾದಿಸಿದಾಗಲೂ ಸಾಮೂಹಿಕ ವಲಸೆ ಹೋಗುತ್ತಿದ್ದರು. ಹಾಗೆ ವಲಸೆ ಹೊರಟ ಗಿರಿಜನರು ನೀರಿನ ಸೌಲಭ್ಯ ಚೆನ್ನಾಗಿರುವ ಎತ್ತರವಾದ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು, ಕಾಡು ಪ್ರಾಣಿಗಳ ಹಾವಳಿಯಿಂದ ದೂರವಿರುವ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಆಯ್ಕೆ ಮಾಡಿದ ಸ್ಥಳದಲ್ಲಿ 'ಅಳ್ಳುಶಾಸ್ತ್ರ' ಮಾಡಿ ಮನೆಗಳನ್ನು ನಿರ್ಮಿಸುತ್ತಿದ್ದರು ೧೫ ಅಡಿ ಅಗಲ, ೨೦ ಅಡಿ ಉದ್ದವಿರುವ ಮನೆಗಳನ್ನು ನಿರ್ಮಿಸುತ್ತಿದ್ದರು. ಮಣ್ಣಿನಿಂದ ಗೋಡೆಗಳನ್ನು ಕಟ್ಟಿ ಮೇಲ್ಚಾವಣಿಗಾಗಿ ಕಾಡಿನಲ್ಲಿ ಎತೇಚ್ಚವಾಗಿ ಸಿಗುವ ಬಿದಿರು ಬಳಸುತ್ತಾರೆ. ಮೇಲ್ಚಾವಣಿಯ ಹೊದಿಕೆಗಾಗಿ 'ಆನೆಹುಲ್ಲನ್ನು' ಬಳಸುತ್ತಾರೆ.  ಮನೆಯ ಸುತ್ತಲೂ ವ್ಯವಸಾಯಕ್ಕೆ ಅಣಿ ಮಾಡಿಕೊಳ್ಳುತ್ತಾರೆ. ಕಾಡಿನ ಕ್ರೂರ ಮೃಗಗಳು ಆಗಾಗ್ಗೆ ಬರುವುದುಂಟು. ಅಂತಹ ಸಂದರ್ಭದಲ್ಲಿ ಮರ ಹತ್ತುವ ಕಲೆಯನ್ನು ಪ್ರತಿಯೊಬ್ಬರು ರೂಢಿಸಿಕೊಂಡಿರುತ್ತಾರೆ. ರಾತ್ರಿ ಹೊತ್ತು ಬೆಂಕಿಯ ಕೊಳ್ಳಿಯನ್ನು ಉರಿಸಿ ಅದರಿಂದ ಪ್ರಾಣಿಗಳ ಹಾವಳಿಯಿಂದ ತಪ್ಪಿಸಿಕೊಳ್ಳುತ್ತಿದ್ದರು.  ಹಿಂದೆ ರಾಜ ಮಹಾರಾಜರು ಕಾಡಿಗೆ ಬೇಟೆಗಾಗಿ

ಬಂದಾಗ ಕಾಡಿನ ಸ್ಥಳ ಪರಿಚಯ ಮಾಡಿಕೊಡಲು ಇವರನ್ನು ಸಹಾಯಕ್ಕೆ ಬಳಸಿಕೊಳ್ಳುತ್ತಿದ್ದರು. ಇವರು ವಾಸಿಸುವಂತಹ ಪ್ರದೇಶವನ್ನು ಪೋಡು ಎಂದು ಕರೆಯಲಾಗುತ್ತಿತ್ತು. ಸಾಮಾನ್ಯವಾಗಿ ೧೦–೧೫ ಗುಡಿಸಲುಗಳ ಒಂದು ಸಮೂಹವನ್ನು 'ಪೋಡು' ಎಂದು ಕರೆಯುತ್ತಾರೆ. ಯಳಂದೂರು ತಾಲ್ಲೂಕು ಬಿಳಿಗಿರಿರಂಗನ ಬೆಟ್ಟದ ಆಸುಪಾಸಿನಲ್ಲಿ ೧೨ ಪೋಡುಗಳಿವೆ. ಸಾಮಾನ್ಯವಾಗಿ ಇವರ ಪೋಡಿನ ಹೆಸರು ಪ್ರಕೃತ ವೈಚಿತ್ರ್ಯಕ್ಕೆ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿದ್ದು, ಅದು ಕೆರೆ, ಕಟ್ಟೆ, ಗುಂಡಿ, ಮಾಳ, ಬೆಟ್ಟ ಮುಂತಾದವುಗಳ ಹೆಸರುಗಳಿಂದ ಕೂಡಿದೆ. ಯರಕ ಮರಗಳಿರುವಂತಹ ಪೋಡು ಯರಕನ ಗದ್ದೆ ಕಾಲೋನಿ, ಕಲ್ಯಾಣಿ ಕೊಳದ ಹತ್ತಿರದ ಪೋಡು ಕಲ್ಯಾಣಿಪೊಡು, ಮುತ್ತುಗದ ಮರಗಳಿರುವ ಪೋಡು ಮುತ್ತುಗದಗದ್ದೆ ಪೋಡು ಇತ್ಯಾದಿ. ಹೀಗೆ ಯಳಂದೂರು ತಾಲೂಕಿನ ವ್ಯಾಪ್ತಿಯಲ್ಲಿ ೯ ಪೋಡುಗಳು ಕಂಡುಬರುತ್ತವೆ.

**ಸಾಮಾಜಿಕ ವ್ಯವಸ್ಥೆ**

ಸೋಲಿಗ ಸಮುದಾಯದ ಸಾಮಾಜಿಕ ವ್ಯವಸ್ಥೆಯಲ್ಲಿ ನ್ಯಾಯ ತೀರ್ಮಾನ ಮಾಡುವ ಒಂದು ವ್ಯವಸ್ಥೆಯಲ್ಲಿ ಪಟ್ಟೇಗಾರ ಯಜಮಾನರು ಇವರು ಸಮುದಾಯದ ಹಿರಿಕರು ಮತ್ತು ಪ್ರಭಾವಿ ವ್ಯಕ್ತಿಗಳು. ಇವರು ಪೋಡಿಗೆ ಒಬ್ಬ ಯಜಮಾನನಾಗಿರುತ್ತಾನೆ. ಈ ಸಮುದಾಯದಲ್ಲಿ ಏಳು ಪೋಡುಗಳಿಗೆ ಒಬ್ಬ ಪಟ್ಟೆಗಾರ ಇರುತ್ತಾನೆ. ಸೋಲಿಗರಲ್ಲಿ ಉಂಟಾಗುವ ವಿವಾದಗಳು ಹಾಗೂ ವಿವಾಹಗಳು, ತಪ್ಪಿತಸ್ಥರಿಗೆ ದಂಡ ವಿಧಿಸುವ ಅಥವಾ ಇವರನ್ನು ಪೋಡಿನಿಂದ ಬಹಿಷ್ಕಾರ ಹಾಕುವಂತಹ ತೀರ್ಮಾನವನ್ನು ಆ ಪೋಡಿನ ಯಜಮಾನನಿಗಿರುತ್ತದೆ. ಯಜಮಾನನು ನೀಡುವ ತೀರ್ಪನ್ನು ಜಾರಿಗೆ ತರುವವನು ಕೋಲುಕಾರ. ಕುಲದಿಂದ ಹೊರಗೆ ಹಾಕಲಾಗುವುದು. ಹೀಗೆ ಮಾಡುವಾಗ ಅವನಿಗೆ ಇತರರು ಮಾತಾನಾಡುವುದು, ಸಹಾಯ ಮಾಡುವುದು ನಿಷೇಧ.

ಒಂದು ವೇಳೆ ಸಹಾಯವನ್ನು ಮಾಡಿದರೆ ಆತ ತಪ್ಪಿತಸ್ಥನಾಗುತ್ತಾನೆ. ಆ ವ್ಯಕ್ತಿಯನ್ನು ಪೋಡಿನಿಂದ ಹೊರಹಾಕಲಾಗುತ್ತದೆ. ಕುಲದಿಂದ ಹೊರದೂಡಲ್ಪಟ್ಟ ವ್ಯಕ್ತಿಯು ಮತ್ತೆ ಕುಲದವರನ್ನು ಸೇರ ಬಯಸಿದರೆ ತಾನು ನ್ಯಾಯಪಂಚಾಯಿತಿಯ ತೀರ್ಪಿಗೆ ಒಪ್ಪಿಕೊಳ್ಳಬೇಕಾಗುತ್ತದೆ. ನಂತರ ಅನೇಕ ಕಟ್ಟುಪಾಡಿನೊಂದಿಗೆ ಅವನನ್ನು ಕುಲಕ್ಕೆ ಸೇರಿಸಿಕೊಳ್ಳಲಾಗುವುದು. ಈ ವೇಳೆಯಲ್ಲಿ ಅವನ ತಲೆಯನ್ನು ಬೋಳಿಸಿ ಏಳು ಪರದೆಯನ್ನು ನಿರ್ಮಿಸಿ ಅದನ್ನು ದಾಟಿ ಬರಬೇಕು ಹಾಗೆ ದಾಟಿ ಬರುವಾಗ ಗೋಮೂತ್ರ ಕುಡಿಸಿ ನಂತರ ಬಿಳಿಗಿರಿರಂಗನಸ್ವಾಮಿಯ ತೀರ್ಥವನ್ನು ಏಳುಬಾರಿ ಕುಡಿಸುತ್ತಾರೆ. ಈ ಸಂದರ್ಭದಲ್ಲಿ ಕುಲದವರಿಗೆಲ್ಲ ಭೋಜನ ವ್ಯವಸ್ಥೆಯನ್ನು ಮಾಡಿರುತ್ತಾರೆ. ಹಾಗೆಯೇ ಚಪ್ಪಲಿಯಲ್ಲಿ ಹೊಡೆಯುವುದು ಮತು ಹೊಡೆಸಿಕೊಳ್ಳುವುದು ನಿಷೇಧವಾಗಿರುತ್ತದೆ. ಮತ್ತು ದಂಡವನ್ನು ತೆರಬೇಕಾಗಿರುತ್ತದೆ. ಯಾವುದೇ ತಪ್ಪನ್ನು ಮಾಡಿ ತಪ್ಪಿತಸ್ಥನಾದವನಿಗೆ ಕೋಲುಕಾರನಲ್ಲಿಗೆ ಹೋಗಿ ದಂಡ ಕಟ್ಟಬೇಕಾಗುತ್ತದೆ ಇದನ್ನು "ತೆರ" ಅಥವಾ ತಪ್ಪು ಕಾಣಿಕೆ ಎಂದು ಕರೆಯುತ್ತಾರೆ. ತೀರ್ಮಾನಿಸಲಾಗದ ವಿವಾದವನ್ನು ಪಟ್ಟೆಗಾರನಲ್ಲಿಗೆ ಹೋಗಿ ಬಗೆ

ಆರಿಸಿಕೊಳ್ಳಬೇಕಾಗುತ್ತದೆ. ಸೋಲಿಗರ ಸಮುದಾಯದ ನ್ಯಾಯ ತೀರ್ಮಾನ ಮಾಡುವಂತಹ ಸ್ಥಳಕ್ಕೆ "ಕಟ್ಟೆ ಮನೆ" ಎಂದು ಹೆಸರು. ಇದು ದಕ್ಷಿಣ ಕರ್ನಾಟಕದ ವಿವಿಧ ಸಮುದಾಯಗಳಲ್ಲೂ ನೋಡಬಹುದು. ಕಟ್ಟೆ ಮನೆಯು ನ್ಯಾಯವನ್ನು ತೀರ್ಮಾನಿಸುವ ಒಂದು ಪ್ರದೇಶವಾಗಿರುತ್ತದೆ. ಹೀಗೆ ಅವರ ಸಮುದಾಯದ ಸಾಮಾಜಿಕ ವ್ಯವಸ್ಥೆಯನ್ನು ನೀತಿ ನಿಯಮಗಳನ್ನು ಈ ಒಂದು ಸಮುದಾಯದಲ್ಲಿ ವಿಭಿನ್ನವಾಗಿ ನೋಡಬಹುದಾಗಿದೆ.

**೨.೬. ಒಳಪಂಗಡಗಳು**

ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ಅವರು ಕರ್ನಾಟಕ ಮತ್ತು ತಮಿಳು ನಾಡುಗಳಲ್ಲಿ ಕಂಡುಬರುವ ಸೋಲಿಗರನ್ನು ಗುರುತಿಸಿ, ಅವರಲ್ಲಿನ ಒಳಗುಂಪುಗಳನ್ನು ವಿಂಗಡಣೆ ಮಾಡಿದ್ದಾರೆ. ಉರಾಳಿ ಸೋಲಿಗರು, ಕಾಡು ಸೋಲಿಗರು, ಮಲೆ ಸೋಲಿಗರು, ಉರುಬತ್ತಿ ಸೋಲಿಗರು, ಬರುಡೆ ಸೋಲಿಗರು.

• **ಉರಾಳಿ ಸೋಲಿಗರು:** ಈ ಸೋಲಿಗ ಸಮುದಾಯದವರು ಚಾಮರಾಜನಗರ ಮತ್ತು ಸತ್ಯಮಂಗಲ ಸಮೀಪದ ಕಾಡುಗಳಲ್ಲಿ ಕಂಡುಬರುತ್ತಾರೆ.

• **ಮಲೈಸೋಲಿಗರು:** ಈ ಜನರು ಬಿಳಿಗಿರಿರಂಗನಬೆಟ್ಟ ಮತ್ತು ಮಲೈಮಹದೇಶ್ವರ ಬೆಟ್ಟದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರು ಹೆಚ್ಚು ಬೆಟ್ಟ ಗುಡ್ಡಳಲ್ಲಿ ಮೇಲೆ ವಾಸಿಸುವವರು.

• **ಕಾಡು ಸೋಲಿಗರು:** ಇವರು ಕಾಡಿನಲ್ಲಿ ವಾಸಿಸುವುದು ಕಂಡುಬರುತ್ತದೆ. ಬಿಳಿಗಿರಿರಂಗನ ಬೆಟ್ಟ ಮಹದೇಶ್ವರಬೆಟ್ಟದ ಸುತ್ತಮುತ್ತಲಿನ ಕಾಡುಗಳಲ್ಲಿ ಕಂಡುಬರುತ್ತಾರೆ.

• **ಉರುಬುಟ್ಟಿ ಸೋಲಿಗರು:** ಇವರು ಹೆಚ್ಚು ಕಾಕನ ಕೋಟೆ ಕಾಡುಗಳಲ್ಲಿ ಕಂಡುಬರುತ್ತಾರೆ.

• **ಬುರುಡೆ ಸೋಲಿಗರು:** ಈ ಒಂದು ಗುಂಪು ಹೆಗ್ಗಡದೇವನ ಕೋಟೆ, ಕೊಳ್ಳೆಗಾಲದ ಸುತ್ತಮುತ್ತ ಕಂಡುಬರುತ್ತಾರೆ.[೯]

ಸಾಮಾನ್ಯವಾಗಿ ಇವರ ಮನೆ ದೇವರು, ಸಂಸ್ಕೃತಿ, ಆಚಾರ-ವಿಚಾರ ಮತ್ತು ಭಾಷೆಯ ಆಧಾರದ ಮೇಲೆ ಈ ವಿಭಾಗವನ್ನು ಮಾಡಿದ್ದು, ಅವುಗಳ ನಡುವೆ ಸಾಕಷ್ಟು ವ್ಯತ್ಯಾಸವಿರುವುದನ್ನು ಕಾಣಬಹುದು. ಕೊಳ್ಳೆಗಾಲ ಮತ್ತು ಬಿಳಿಗಿರಿರಂಗನ ಬೆಟ್ಟದ ಸೋಲಿಗರ ಸಂಸ್ಕೃತಿ ಮತ್ತು ಭಾಷೆಯ ನಡುವೆ ಸಾಕಷ್ಟು ಅಂತರವಿರುವುದನ್ನು ಕಾಣುತ್ತೇವೆ. ಬಿಳಿಗಿರಿರಂಗನ ಬೆಟ್ಟದ ಸೋಲಿಗರು ದಟ್ಟವಾದ ಕಾಡಿನ ನಡುವೆ ಇರುವುದರಿಂದ ಇಂದಿಗೂ ತಮ್ಮ ಮೂಲ ಸಂಸ್ಕೃತಿ ಮತ್ತು ಭಾಷೆಯ ವೈಶಿಷ್ಟ್ಯತೆಯನ್ನು ಕಾಯ್ದುಕೊಂಡಿದ್ದಾರೆ. ಹೀಗಾಗಿ ಅವರು ಕೊಳ್ಳೆಗಾಲ ಮತ್ತು ಮಲೆಮಹದೇಶ್ವರ ಬೆಟ್ಟದ ಸೋಲಿಗರಿಗಿಂತ ಹೆಚ್ಚು ಬದಲಾವಣೆಯನ್ನು ಹೊಂದಿಲ್ಲ. ಹಾಗೂ ಇವರ ಜೀವನ ಶೈಲಿಯು ಸಂಪೂರ್ಣವಾಗಿ ಬದಲಾವಣೆಗೊಂಡಿಲ್ಲ. ಇತ್ತೀಚೆಗೆ ಅವರ ಭಾಷೆಯ ಅನ್ಯ ನಾಗರಿಕರ ಸಂಪರ್ಕದಿಂದಾಗಿ ಇತ್ತೀಚಿನ ಬೆಳವಣಿಗೆಯಲ್ಲಿ ಬದಲಾವಣೆಯನ್ನು ಕಾಣಬಹುದಾಗಿದೆ. ಈ

ಪ್ರದೇಶವು ಪ್ರವಾಸಿತಾಣವಾಗಿದೆ. ಇಲ್ಲಿ ಮೇಲ್ಕಂಡ ಭೌಗೋಳಿಕ ವಿವರಣೆಗೂ ಸೋಲಿಗ ಸಮುದಾಯದ ಜೀವನ ವಿಧಾನಕ್ಕೂ ಸಂಬಂಧವಿದೆ. ಹಾಗೆಯೇ ಮುಂದಿನ ಅಧ್ಯಾಯಗಳಲ್ಲಿ ಬರುವ ವಿವರಣೆ ಮತ್ತು ಅವರ ಭಾಷೆ ವಿಶ್ಲೇಷಣೆಯನ್ನು ಸಾಮಾಜಿಕ ಹಿನ್ನಲೆಯಲ್ಲಿ ವಿವರಿಸುವ ಕೆಲಸವಾಗಿದೆ. ಸೋಲಿಗರು ನೆಲಸಿರುವಂತದ್ದು, ಪ್ರವಾಸಿ ಕೇಂದ್ರಗಳು ಅವರ ಮೇಲೆ ಆಧುನಿಕತೆಯ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ಬುಡಕಟ್ಟು ಸಮುದಾಯಗಳು ಹೊಟ್ಟೆಯನ್ನು ತುಂಬಿಸಿಕೊಳ್ಳಲು ನಗರಗಳಿಗೆ ವಲಸೆ ಬಂದು ಸಾಕಷ್ಟು ಬದಲಾವಣೆಗೊಳ್ಳುತ್ತಿರುವುದನ್ನು ನೋಡಬಹುದಾಗಿದೆ.

**೨.೭. ಸೋಲಿಗರ ಕುಲಗಳು**

ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವವರಿಗೆ ಕುಲಗಳು ಅತ್ಯಂತ ಪ್ರಮುಖವಾಗಿ ಕಂಡುಬರುತ್ತದೆ. ಏಕೆಂದರೆ ಪ್ರತಿಯೊಂದು ಬುಡಕಟ್ಟುಗಳಲ್ಲಿ, ಕುಲಗಳು ಆ ಬುಡಕಟ್ಟಿನ ಇತಿಹಾಸವನ್ನು ನಿರೂಪಿಸುತ್ತವೆ. ಏಕೆಂದರೆ ಕುಲಗಳು ಬುಡಕಟ್ಟುಗಳು ಅತ್ಯಂತ ಸೂಕ್ಷ್ಮವಾಗಿದ್ದು, ಕುಲಕುಲಗಳ ನಡುವೆ ಎಂತಹ ಸಂದರ್ಭದಲ್ಲೂ. ರಾಜಿಯಾಗಲು ಒಪ್ಪುವುದಿಲ್ಲ. ಈ ಕುಲಗಳು ತಮ್ಮದೇ ಆದ ಪ್ರತ್ಯೇಕವಾದ ಸಂಪ್ರದಾಯಗಳನ್ನೂ ಅನುಸರಿಸಿಕೊಂಡು ಬರುತ್ತಿರುತ್ತವೆ ಕುಲ ಕುಲಗಳ ನಡುವೆ. ಹೆಣ್ಣು ಕೊಡುವ ಕೊಳ್ಳುವ ಸಂಬಂಧಗಳು ಅತ್ಯಂತ ಕಟ್ಟುನಿಟ್ಟಾಗಿ ಪಾಲನೆ ಮಾಡಲಾಗುತ್ತಿರುತ್ತದೆ. ಈ ಕುಲಗಳು ಕೆಲವೊಂದು ಸಂದರ್ಭದಲ್ಲಿ ವಾಸಿಸುವ ಪ್ರದೇಶಗಳು ತಿನ್ನುವ ಆಹಾರ ಉಡುಗೆ ತೊಡುಗೆ ನಂಬಿಕೆಗಳಿಂದ ಭಿನ್ನತೆಯನ್ನು ಕಾಯ್ದುಕೊಂಡು ಬರುತ್ತದೆ. ಒಂದು ಕಾಲಘಟ್ಟದಲ್ಲಿ ತನ್ನ ಸಾಮಥ್ಯದ ಅವಶ್ಯಕತೆಯಿಂದ ಆರಂಭವಾದ ಕುಲಗಳು ಅತ್ಯಂತ ನಿಷ್ಠೆಯಿಂದ ಪಾಲಿಸಿಕೊಂಡು ಬರುತ್ತವೆ ಆದ್ದರಿಂದ ಬುಡಕಟ್ಟುಗಳ ಅಧ್ಯಯನ ಮಾಡುವಾಗ ಕುಲಗಳು ಅತ್ಯಂತ ಪ್ರಮುಖವಾದ ಪ್ರಭಾವ ಬೀರುತ್ತವೆ.

ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಒಟ್ಟು ಏಳು ಕುಲಗಳು ಕಂಡುಬರುತ್ತವೆ. ಇವರಲ್ಲಿ ಕಂಡುಬರುವ ಪ್ರಮುಖ ಕುಲಗಳೆಂದರೆ

೧. ಹೊಂಗೆರಕುಲ

೨. ಆಲೂರು ಕುಲ

೩. ಸೂರ್ಯ ಕುಲ

೪. ಬೆಳರ ಕುಲ

೫. ತೆನೇರು ಕುಲ

ಹೀಗೆ ಐದು ಕುಲಗಳನ್ನು ಸೋಲಿಗ ಸಮುದಾಯದಲ್ಲಿ ಮುಖ್ಯವಾಗಿ ನೋಡಬಹುದಾಗಿದೆ. ಇಲ್ಲಿ ಜೇನುಕುಲ ಮತ್ತು ಕುಂಬಳ ಕುಲ ಎಂಬುದು ಕಂಡುಬರುತ್ತದೆ. ಈ ಎರಡು ಕುಲಗಳು

ಹಿಂದಿನ ದಿನಗಳಲ್ಲಿ ವೈವಾಹಿಕ ಸಂಬಂಧವನ್ನು ಬೆಳಸುತ್ತಿರಲಿಲ್ಲ. ಇತ್ತೀಚಿನ ದಿನಗಳಲ್ಲಿ ಈ ಎರಡು ಕುಲಗಳ ಜೊತೆ ಸಂಬಂಧವನ್ನು ಬೆಳೆಸುತ್ತಿರುವುದು ಕಂಡುಬರುತ್ತದೆ. ಈ ಕುಲಗಳ ಯಾವ ರೀತಿ ಹುಟ್ಟಿಕೊಂಡಿವೆ ಎಂಬುದನ್ನು ನೋಡಬಹುದಾಗಿದೆ.

**ಹೊಂಗೆರ ಕುಲ:** ಹೊಂಗೆರ ಕುಲದವರಿಗೆ ಸಿದ್ದೇಶ್ವರ ಎಂಬುದು ಇವರ ಕುಲದೇವರು. ಹೊಂಗೆರುಕುಲ ಎಂಬ ಹೆಸರು ಇವರಿಗೆ ಬರಲು ಮುಖ್ಯ ಕಾರಣ ಹೊಂಗೆಯಮರ. ಒಂದು ಸಲ ಸೋಲಿಗ ಸಮುದಾಯದ ಗುಂಪಿನವರು ಹೊಂಗೆಯ ಮರವನ್ನು ಕಡಿಯುತ್ತಿದ್ದಾಗ ಆ ಮರದಲ್ಲಿ ದೇವರು ಕಾಣಿಸಿಕೊಂಡಿತು, ಅಂದಿನಿಂದ ಹೊಂಗೆಯ ಮರವನ್ನು ಕಡಿಯುವುದನ್ನು ಬಿಟ್ಟು ಅದನ್ನು ತಮ್ಮ ಕುಲನಾಮವಾಗಿ ಬಳಸಿಕೊಂಡರು. ಇವರು ಹೊಂಗೆಯ ಕಟ್ಟಿಗೆಯನ್ನು ಉರುವಲಾಗಿ ದಿನ ನಿತ್ಯದ ಬದುಕಿನಲ್ಲಿ ಅದನ್ನು ಬಳಸಲಾರರು.

**ಆಲೂರು ಕುಲ:** ಸೋಲಿಗರ ಆಡುಮಾತಿನಲ್ಲಿ ಇದನ್ನು ಆಲ್ರುಕುಲವೆದು ಕರೆಯುವರು. ಈ ಕುಲದವರು ಬಿಳಿಗಿರಿರಂಗನಬೆಟ್ಟದ ಕನ್ನೇರುಕಾಲೋನಿ ಸಮೀಪ ಇವರ ಕುಲದೇವರಿದೆ. ಇವರ ಕುಲದೇವರು ಮಹದೇಶ್ವರ ಈ ದೇವರ ಬೆಟ್ಟವು ತಮಿಳುನಾಡಿನ ಕೊಯಮತ್ತೂರು ಜಿಲ್ಲೆಯ ಭನಂ ತಾಲ್ಲೂಕಿನಲ್ಲಿ ಕಂಡುಬರುತ್ತದೆ.

**ಸೂರ್ಯಕುಲ:** ಸೋಲಿಗರು ಈ ಕುಲಕ್ಕೆ ಅವರ ಆಡುಮಾತಿನಲ್ಲಿ ಸೂರರ ಕುಲವೆಂದು ಕರೆಯುವರು ಇವರ ಕುಲದೇವರು ಭರಮುಸ್ವಾಮಿ ಇದು ಕೊಳ್ಳೆಗಾಲದ ಹತ್ತಿರವಿರು ಮಾರ್ಟಹಳ್ಳಿಯಲ್ಲಿದೆ. ಈ ಸಮುದಾಯದ ಜನರು ಕೈಯಲ್ಲಿ ಚೂರಿ ಹಿಡಿದಿದ್ದರಿಂದ ಇವರಿಗೆ ಈ ಕುಲದ ಹೆಸರು ಬಂದಿರಬಹುದೆಂದು ಕೆಲವರ ನಂಬಿಕೆ ಇದೆ. ಇವರು ಹೆಚ್ಚಾಗಿ ಬಿಳಿಗಿರಿರಂಗನಬೆಟ್ಟದ ಸುತ್ತಮುತ್ತ ಭಾಗಗಳಲ್ಲಿ ಕಂಡುಬರುವುದು.

**ಬೆಳರ ಕುಲ:** ಇವರಿಗೆ ಬೆಳ್ಳಿಕುಲವೆಂದು ಕರೆಯುವ ಕಾರಣ ಚಿನ್ನ ಬೆಳ್ಳಿ ಕೆಲಸದಲ್ಲಿ ಕೆಲವು ಸೋಲಿಗ ಸಮುದಾಯದವರು ತೊಡಗಿದ್ದರೆಬುಂದು ನಂಬಿಕೆ ಇವರಲ್ಲಿದೆ. ಈಗಾಗಿ ಈ ಬೆಳ್ಳರ ಕುಲವನ್ನು ಬೆಳ್ಳಿಕುಲವೆಂದು ಕರೆಯಲಾಗಿದೆ. ಇವರ ಕುಲದೇವರು ಪಂದೇಶ್ವರ ಇವು ಸಹ ತಮಿಳುನಾಡು ರಾಜ್ಯದ ಕೊಯ್‌ಮತ್ತೂರು ಜಿಲ್ಲೆಯ ಬಾನುಲಿ ತಾಲ್ಲೊಕಿನಲ್ಲಿ ಕಂಡುಬರುತ್ತದೆ.

**ತೆನೇರು ಕುಲ:** ಮಹದೇಶ್ವರ ಇವರ ಕುಲದೇವರು. ಸೋಲಿಗರಿಗೆ ಈ ಕುಲದ ಬಗ್ಗೆ ಕೇಳಿದಾಗ ಅವರು ತಾಗಿಯ ತೆನೆಯ ಹೊರೆಯನ್ನು ತಲೆಯ ಮೇಲೆ ಹೊತ್ತಿದ್ದರು. ಆದುದ್ದರಿಂದ ಇವರಿಗೆ ತೆನೇರ ಕುಲ ಎಂಬ ಹೆಸರು ಬಂತು ಎಂದು ಹೇಳಿದರು. ಅವರ ಕುಲಗಳಿಂದ ಅವರ ಮನೆದೇವರುಗಳು ಎಲ್ಲೆಲ್ಲಿ ಕಂಡುಬರುತ್ತದೆ ಎಂಬುದನ್ನು ಕಾಣಬಹುದು. ಇವರ ನೆಲೆಗಳು ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳಲ್ಲಿ ನೋಡಬಹುದಾಗಿದೆ.[೧೦]

### ೨.೮ ಬುಡಕಟ್ಟು ಭಾಷೆಯ ಸ್ಥೂಲ ಸಮೀಕ್ಷೆ.

ಪ್ರತಿಯೊಂದು ಸಮುದಾಯವು ಅವುಗಳದ್ದೇ ಆದ ಭಾಷೆಯನ್ನು ಹೊಂದಿರುತ್ತದೆ. ಹಾಗೆಯೇ ಪ್ರತಿಯೊಂದು ಸಮುದಾಯವು ಅವುಗಳದ್ದೇ ಆದ ಸಂಸ್ಕೃತಿಯನ್ನು ಹೊಂದಿರುತ್ತದೆ. ಈ ಹಿನ್ನಲೆಯಿಂದ ಭಾಷೆ, ಸಂಸ್ಕೃತಿಯ ಮುಖ್ಯ ಅಂಗ. ಯಾವುದೇ ಸಮುದಾಯದ ಸಂಸ್ಕೃತಿಯ ವೈವಿಧ್ಯತೆಯನ್ನು ಭಾಷೆಯ ಮೂಲಕ ತಿಳಿಯಬಹುದಾಗಿದೆ. ಆಯಾ ಸಮುದಾಯದಲ್ಲಿ ಬಳಕೆಯಲ್ಲಿರುವ ಗಾದೆ, ಒಗಟು, ನುಡಿಗಟ್ಟುಗಳ ಮೂಲಕ ಸಂಸ್ಕೃತಿಯನ್ನು ಅರಿಯಬಹುದಾಗಿದೆ.

ಸಾಮಾಜಿಕ ನಿರ್ಬಂಧಕಗಳಾಗಿ (Social Barriar) ಜಾತಿ ಮತ್ತು ಜನಾಂಗಗಳಿವೆ. ೧೯೮೩ ರಲ್ಲಿ ಪೀಟರ್ ಟ್ರೆಡ್ಗಿಲ್ ಎಂಬ ಸಾಮಾಜಿಕ ಭಾಷಾವಿಜ್ಞಾನಿ ಭಾಷೆ ಮತ್ತು ಜನಾಂಗ, ಜಾತಿ ಹೇಗೆ ಪರಸ್ಪರ ಸಂಬಂಧ ಹೊಂದಿವೆ ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಸಾಮಾಜಿಕ ಭಾಷಾವಿಜ್ಞಾನಿಗಳು ಒಂದು ನುಡಿ ಕುಟುಂಬವನ್ನು ಭಾಷೆಯ ಮೂಲಕ ಅಧ್ಯಯನ ಮಾಡಬಹುದಾಗಿದೆ ಎಂದಿದ್ದಾರೆ.

ಆಫ್ರಿಕನ್ ಮೂಲದವರಾದ ಸಿದ್ಧಿಗಳು ಕಪ್ಪ ಜನಾಂಗದವರು. ಇವರ ಮಾತು ಮತ್ತು ಬಣ್ಣ ಎರಡು ಸಿದ್ದಿಗಳನ್ನು ಪ್ರತಿನಿಧೀಕರಿಸುತ್ತದೆ. ಉಡುಪಿ, ಮಂಗಳೂರು, ಉತ್ತರ ಕನ್ನಡ ಪರಿಸರದಲ್ಲಿ ನೆಲೆಸಿರುವ ಕೊರಗರ ಭಾಷೆಯಿರಬಹುದು, ಉತ್ತರ ಪ್ರದೇಶದಿಂದ ವಲಸೆ ಬಂದಿರುವ ರಾಜಗೊಂಡರು, ಗೊಂಡಿ ಭಾಷೆಯನ್ನು ಮಾತನಾಡುತ್ತಾರೆ. ಪಶುಪಾಲನೆಯನ್ನು ತಮ್ಮ ವೃತ್ತಿಯಾಗಿ ಮಾಡಿಕೊಂಡು ಕಾಡಿನಲ್ಲಿ ವಾಸಿಸುತ್ತಿದ್ದ ಮ್ಯಾಸಬೇಡರ ನುಡಿಯಿರಬಹುದು, ಹಾಗೆಯೇ ಊರು ಬೇಡರ ನುಡಿಯಿರಬಹುದು ಜೇನುಕುರುಬ, ಬೆಟ್ಟಕುರುಬ, ಮತ್ತು ಮುಳ್ಳುಕುರುಬ ಸಮುದಾಯಗಳು ತಮ್ಮದೆ ಭಾಷೆಯನ್ನು ಹೊಂದಿವೆ.

ಕರ್ನಾಟಕದಲ್ಲಿ ಸುಮಾರು ೫೦ (ಐವತ್ತು) ಬುಟಕಟ್ಟುಗಳು ನೆಲೆಸಿವೆ. ಈ ಅಂಕಿ ಅಂಶಗಳ ಆಧಾರದ ಮೇಲೆ ಭಾರತ ಒಂದು ಬುಡಕಟ್ಟು ಭಾಷಿಕ ಸಮುದಾಯಗಳ ನಾಡು ಎಂದು ಗುರುತ್ತಿಸಿದೆ. ಭಾಷೆಗೂ ಮತ್ತು ಸಮುದಾಯಕ್ಕೂ ಸಂಬಂಧ ಇರುವ ಹಾಗೆ ಭಾಷೆಗೂ ಮತ್ತು ವೃತ್ತಿಗೂ ಪರಸ್ಪರ ಸಂಬಂಧವಿದೆ. ಜೇನುಕುರುಬರ ವೃತ್ತಿ ಜೇನು ಇಳಿಸುವುದು. ಜೇನುಕುರುಬ ಒಂದು ವೃತ್ತಿಸೂಚಕ ಪದವಾಗಿದೆ. ಹಾಗೆಯೇ ಇದು ಒಂದು ಬುಡಕಟ್ಟು ಸಮುದಾಯವೂ ಆಗಿದೆ. ಜೇನು ಇಳಿಸುವುದಕ್ಕೂ ಸಂಪ್ರದಾಯವಿದೆ. ಜೇನು ಹಾರುವುದನ್ನು ಗಮನಿಸಿ ಯಾವ ಕಾಲದಲ್ಲಿ ಎಂತಹ ಜೇನು ಸಿಗುತ್ತದೆಂದು ಗುರುತಿಸುತ್ತಾರೆ. ಈ ವಿಚಾರವನ್ನು ಕಿಕ್ಕೇರಿ ನಾರಾಯಣ ಅವರು 'ಜೇನುಕುರುಬ' ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ' ಕೃತಿಯಲ್ಲಿ ಚರ್ಚೆ ಮಾಡಿದ್ದಾರೆ.

ವೃತ್ತಿಯಲ್ಲಿ ಜೇನು ಇಳಿಸುವುದಾದರೂ, ಆನೆಗಳನ್ನು ಹಿಡಿದು ಪಳಗಿಸುವುದು ಇವರ ಕಾಯಕ ೪೦೧ ವರ್ಷದ ಚರಿತ್ರಯುಳ್ಳ ಮೈಸೂರು ದಸರಾ ಮೆರವಣಿಗೆಯಲ್ಲಿ ಆನೆಯನ್ನು ಅಂಬಾರಿ ಜೊತೆ ನಡೆಸುವವರು ಇವರೇ ಆಗಿದ್ದಾರೆ. ಭಾಷಿಕವಾಗಿ ಇವರ ನುಡಿ ರಚನೆ ವಿಶಿಷ್ಟವಾಗಿದೆ. ಪದಾಂತ್ಯ ಪರಿಸರದ 'ಉ' ಕಾರ 'ಅ' ಕಾರವಾಗಿ ಉಚ್ಚಾರಣೆಯಲ್ಲಿದೆ.

| ಬರಹ ಕನ್ನಡ | ಜೇನು ಕುರುಬರ ಕನ್ನಡ |
|---|---|
| ಆನೆ | ಆನ |
| ಮನೆ | ಮನ |
| ಆಸೆ | ಆಸ |
| ಹಿಂದೆ | ಇಂದ |
| ಒಳಗೆ | ವಳ್ಗ |

ಜೇನು ಕುರುಬರಲ್ಲಿ ನಾಮಪದಗಳ ಉಚ್ಚಾರಣೆ ಕನ್ನಡದ 'ಎ'ಕಾರಂತ ಪದಗಳು 'ಅ'ಕಾರಾಂತವಾಗಿವೆ. ಇದಕ್ಕೆ ಕಾರಣ ಏನು? ಕನ್ನಡದಲ್ಲಿ ಯಾವ ಸಾಮಾಜಿಕ ಮತ್ತು ಪ್ರಾದೇಶಿಕ ಒಳನುಡಿಗಳಲ್ಲಿ 'ಅ'ಕಾರಾಂತ ಪದಗಳಿವೆ. ಈವೊಂದು ವಿಶಿಷ್ಟ ಧ್ವನಿ ನಿಯಮದ ಬಗ್ಗೆ ಕನ್ನಡ ಕಲ್ಪಿತ ಚರಿತ್ರೆ (ಪುಟ:೬೬) ರಲ್ಲಿ ಡಿ.ಎನ್. ಶಂಕರಭಟ್ ಅವರು ಚರ್ಚೆ ಮಾಡುತ್ತಾರೆ. ಇದಕ್ಕೆ ಮುಖ್ಯ ಕಾರಣ ಮೂಲಕನ್ನಡದಲ್ಲಿ 'ಅ' ಕಾರಾಂತ ಪದಗಳು ಉಚ್ಚಾರಣೆಯಲ್ಲಿರುವುದರಿಂದ ಜೇನು ಕುರುಬರ ನುಡಿಯಲ್ಲಿ 'ಅ'ಕಾರಾಂತ ನಾಮಪದಗಳು ಹಾಗೆ ಉಳಿದುಕೊಂಡಿರುವ ಸಾಧ್ಯತೆಯಿಂದೆ ಎಂದು ಕಲ್ಪಿಸಿಕೊಳ್ಳುತ್ತಾರೆ. ಈವೊಂದು ಭಾಷಿಕ ಲಕ್ಷಣ ಸೋಲಿಗ ಕನ್ನಡದಲ್ಲೂ ಕಂಡುಬರುತ್ತದೆ.

ಸೋಲಿಗರು ಪ್ರಾಣಿಗಳನ್ನು ಅವರದ್ದೆ ಆದ ಪದಕೋಶದ ಮೂಲಕ ವ್ಯವಹರಿಸುತ್ತಾರೆ.

| ಬರಹದ ಕನ್ನಡ | ಸೋಲಿಗ ಕನ್ನಡ |
|---|---|
| ಹುಲಿ | ದೊಡ್ಡನಾಯಿ |
| ಆನೆ | ಕಾಟಿದನ |
| ಕರಡಿ | ಕರ್ಡಿಮಾಮ |
| ನರಿ | ನರಿಯಣ್ಣ |
| ಹಾವು | ಸೆತ್ತೆ/ ಉಳು |
| ಹಂದಿ | ಕರಿಜಾರೆ |

ಹೀಗೆ ಪದಕೋಶದಲ್ಲೂ ವಿಶಿಷ್ಟವಾಗಿರುವುದೇ; ವಾಕ್ಯರಚನೆಯಲ್ಲೂ ವಿಶಿಷ್ಟವಾಗಿ ಬಳಕೆಯಲ್ಲಿರುವುದನ್ನು ಕಾಣಬಹುದು.

| | |
|---|---|
| ಜಾತ್ರೆಗೆ ಹೋಗುವುದಿಲ್ಲವಾ | ಜಾತ್ರುಗ ಒಗಕ್ಕಿಲಡ |
| ತೇರಿಗೆ ಎಸೆಯುವುದಕ್ಕೆ ಬಾ | ತೇರುಗ ಎಸ್ಕಕ ಬರುಡ |
| ನಾನು ಕಾಡಿಗೆ ಹೋಗಿದ್ದೀನಿ | ನಾ ಕಾಡ್ಗ ಒಗುನಿ |
| ಬೇಗನೆ ಬಂದು ಬಿಡಿ | ಬ್ಯಾಗ್ನೆ ಬಂದ್ಬುಡು |
| ಏಕೆ ಅಳುತ್ತಾ ಕುಳಿತಿರುವೆ | ದ್ಯಾಕ್ಡ ಕುನ್ನಿ ಅಳ್ತಾ ಕುತ್ತಾದೆ |
| ಇಟ್ಟು ಊಟ ಮಾಡಿಕೊಂಡು ಹೋಗು | ಇಟ್ಟವ ಉಂಡ್ಕೊಂಡು ಒಗಡಾ |

ಇವರಲ್ಲಿ ವ್ಯಕ್ತಿನಾಮಗಳು ಹೆಂಗಸು ಮತ್ತು ಗಂಡಸರಿಗೆ ಒಂದೆ ರೀತಿಯಲ್ಲಿ ಧ್ವನಿ ವ್ಯತ್ಯಾಸದಲ್ಲಿ ಬಳಕೆಯಲ್ಲಿವೆ. ಉದಾ: ಬೊಮ್ಮ-ಬೊಮ್ಮಿ, ಮಾದ-ಮಾದಿ, ಕ್ಯಾತ-ಕೇತಮ್ಮ, ಜಡೆಯ-ಜಡೆಯಮ್ಮ ಮುಂತಾದವು ಬಳಕೆಯಲ್ಲಿವೆ. ಸಮಕಾಲೀನ ಸಂದರ್ಭದಲ್ಲಿ ಜಾಗತೀಕರಣದ ಪ್ರಭಾವದಿಂದ ವ್ಯಕ್ತಿನಾಮಗಳಲ್ಲೂ ಬದಲಾವಣೆಯನ್ನು ಹೊಂದುತ್ತಿವೆ. ಮಾತುಗಳು ಬದಲಾವಣೆ ಆಗುತ್ತಿದೆ. ಧರಿಸುವ ಉಡುಪುಗಳಲ್ಲೂ ಬದಲಾವಣೆಯಾಗುತ್ತಿದೆ.

ಸೋಲಿಗರಲ್ಲಿ ಮದುವೆ ಹೆಣ್ಣನ್ನು ಆಯ್ಕೆ ಮಾಡುವ ಸಂದರ್ಭ ತುಂಬಾ ವಿಶಿಷ್ಟವಾಗಿದೆ. ಹೆಣ್ಣು ಗಂಡನ್ನು ಆಯ್ಕೆ ಮಾಡುವ ಸಂದರ್ಭವಂತೂ ಇನ್ನು ರೋಚಕವಾಗಿದೆ. ಕುಲದಲ್ಲಿ ಸಲ್ಲುವ ಮೋರೆಯಲ್ಲಿ ಹೆಣ್ಣನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಮುಖ್ಯವಾಗಿ ಹೆಣ್ಣನ್ನು ಸಾಕುವ ಧೈರ್ಯ ಆತನಿಗೆ ಇರಬೇಕು. ಮರವನ್ನು ಹತ್ತುವುದು ತಿಳಿದಿರಬೇಕು. ಕುಣಿತ ಹಾಗೂ ಹಾಡುವುದಕ್ಕೆ ಬರಬೇಕು. ಕುಣಿತ ಮಾಡುವಂತಹ ಸಂದರ್ಭದಲ್ಲಿ ತನಗೆ ಇಷ್ಟವಾದ ಗಂಡನ್ನು ಆಯ್ಕೆ ಮಾಡಿಕೊಂಡು ಕಾಡಿಗೆ ಇಬ್ಬರು ಓಡಿ ಹೋಗುತ್ತಾರೆ. ನಂತರ ಕುಲದ ಯಜಮಾನ ಗಂಡು-ಹೆಣ್ಣನ್ನು ಸಂಭಾಷಣೆ ಮಾಡುತ್ತಾನೆ.

| | |
|---|---|
| ಯಜಮಾನ | : ದ್ಯಾಕಡ ಕುನ್ನ ಈ ಯೆಣ್ಣ ಓಡ್ಸು ಒಗ್ರುವೆ ಎಂದು ಗಂಡನ್ನು ಯಜಮಾನ ಕೇಳುತ್ತಾನೆ. |
| ಗಂಡು | : ಇಂವ ನನ್ ಮ್ಯಾಲ ಬಾರಿ ಇಸ್ಪ ಪಟ್ರುದಾ ಅದ್ಕ ಕಾಡ್ಗ ಕರ್ದು ಒಡ್ರುವೆ. ಎಂದು ಹೇಳುತ್ತಾನೆ |
| ಯಜಮಾನ | : ಏಮಿ ಕುನ್ನಿ ಇವ್ನ ಮ್ಯಾಲ ಬಾರಿ ಇಸ್ಟವಾ |
| ಹೆಣ್ಣು | : ಅಂಯ್ಯ ಇವ್ನ ಮ್ಯಾಲ ನಂಗ ಬಾರಿ ಇಸ್ಪ ಆತು ಅದ್ಕ ಇಬ್ರು ಒಡ್ರು ಒಗ್ರುವೆ. |
| ಯಜಮಾನ | : ನೊಡು ಕುನ್ನ ಇವ್ಳ ಸಾಯ ಗಂಟಾನು ಎನ್ ಕಸ್ಪ ಬಂದ್ರುವೆ ಇಟ್ಟ ಬಟ್ಟೆ ಕೊಟ್ಟು ಬಂಡಾಗಿ ನೊಡ್ಕ ಮಕ್ಕು. ಎಂದು ಗಂಡನನ್ನು ಕುರಿತು ಯಜಮಾನ ಬುದ್ದಿವಾದ ಹೇಳುತ್ತಾನೆ. |
| ಹೆಣ್ಣನ್ನು ಉದ್ದೇಶಿಸಿ | : ನೊಡು ಕುನ್ನಿ ಇನ್ನ ಜತೆಯಲ್ಲಿ ಇರ್ಗಂಟ ಇವ್ನ ಜತ್ಗೆ ಬಂಡಾಗಿ ಬಾಳಕು ಎಂದು ಹೇಳಿ ಇಬ್ಬರನ್ನು ಒಂದು ಮಾಡಿ ಮದುವೆ ಮಾಡುತ್ತಾರೆ. |

ಮೇಲಿನ ಸಂಭಾಷಣೆ ಸಂದರ್ಭದಲ್ಲಿ ನುಡಿ ಸ್ವರೂಪವನ್ನು ಗಮನಿಸಿದಾಗ ಸೋಲಿಗರಲ್ಲಿ ಗಂಡಿಗೆ 'ಕುನ್ನ' ಎಂದೂ, ಹೆಣ್ಣಿಗೆ 'ಕುನ್ನಿ' ಎಂದು ಬಳಕೆ ಮಾಡುವರು. "ಏಕಪ್ಪ" ಎನ್ನುವುದನ್ನು "ದ್ಯಾಕಡ" ಎಂದು ಬಳಕೆಯಲ್ಲಿರುವುದು ಗಮನಿಸುವಂತಹ ಅಂಶವಾಗಿದೆ. ತಮಿಳಿನ ಪ್ರಭಾವದಿಂದ 'ವಾಡಡ' ಎಂಬುದರ ಸವಕಳಿ ರೂಪವಾಗಿ ಇವರಲ್ಲಿ ಈ ಸ್ವರೂಪದಲ್ಲಿ ಬಳಕೆಯಲ್ಲಿರಬಹುದು. ಚೆನ್ನಾಗಿ ನೋಡಿಕೊಳ್ಳಿ' ಎನ್ನುವುದಕ್ಕೆ 'ಬಂಡಾಗಿ' ಎನ್ನುವುದು ಸೋಲಿಗರ ನುಡಿಯಲ್ಲಿ ಬಳಕೆಯಲ್ಲಿದೆ.

ಹೀಗೆ ಕರ್ನಾಟಕದಲ್ಲಿ ನೆಲೆಸಿರುವ ಬುಡಕಟ್ಟು ಸಮುದಾಯಗಳ ಭಾಷಿಕ ರಚನೆ ಕುರಿತ ಅಧ್ಯಯನ ಆಗಬೇಕಾಗಿದೆ. ಬಿಡಿ ಬಿಡಿ ಬುಡಕಟ್ಟುಗಳ ಭಾಷೆ ಮತ್ತು ಸಂಸ್ಕೃತಿ ಸಂಬಂಧ ಕುರಿತ ಅಧ್ಯಯನಗಳು ಆಗಿವೆ. ಸಮಗ್ರ ಬುಡಕಟ್ಟುಗಳ ಅಧ್ಯಯನ ಆಗಿಲ್ಲ ಎಂದೆನಿಸುತ್ತದೆ.

### ೨.೯. ಅಧ್ಯಯನ ಸಮೀಕ್ಷೆ

ಭಾಷೆಯನ್ನು ಕುರಿತಾದ ಆಧ್ಯಯನಗಳು ನಡೆಯುತ್ತಾ ಹೋದಂತೆಲ್ಲ ವಿಷಯಗಳು ವಸ್ತುಕೋಶಗಳಾಗಿಯೇ ಗೋಚರಿಸುತ್ತವೆ. ಯಾವುದೇ ಒಂದು ಸಾಹಿತ್ಯ ಮತ್ತು ಭಾಷೆ ರಚನೆಯಾಗಬೇಕಾದರೆ ಪರಿಸರ, ಸಮುದಾಯ, ಭಾಷೆ ಅವಶ್ಯಕವಾಗಿರುತ್ತದೆ. ಭಾರತೀಯ ಸಾಮಾಜಿಕ ಪರಿಸರದಲ್ಲಿ ಜಾತಿ ಪ್ರಮುಖ ಸ್ಥಾನ ಪಡೆದಿರುವಂತೆಯೇ ಕರ್ನಾಟಕದಲ್ಲಿಯೂ ಸಾಮಾಜಿಕ ರಚನಾವ್ಯವಸ್ಥೆಯಲ್ಲಿ ಪ್ರಮುಖ ವ್ಯತ್ಯಯವಾಗಿದ್ದು, ಇದು ಭಾಷೆ ರಚನೆ ಬಳಕೆಯ ಮೇಲೆ ತನ್ನದೆ ಆದಂತಹ ಪ್ರಭಾವವನ್ನು ಬೀರಿದೆ. ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದಂತಹ ಇತಿಹಾಸ ಪರಂಪರೆ ಇದೆ. ಅವರದೇ ಆದ ಇತಿಹಾಸವಿದೆ. ಪ್ರಸ್ತುತ ಅಧ್ಯಯನವು ಜನಾಂಗೀಯ ಮೂಲವಾಗಿದ್ದು, ಅದರ ಸುತ್ತ ಮುತ್ತಲಿರುವಂತಹ ಭಾಷೆಯನ್ನು ಅಧ್ಯಯನಗಳ ಮೂಲಕ ಸಾಮಾಜಿಕ ವೈವಿದ್ಯತೆಯ ಆಧಾರದ ಹಿನ್ನಲೆಯಲ್ಲಿ ನಡೆದಿರುವಂತಹ ಅಧ್ಯಯನಗಳು ಕಡಿಮೆ. ಸೋಲಿಗ ಸಮುದಾಯದ ಭಾಷೆ ವಿವರಣಾತ್ಮಕ ಅಧ್ಯಯನಗಳು ಬಹಳಷ್ಟು ನಡೆದಿದೆ. ಆದರೆ ಸಾಮಾಜಿಕ ನೆಲೆಯಲ್ಲಿ ನಡೆದಿರಬಹುದಾದ ಅಧ್ಯಯನಗಳು ಕಡಿಮೆ. ಅದರಲ್ಲೂ ಭಾರತೀಯ ಪರಿಸರ ಮತ್ತು ಕನ್ನಡದ ಮಟ್ಟಿಗೆ ಇದುವರೆಗೂ ನಡೆದಿರಬಹುದಾದ ಸಾಮಾಜಿಕ ಭಾಷಿಕ ವಿಶ್ಲೇಷಣೆ ಮತ್ತು ಬುಡಕಟ್ಟು ಅಧ್ಯಯನಗಳಲ್ಲಿ ಭಾಷಿಕ ವಿಶ್ಲೇಷಣೆ ತೀರ ವಿರಳವೆಂದೇ ಹೇಳಬಹುದು. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಈ ಬುಡಕಟ್ಟು ಸಮುದಾಯ ಭಾಷೆಗೆ ಕುರಿತಂತೆ ಇದುವರೆಗೆ ನಡೆದಿರಬಹುದಾದ ಅಧ್ಯಯನಗಳನ್ನು ವಿವರಿಸಲಾಗಿದೆ.

ಕೆ. ಎಸ್. ಗುರುಬಸವೇಗೌಡ,ಅವರು ೧೯೬೮, Discriptive Analisis of Soliga, ಎಂಬ ಮಹಾಪ್ರಬಂಧದಲ್ಲಿ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಬಿಳಿಗಿರಂಗನ ಬೆಟ್ಟದ ಸೋಲಿಗ ಬುಡಕಟ್ಟು ಸಮುದಾಯದ ಭಾಷೆಯನ್ನು ಅಧ್ಯಯನ ಮಾಡಿದ್ದಾರೆ. ಇವರು ಸೋಲಿಗರು ಮಾತನಾಡುವ ಕನ್ನಡದ ರಚನೆಯನ್ನು ವಿವರಣಾತ್ಮಕವಾಗಿ ಅಧ್ಯಯನವನ್ನು ಮಾಡಿದ್ದಾರೆ. ಹೀಗೆ ಅಧ್ಯಯನ ಮಾಡುವಾಗ ಸೋಲಿಗರ ಕನ್ನಡದಲ್ಲಿ ಕನ್ನಡದ ಭಾಷೆಯ ಮೂಲ ಕನ್ನಡದ ಲಕ್ಷಣಗಳನ್ನು ಉಳಿಸಿಕೊಂಡಿದ್ದಾರೆ ಎಂದು ಹೇಳಲಾಗಿದೆ. ಹಾಗೆಯೇ Phonology and Morphology, Syntax ಇದರ ಬಗ್ಗೆ ವಿವರವಾಗಿ ಚರ್ಚೆಮಾಡಿದ್ದಾರೆ. ಸೋಲಿಗರ ನುಡಿಯ ಪದಕೋಶವನ್ನು ನೀಡಿದ್ದಾರೆ, ಮತ್ತು ಅವರ ಸಮುದಾಯದ ಕಥೆ ಹಾಗೂ ಅವರು ಜೇನು ಕೀಳುವ ಬಗೆಯನ್ನು ಅವರದೇ ಭಾಷೆಯಲ್ಲಿ ಸಂಗ್ರಹವನ್ನು ಮಾಡಿದ್ದಾರೆ.

ಗುರುಲಿಂಗಯ್ಯ ಅವರು ೨೦೦೪, 'ಬುಡಕಟ್ಟು ಮತ್ತು ಅಭಿವೃದ್ಧಿ' ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾಲಯ, ಕೃತಿಯಲ್ಲಿ ಕರ್ನಾಟಕದ ಬುಡಕಟ್ಟುಗಳ ಜನಾಂಗಗಳ ಮಾಹಿತಿಯನ್ನು ನೀಡಿದ್ದಾರೆ. ಸಮುದಾಯದಲ್ಲಿ ಅವರ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಬುಡಕಟ್ಟುಗಳ ಸಾಮಾಜಿಕ ಮತ್ತು ಆರ್ಥಿಕ ಸಾಂಸ್ಕೃತಿಕ ಜೀವನ ಮತ್ತು ಅವರ ಸಮಸ್ಯೆಗಳು ಮತ್ತು ಪರಿಹಾರ ಇಂತಹವುಗಳ ಅಭಿವೃದ್ಧಿಗೆ ಹೇಗೆ ಸಹಕಾರಿಯಾಗಿದೆ ಎಂಬಿತ್ಯಾದಿ ವಿಷಯಗಳ ಬಗ್ಗೆ ಚರ್ಚೆಮಾಡಿದ್ದಾರೆ.

ಡಿ.ಎನ್. ಶಂಕರ್‌ಭಟ್ಟ ಅವರು The Dilicat of kannada In Mysore District, ಎಂಬ ಲೇಖನದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ ಮತ್ತು ಹರಿಜನರ ಕನ್ನಡದ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ. ಹಾಗೆಯೇ ಕನ್ನಡ ಕಲ್ಪಿತ ಚರಿತ್ರೆಯಲ್ಲಿ (ಪುಟ ೮೨ ರಿಂದ ೮೪) ರವರೆಗೆ ೧೪ ನೆಯ ಶತಮಾನದಲ್ಲಿ ಹಳೆಗನ್ನಡದ ಶಕಟರೇಫ (    ) ಮತ್ತು ಕಂಪಿತ "ರ" ಇವರೆಡು ಧ್ವನಿಗಳನ್ನು ಬೇರೆ ಬೇರೆ ನಿದರ್ಶನಗಳ ಮೂಲಕ ಚರ್ಚೆಮಾಡಿದ್ದಾರೆ.

AADLUGI ಅವರು ೧೯೬೩ರಲ್ಲಿ The Tribes of Mysore ಗ್ರಂಥದಲ್ಲಿ ಕರ್ನಾಟಕದ ಬುಡಕಟ್ಟಿನ ಜನರ ಬಗೆಗೆ ಮತ್ತು ಅವರ ಬುಡಕಟ್ಟಿನ ವಿಚಾರಗಳನ್ನು ಹೇಳಲಾಗಿದೆ.

ಥರ್ಸ್ಟನ್ ಈ, Caste and Tribes of Southern India. Vol VI PP 379-86 (1909) ರವರು ಕೊಳ್ಳೇಗಾಲ ಹಾಗೂ ಡಿಂಬುಡಿಕ್ಕಿ ಹತ್ತಿರ ಇರುವಂತಹ ಸೋಲಿಗರ ಬಗ್ಗೆ ಮತ್ತು ಜನಾಂಗದ ಐದು ಕುಲದ ಬಗೆಗೆ ಚರ್ಚಿಸಿದ್ದಾರೆ. ಹಾಗೂ ಹನ್ನೆರಡು ಕುಲದ ಸೋಲಿಗರ ಬಗೆಗೆ ಹೇಳಿದ್ದಾರೆ. ಸೋಲಿಗರು ಕುಲಪಂಚಾಯಿತಿ, ಆಹಾರ ಸಂಗ್ರಹಣೆ, ವ್ಯವಸಾಯದ ಬಗ್ಗೆ ಮತ್ತು ಅವರ ಜೀವನ ಕ್ರಮಗಳ ಬಗ್ಗೆ ವಿವರಣೆಯನ್ನು ನೀಡಿದ್ದಾರೆ.

ಸೋಮಶೇಖರ ಗೌಡ ಅವರು (೨೦೦೭) ಸಾಮಾಜಿಕ ಭಾಷಾ ವಿಜ್ಞಾನ, ಪ್ರಸಾರಾಂಗ, ಮೈಸೂರು, ಈ ಕೃತಿಯಲ್ಲಿ ಸಮಾಜೋಭಾಷಿಕ ಅಧ್ಯಯನದ ವಿವಿಧ ಆಯಾಮಗಳ ಬಗ್ಗೆ ವಿವರಿಸಿದ್ದಾರೆ. ಸಮಾಜೋಭಾಷಿಕ ಅಧ್ಯಯನಕ್ಕೆ ಅಗತ್ಯವಾದ ಪೂರಕ ಮಾಹಿತಿಗಳನ್ನು ಈ ಕೃತಿಯು ಒಳಗೊಂಡಿದೆ. ಸಾಮಾಜಿಕ ಭಾಷಾ ವಿಜ್ಞಾನ ಅಧ್ಯಯನದ ವಿಭಿನ್ನ ನೆಲೆಗಳನ್ನು ಕುರಿತು ಚರ್ಚೆ ನಡೆಸಿದ್ದಾರೆ.

ಕೇಶವನ್ ಪ್ರಸಾದ. ಕೆ ಅವರು ೨೦೦೫ "ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ" ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಈ ಕೃತಿಯಲ್ಲಿ ಸೋಲಿಗರಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ನೀಡಿದ್ದಾರೆ. ಸೋಲಿಗ ಸಮುದಾಯಕ್ಕೆ ಸಂಬಂಧಿಸಿದಂತೆ, ಆಚಾರ ವಿಚಾರ, ಸಂಪ್ರದಾಯ ಸೋಲಿಗರಲ್ಲಿ ಪ್ರಚಲಿತದಲ್ಲಿರುವ ಜನಪದ ಕಾವ್ಯವನ್ನು ಸಂಗ್ರಹಿಸಿದ್ದಾರೆ. ಕಾವ್ಯವನ್ನು ಅರ್ಥಗರ್ಭಿತವಾಗಿ ತಿಳಿಸಿಕೊಟ್ಟಿದ್ದಾರೆ. ಸೋಲಿಗರ ಚೆಲುವೆ ಕುಸುಮಾಲೆಯನ್ನು ಬಿಳಿಗಿರಿರಂಗಸ್ವಾಮಿ ವರಿಸಿದ ಪ್ರಸಂಗ ಮತ್ತು ಬಿಳಿಗಿರಿ ರಂಗಸ್ವಾಮಿ ಸೋಲಿಗರಿಗೆ ಭಾವನಾದ ಪ್ರಸಂಗವನ್ನು ಈ ಕಾವ್ಯದಲ್ಲಿ ಚರ್ಚಿಸಿದ್ದಾರೆ. ಸೋಲಿಗ ಸಮುದಾಯದ

ಪರಿಚಯದೊಂದಿಗೆ ಈ ಕಾವ್ಯವನ್ನು ಬರೆದಿದ್ದಾರೆ. ಸೋಲಿಗರ ಕನ್ನಡದ ಪದಗಳಿಗೆ ಶಿಷ್ಟಕನ್ನಡದ ಭಾಷೆಯ ಅರ್ಥವನ್ನು ವಿವರಣಾತ್ಮಕವಾಗಿ ಕೊಟ್ಟಿದ್ದಾರೆ. ಪ್ರಸ್ತುತ ಕಾವ್ಯವು ಅಧ್ಯಯನಕ್ಕೆ ಸೂಕ್ತವಾದ ಆಕರ ಗ್ರಂಥವಾಗಿದೆ.

ಲೀಲಾ ಅಪ್ಪಾಜಿ ಅವರು ಸೋಲಿಗರ ವ್ಯಕ್ತಿನಾಮಗಳು ಒಂದು ವಿಶ್ಲೇಷಣೆ ಎಂಬ ಲೇಖನದಲ್ಲಿ ಸೋಲಿಗರ ವ್ಯಕ್ತಿನಾಮದ ಭಾಷಿಕ ವಿಶ್ಲೇಷಣೆಯಿಂದ ಅಲ್ಲಿನ ಒಂದು ಸಾಂಸ್ಕೃತಿಕ ಪರಿಸರವನ್ನು ಅನಾವರಣಗೊಳಿಸಿದ್ದಾರೆ. ಈ ಹಿನ್ನಲೆಗೆ ಸಂಬಂಧಪಟ್ಟಂತೆ ಬಿಳಿಗಿರಿರಂಗನ ಬೆಟ್ಟದಲ್ಲಿ ಕಂಡುಬರುವ ಸೋಲಿಗರ ವ್ಯಕ್ತಿನಾಮಗಳನ್ನು ಗುರುತಿಸಿ ಅವುಗಳ ಸ್ವರೂಪ ಮತ್ತು ಕಾರಣಗಳನ್ನು ವಿಶ್ಲೇಷಿಸಿದ್ದಾರೆ. ತಲೆಮಾರಿನಿಂದ ತಲೆಮಾರಿಗೆ ವ್ಯಕ್ತಿನಾಮಗಳು ಹೇಗೆ ಬದಲಾವಣೆಗೊಳ್ಳುತ್ತದೆ ಎಂಬುದನ್ನು ಈ ಲೇಖನದಲ್ಲಿ ವಿವರಿಸಿ ಹೇಳಿದ್ದಾರೆ.

ಎಚ್.ಎನ್. ಸೋಮಸುಂದರಂ ಅವರು ೨೦೦೯ ಸೋಲಿಗ ಸಿರಿ ವಿವೇಕಾನಂದ ಗಿರಿಜನ ಕಲ್ಯಾಣ, ಬಿಳಿಗಿರಿರಂಗನ ಬೆಟ್ಟ ಈ ಕೃತಿಯಲ್ಲಿ ಸೋಲಿಗರ ಸಂಸ್ಕೃತಿಯ ಕಿರುನೋಟವನ್ನು ನೀಡುತ್ತದೆ. ಸಂಸ್ಕೃತಿ ಸಮುದಾಯಗಳ ಬಗ್ಗೆ ನಮಗೆ ತಿಳಿಯುತ್ತದೆ. ಇವರು ಸಹ ಸೋಲಿಗ ಪದದ ಉಗಮ, ಸೋಲಿಗ ಪದರಚನೆ ಹೇಗೆ ಬಂತು ಮತ್ತು ಸೋಲಿಗ ಭಾಷೆಯು ಸಂಬಂಧಪಟ್ಟಂತೆ ಹೆಚ್ಚು ಸೋಲಿಗ ಪದದ ನಿಷ್ಪತ್ತಿ ಜನಾಂಗದ ಲಕ್ಷಣಗಳು, ಜಾನಪದದ ಸೊಬಗು, ಪಾರಿಭಾಷಿಕ ಪದಗಳು ಹಾಡಿ ಒಗಟು, ಕಗ್ಗತದ ಗಾದೆಗಳಲ್ಲಿ ರೂಪಿಸಿಕೊಂಡಿರುವುದು ಕಂಡುಬರುತ್ತದೆ. ಅವರ ಸಮುದಾಯದ ಹಿರಿಕರಿಂದ ಜಾನಪದ ಸೊಬಗು ಕುಲಕಸುಬುಗಳನ್ನು ಹೇಗೆ ನಡೆಸಿಕೊಂಡು ಬಂದಿದ್ದಾರೆ ಎಂಬ ಜೀವನ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ.

ಹಿ.ಚಿ. ಬೋರಲಿಂಗಯ್ಯ ಅವರು (೨೦೦೦) ಬುಡಕಟ್ಟು ದೈವಾರಾಧನೆಯಲ್ಲಿ ಸೋಲಿಗರ ಮನೆಯ ದೇವರುಗಳು ಮತ್ತು ಅವರು ಆರಾಧಿಸುವ ದೈವಗಳು ಮತ್ತು ಆಚರಣೆಗಳನ್ನು ಸಮಗ್ರವಾಗಿ ವಿವರಿಸಿದ್ದಾರೆ. ಸಮುದಾಯದ ಜನರು ಯಾವ ರೀತಿಯಲ್ಲಿ ದೈವವನ್ನು ನಂಬಿ ಜೀವನವನ್ನು ನಡೆಸುತ್ತಾರೆ ಎಂಬುದನ್ನು ಹಾಗೆಯೇ ಹಬ್ಬ ಹರಿದಿನಗಳಲ್ಲಿ ಆಚರಿಸುವಂತಹ ದೈವಗಳ ಕಟ್ಟುನಿಟ್ಟಿನ ಕ್ರಮಗಳನ್ನು ಚಿತ್ರಿಸಿದ್ದಾರೆ.

ಸುನಂದಮ್ಮ ಎನ್ ಅವರು (೨೦೧೧) ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಸೋಲಿಗ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರ್ಕಾರದ ಕಾರ್ಯಕ್ರಮಗಳು: ಒಂದು ವಿಮರ್ಶಾತ್ಮಕ ಅಧ್ಯಯನ ಎಂಬ ಸಂಪ್ರಬಂಧವನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ಸೋಲಿಗರ ಜೀವನ ವಿಧಾನ, ಆರ್ಥಿಕ ರಾಜಕೀಯ ಸಮಸ್ಯೆಗಳು. ಸರ್ಕಾರವು ಸಮುದಾಯದ ಜನರಿಗೋಸ್ಕರ ತೆಗೆದುಕೊಂಡಿರುವ ಕಾರ್ಯಕ್ರಮಗಳು, ಹಾಗೆಯೇ ಜನಸಂಖ್ಯಾ ದೃಷ್ಟಿಯಿಂದ ಹೆಚ್ಚಿನ ಜನಸಂಖ್ಯೆಯಲ್ಲಿರುವುದರಿಂದ ಅವರ ಸಮಸ್ಯೆಗಳನ್ನು ಆರ್ಥಿಕ ಸ್ಥಿತಿಗತಿಗಳನ್ನು ಚರ್ಚಿಸಿದ್ದಾರೆ.

ನಂಜುಂಡಸ್ವಾಮಿ ಅವರುಶ್ರೀ ಬಿಳಿಗಿರಿ ರಂಗನಾಥಸ್ವಾಮಿಯ ಹಬ್ಬ ಮತ್ತು ಜಾತ್ರೆ ವಿಷಯವನ್ನು ಕುರಿತು ಜಾನಪದ ವಿಭಾಗದಲ್ಲಿ ಸ್ನಾತಕೋತ್ತರ ಪದವಿಗಾಗಿ ಸಲ್ಲಿಸಿರುವ ಕಿರುಪ್ರಬಂಧದಲ್ಲಿ ಸೋಲಿಗರ ಭಾವ ಎಂದು ಪ್ರಸಿದ್ದನಾದ ಬಿಳಿಗಿರಿರಂಗಪ್ಪನ ಬಗ್ಗೆ ಹೇಳಲಾಗಿದೆ, ಇಲ್ಲಿ ಚಿಕ್ಕಜಾತ್ರೆ ಮತ್ತು ದೊಡ್ಡ ಜಾತ್ರೆಯ ಸಮಯದಲ್ಲಿ ಸೋಲಿಗ ಸಮುದಾಯ ಕುಲಗಳು ಒಂದೊಂದು ಕೆಲಸ ಮಾಡುವಂತಹ ಅವರ ಪಾತ್ರದ ಬಗ್ಗೆ ಚಿತ್ರಿಸಿದ್ದಾರೆ.

ಕೆ.ಎಂ. ಮೈತ್ರಿ ಅವರು ತಮ್ಮ "ಬುಡಕಟ್ಟು ಕುಲಕಸುಬುಗಳು" ಎಂಬ ಗ್ರಂಥದಲ್ಲಿ, ಸೋಲಿಗ, ಕಾಡುಕುರುಬ, ಜೇನುಕುರುಬ, ಹಕ್ಕಿ-ಪಿಕ್ಕಿ ಕೆಲವು ಸಮುದಾಯಗಳ ಕುಲಕಸುಬುಗಳ ಬಗ್ಗೆ ವಿವರಣೆಯನ್ನು ನೋಡಿದ್ದಾರೆ. ಸೋಲಿಗರು ಮಾಡುವಂತಹ ಅವರ ಕುಲಕಸುಬುಗಳನ್ನು ಯಾವ ರೀತಿ ಮಾಡುತ್ತಿದ್ದಾರೆ. ಸೋಲಿಗರು ಜೇನು ಸಂಗ್ರಹಣೆ ಮತ್ತು ಬುಟ್ಟಿ ಹೆಣೆಯುವುದು, ಅವರ ಜೀವನದ ಕಟ್ಟುಪಾಡುಗಳನ್ನು ಹಾಗೂ ಅವರ ಪಾರಂಪರಿಕ ಆಹಾರ ಸಂಗ್ರಹಣಾ ಮಾದರಿ ಮತ್ತು ವೃತ್ತಿಯಾಧಾರಿತ ಜೀವನ ಪದ್ದತಿಯನ್ನು ಚರ್ಚಿಸಿದ್ದಾರೆ. ಈ ಗ್ರಂಥವು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿರುವುದರಿಂದ ಆಕರವಾಗಿ ಬಳಸಿಕೊಳ್ಳಲಾಗಿದೆ.

ಸೋಲಿಗರ ಕುಲದ ಬಗ್ಗೆ ಚಂದ್ರಪ್ಪನವರು "ಸೋಲಿಗರು ಒಂದು ಅಧ್ಯಯನ"(೧೯೯೦) ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ ಮಹಾಪ್ರಬಂಧವು ಪದವಿಗಾಗಿ ಕನ್ನಡ ಜಾನಪದ ವಿಭಾಗಕ್ಕೆ ಸಲ್ಲಿಸಿದ್ದಾರೆ. ಇವರು ಅವರ ಕುಲದ ವಿಚಾರಗಳನ್ನು ಸಮಗ್ರವಾಗಿ ಚರ್ಚಿಸಿದ್ದಾರೆ. ಸಮುದಾಯದ ಕುಲದ ಕೆಲಸಗಳು ಅವರು ನಿರ್ವಹಿಸುವಂತಹ ಜವಬ್ದಾರಿಯನ್ನು ನೀಡಿದ್ದಾರೆ. ಈ ಸಂಶೋಧನಾ ಗ್ರಂಥವು ಸಮಾಜಶಾಸ್ತ್ರ ಹಾಗೂ ಮಾನವಶಾಸ್ತ್ರೀಯ ನೆಲೆಯಲ್ಲಿ ಈ ಬುಡಕಟ್ಟು ಜನಾಂಗವನ್ನು ಅಧ್ಯಯನ ಮಾಡಿದ್ದಾರೆ. ಈ ಗ್ರಂಥವು ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ.

ಅನಂತಕೃಷ್ಣ ಅಯ್ಯರ್ ಎಲ್.ಕೆ. ಅವರು(೧೯೯೮) The Mysore Tribals and Caste (ಮಿತ್ತಲ್ ಪಬ್ಲಿಕೇಶನ್ಸ್, ಹೊಸದೆಹಲಿ), ಸೋಲಿಗರ ಸಂಸ್ಕೃತಿಯ ವಿವರವಾದ ಹಾಗೂ ಕ್ಷೇತ್ರ ಕಾರ್ಯಾಧಾರಿತ ಮಾಹಿತಿಯ ಮೂಲಕ ಅವರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದ ಬಗ್ಗೆ ವಿರಣೆಯನ್ನು ನೀಡಿದ್ದಾರೆ. ಸೋಲಿಗರು ಯೌವನ ಆಚರಣೆ, ಮದುವೆ, ಅಂತ್ಯಸಂಸ್ಕಾರ, ವಿವಾಹ, ಮುಂತಾದ ಆಚರಣೆಗಳು ಹಾಗೂ ಅವರ ಸಾಮಾಜಿಕ ಜೀವನ ಆರ್ಥಿಕತೆಯ ಬಗ್ಗೆ ತಿಳಿಸಿದ್ದಾರೆ. ಈ ಗ್ರಂಥದಿಂದ ಅಧ್ಯಯನಕಾರರಿಗೆ ಸೋಲಿಗರ ಧಾರ್ಮಿಕ ಆಚರಣೆಯ ಬಗ್ಗೆ ಮತ್ತು ಪುರಾಣ ಪುರುಷರ ಬಗೆಗೆ ಕೆಲವು ಮಾಹಿತಿಗಳು ದೊರಕುತ್ತದೆ. ಈ ಗ್ರಂಥವು ಪ್ರಸ್ತುತ ಅಧ್ಯಯನಕ್ಕೆ ಮಾಹಿತಿಯನ್ನು ಒದಗಿಸಿಕೊಡುವಲ್ಲಿ ಸಹಾಯಕಾರಿಯಾಗಿದೆ.

ಗಂಗಾಧರ ದೈವಜ್ಞ ಅವರ ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ (೨೦೦೧) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಈ ಗ್ರಂಥದಲ್ಲಿ ಸೋಲಿಗರ ಸೃಷ್ಟಿ ಪುರಾಣಗಳು ಮತ್ತು ಅವರ ಬಗ್ಗೆ ಹಾಗೂ ಜನನ ಸಂಬಂಧಿ ಸಾವಿನ ನಂತರ ಮಾಡುವ ಆಚರಣೆಗಳನ್ನು ಈ ಗ್ರಂಥದಲ್ಲಿ ಸಮಗ್ರ ವಿವರಣೆಯನ್ನು ನೀಡಿದ್ದಾರೆ. ಈ ಗ್ರಂಥವು ಅಧ್ಯಯನಕ್ಕೆ ಪೂರಕವಾಗಿ ಬಳಕೆಯಾಗುತ್ತದೆ.

ಗೀತಾ. ಎಂ. ಯಾಕಂಚಿ ಅವರು(೨೦೦೮) ಬುಡಕಟ್ಟು ಅಧ್ಯಯನ ಸಂಪದ-೫ ಸಂಚಿಕೆ -೨ ಜುಲೈ-ಡಿಸೆಂಬರ್ ಪುಟ.ಸಂ.೬. ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಟ್ಟದಿಂದ ಬಯಲಿಗೆ ಸೋಲಿಗರ ಸಾಂಸ್ಕೃತಿಕ ಯಾತ್ರೆ ಈ ಲೇಖನದಲ್ಲಿ ಸೋಲಿಗರ ಜನಸಂಖ್ಯೆ, ಅವರ ಪರಂಪರೆಯನ್ನು ಕುರಿತು ಹೇಳಿದ್ದಾರೆ, ಹಾಗೆಯೇ ಅವರು ಮಾಡುವಂತಹ ಕೃಷಿ ಪದ್ದತಿ ಮತ್ತು ಆಹಾರ ಪದ್ದತಿ, ಸಮುದಾಯಗಳು ವೃತ್ತಿ ಮತ್ತು ಕುಲಕಸುಬುಗಳಲ್ಲಿ ಎತ್ತರಕ್ಕೇರುವ ಒಂದು ಅವಕಾಶವನ್ನು ಕಲ್ಪಿಸಿಕೊಂಡು ವರ್ತಮಾನದಲ್ಲಿ ನಾಗರೀಕರಣದ ಸಂದರ್ಭದಲ್ಲಿ ಸಮುದಾಯ ಬದಲಾವಣೆಗೊಳ್ಳುತ್ತಿರುವುದನ್ನು ಚಿತ್ರಿಸಿದ್ದಾರೆ.

ಸೋಮಶೇಖರ ಗೌಡ ಅವರು(೨೦೧೦) ಭಾಷೆ ರಚನೆ ಮತ್ತು ಬಳಕೆ ಈ ಕೃತಿಯಲ್ಲಿ ಭಾಷೆ ಬಳಕೆ ಕಾಲಕಾಲಕ್ಕೆ ತಕ್ಕಂತೆ ಬೆಳವಣಿಗೆಯಾಗುತ್ತಿದೆ. ಜೊತೆಗೆ ಭಾಷಾ ವಿಜ್ಞಾನದ ಇನ್ನಿತರ ಅನ್ವಯಿಕ ಶಾಖೆಗಳನ್ನು ಪರಿಚಯ ಮಾಡಿಕೊಡಲಾಗಿದೆ. ಆಧುನಿಕ ಸಂದರ್ಭದಲ್ಲಿ ಕನ್ನಡ ಲಿಪಿಯು ಹೆಚ್ಚು ಹೆಚ್ಚು ಸಂಸ್ಕರಣೆ ಆಗುತ್ತಿದೆ. ಇದಕ್ಕೆ ಕಾರಣಗಳನ್ನು ಚರ್ಚಿಸಲಾಗಿದೆ. ಮುಂದುವರೆದ ಆಧುನಿಕ ಭಾಷಾ ಶಾಸ್ತ್ರವು ದ್ವಿಭಾಷಿಕತೆ ಮತ್ತು ಭಾಷಾಮಿಶ್ರಣ ಹಾಗೆಯೇ ನುಡಿಬೆರಕೆ ನುಡಿಪಲ್ಲಟ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹಾಗಾಗಿ ಈ ಹಿನ್ನೆಲೆಯಲ್ಲಿ ಕೃತಿಯು ನನ್ನ ಸಂಶೋಧನಾ ವಿಷಯಕ್ಕೆ ಪೂರಕ ಆಕರವಾಗಿ ಬಳಸಿಕೊಳ್ಳಲಾಗಿದೆ.

ಕೆಂಪೆಗೌಡ (೨೦೦೩) ಅವರ ಕನ್ನಡ ಉಪಭಾಷೆಗಳ ಅಧ್ಯಯನ ಎಂಬ ಕೃತಿಯಲ್ಲಿ ಕನ್ನಡ ಉಪಭಾಷೆಗಳ ಹುಟ್ಟು ಬೆಳವಣಿಗೆ ಹಾಗೆಯೇ ಉಪಭಾಷೆಗಳು ಉಂಟಾಗಲು ಕಾರಣಗಳನ್ನು ಸವಿಸ್ತಾರವಾಗಿ ಚರ್ಚೆ ಮಾಡಲಾಗಿದೆ. ಕನ್ನಡ ಉಪಭಾಷೆಗಳ ವರ್ಗೀಕರಣ ಅವುಗಳನ್ನು ನಿರ್ಧರಿಸುವ ಅಂಶಗಳಾದ ಭೌಗೋಳಿಕತೆ, ಐತಿಹಾಸಿಕತೆ, ಸಾಮಾಜಿಕತೆ ಮುಂತಾದ ವಿಷಯ ಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡಿದ್ದಾರೆ. ಕರಾವಳಿ ಕನ್ನಡ, ಮೈಸೂರು ಕನ್ನಡ, ಗಡಿನಾಡು ಕನ್ನಡ ಹಾಗೂ ಹೊರನಾಡು ಕನ್ನಡಗಳ ಸ್ವರೂಪವನ್ನು ವಿವರಿಸುವುದರ ಜೊತೆಗೆ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಭಾಷೆ ಉಪಭಾಷೆ ವ್ಯಕ್ತಿಭಾಷೆ ಶಿಷ್ಟ ಭಾಷೆ ಮುಂತಾದವುಗಳ ಸಂಬಂಧ ಸ್ವರೂಪಗಳನ್ನು ಸಮಗ್ರವಾಗಿ ವಿವರಣೆ ನೀಡಿದ್ದಾರೆ. ಈ ಹಿನ್ನಲೆಯಲ್ಲಿ ಅಧ್ಯಯನಕ್ಕೆ ಆಕರವಾಗಿದೆ.

ಕೆ.ಎಂ.ಮೈತ್ರಿ, ಚಲುವರಾಜು. ಸಂ.(ಬುಡಕಟ್ಟು ಅಧ್ಯಯನ ಸಂಪುಟ-೩ ಸಂಚಿಕೆ-೨ ಜುಲೈ-ಡಿಸೆಂಬರ್ ೨೦೦೬) ಈ ಅಧ್ಯಯನ ಕೃತಿಯಲ್ಲಿ ಎಂ.ಕೃಷ್ಣನಾಯ್ಕರವರ "ಕುನ್ನ ಜೀತಕ ಬನ್ನ" ಎಂಬ ಲೇಖನವಿದೆ. ಇದರಲ್ಲಿ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲೂಕುನಲ್ಲಿ ಕಂಡುಬರುವಂತಹ ಸೋಲಿಗ ಬುಡಕಟ್ಟು ಭಾಷೆಯನ್ನು ಕುರಿತಾದ ಏಕಾಂತ ಪ್ರಸಂಗವನ್ನು ರಚಿಸಿದ್ದು, ಸೋಲಿಗರ ಭಾಷೆ ಮತ್ತು ಸಂಸ್ಕೃತಿಯನ್ನು ಏಕಾಂತ ಪ್ರಸಂಗದೊಳಗೆ ಪ್ರದರ್ಶನ ರೂಪದಲ್ಲಿ ತಂದಿದ್ದಾರೆ. ಇದರಲ್ಲಿ ನಾಮಪದ, ಸರ್ವನಾಮಗಳು, ಕ್ರಿಯಾಪದ, ಕ್ರಿಯಾ ವಿಶೇಷಣಗಳು ಮತ್ತು ಸಂಖ್ಯಾವಾಚಿಗಳು ಈ ಭಾಷಾ ಸ್ವರೂಪದ ಹಿನ್ನಲೆಗಳಿಂದ ಸೋಲಿಗರ ಭಾಷೆಯನ್ನು ಸಾಂಸ್ಕೃತಿಕವಾಗಿ ವಿವರಿಸಲಾಗಿದೆ. ಅಲ್ಲದೆ ಆಧುನಿಕ ಸಂದರ್ಭದಲ್ಲಿ ಜಾಗತಿಕ ಭಾಷೆಯಾದ ಆಂಗ್ಲಭಾಷೆಯ ನುಡಿಗಳು ಸೋಲಿಗರ ಭಾಷೆಯಲ್ಲಿ ನುಡಿಬೆರೆಕೆ-ನುಡಿಪಲ್ಲಟದ ರೂಪವನ್ನು ಪಡೆದು ಬಳಕೆಯಾಗುವುದರ ಬಗ್ಗೆ ಇಲ್ಲಿ ಗಮನಿಸಲಾಗಿದೆ

ಕೇಶವನ್ ಪ್ರಸಾದ್ ಕೆ. ಅವರ ಬುಡಕಟ್ಟು ವಿಸ್ಮಯ ಎಂಬ ಕೃತಿ ಸೋಲಿಗರ ಸಮಾಜಿಕ ಮತ್ತು ಸಂಸ್ಕೃತಿಯನ್ನು ಕುರಿತಾಗಿದೆ. ಈ ಒಂದು ಕೃತಿಯಲ್ಲಿ ಬುಡಕಟ್ಟು ಆಚರಣೆ, ನಂಬಿಕೆ, ಸಾಹಿತ್ಯ, ಪಾರಂಪರಿಕ ಜ್ಞಾನ. ಒಟ್ಟಾರೆ ಸೋಲಿಗರ ಮೌಖಿಕ ಪಾರಂಪರಿಕ ಜ್ಞಾನವನ್ನು ಕುರಿತಾದ ಕೃತಿ. ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಕಂಡುಬರುವ ಸ್ಥಳನಾಮಗಳು, ಸ್ಥಳ ಐತಿಹ್ಯಗಳ ಬಗ್ಗೆ ವಿವಸಿರುವುದನ್ನು ಗಮನಿಸಬಹುದು. ಆದರೆ ಬಂಗಲೆಪೋಡು, ಆನೆಗುಂಡಿ ಪೋಡು, ಸೀಗೆಪೋಡು, ಪುರಾಣಿಪೊಡು, ಮಂಜಿಗುಂಡಿಪೋಡು ಈ ಸ್ಥಳ ಐತಿಹ್ಯಗಳನ್ನು ಕುರಿತಾಗಿ ವಿಶ್ಲೇಷಣೆ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ಸೋಲಿಗರ ಸಾವಿನ ಆಚರಣೆಯನ್ನು ಯಾವ ರೀತಿ ಮಾಡುತ್ತಾರೆ. ಆಚರಣೆ ಮಾಡುವಂತಹ ಸಂದರ್ಭದಲ್ಲಿ ಅವರು ಬಳಸಿರುವಂತಹ ಭಾಷೆಯನ್ನು ಗಮನಿಸಬಹುದಿತ್ತು. ಇವರು ಆಚರಣೆ ಮತ್ತು ವಿಧಿವಿಧಾನಗಳನ್ನು ತಿಳಿಸಿದ್ದಾರೆ. ಈ ಲೇಖನವು ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿದಂತಾಗುತ್ತದೆ. ನಂತರ ಸೋಲಿಗರ ಬದುಕುನ್ನು ಈ ಲೇಖನದಲ್ಲಿ ವಿವರಿಸಿದ್ದಾರೆ.

ಸೋಲಿಗ ಸಿದ್ದಿ-೨ ಸಂಯೋಜಿತ ಅಭ್ಯಾಸ ಪುಸ್ತಕ, ಕರ್ನಾಟಕ ಸರ್ಕಾರ. ಎರಡನೆಯ ತರಗತಿ-ಸೋಲಿಗ ಬುಡಕಟ್ಟು ಸಮುದಾಯದ ಮಕ್ಕಳಿಗಾಗಿ ಕರ್ನಾಟಕ ಸರ್ಕಾರ ರೂಪಿಸಿರುವ ಪಠ್ಯ ಪುಸ್ತಕವಾಗಿದೆ. ಈ ಪುಸ್ತಕದಲ್ಲಿ ಸೋಲಿಗ ಬುಡಕಟ್ಟು ಮಕ್ಕಳ ಶೈಕ್ಷಣಿಕ ಅಭಿವೃದ್ದಿಗೆ ಪುಸ್ತಕವನ್ನು ಸರ್ಕಾರ ರಚನೆಯನ್ನು ಮಾಡಿದೆ. ಇದರಲ್ಲಿ ಭಾಷೆಯನ್ನು ಸೋಲಿಗ ಕನ್ನಡದ ಭಾಷೆಯಲ್ಲಿ ರಚಿಸಿದ್ದಾರೆ. ಸಮುದಾಯದ ಮಕ್ಕಳಿಗೆ ಸಮುದಾಯದ ಭಾಷೆಯನ್ನು ಬಳಸಿ ರಚಿಸಲಾಗಿದೆ. ಗಣಿತ ಪರಿಸರ ಅಧ್ಯಯನಗಳನ್ನು ಸಮುದಾಯದ ಭಾಷೆಯಲ್ಲಿ ಚಿತ್ರ ಮತ್ತು ಚಟುವಟಿಕೆ ಆಧಾರಿತವಾಗಿ ರಚಿಸಿದ್ದಾರೆ. ಈ ಒಂದು ಪುಸ್ತಕವು ಶೈಕ್ಷಣಿಕ ಅಭಿವೃದ್ದಿಗೆ ಪೂರಕ ಸಾಮಗ್ರಿಯಾಗಿದೆ. ಇದರಿಂದ ಮಕ್ಕಳ ಶೈಕ್ಷಣಿಕ ಪ್ರಗತಿ ಸಾಧಿಸುವಲ್ಲಿ ಸಹಕಾರಿಯಾಗಿದೆ.

ರಂಗಸ್ವಾಮಿ.ಎ (ಸಂ), ೨೦೧೦, ದ್ರಾವಿಡ ಭಾಷೆಗಳು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಮೈಸೂರು. ಪುಟ ಸಂ.೩೧-೩೨ ಕೃತಿಯಲ್ಲಿ ಸೋಲಿಗ ಕನ್ನಡವನ್ನು ವಿಶ್ಲೇಷಣೆ ಮಾಡಿದ್ದಾರೆ. ಬುಡಕಟ್ಟು ಸಮುದಾಯದ ಭಾಷೆ ಹಳಗನ್ನಡದ ಅಕ್ಷರಗಳನ್ನು ಇನ್ನೂ ಉಳಿಸಿಕೊಂಡಿರುವ ಬಗ್ಗೆ ಇಲ್ಲಿ ಮಾಹಿತಿಯನ್ನು ನೀಡಿದ್ದಾರೆ. ಸೋಲಿಗ ಭಾಷೆಯು ತಮಿಳು ಮತ್ತು ತೆಲುಗು ಭಾಷೆಗಳ ಪ್ರಭಾವವನ್ನು ಒಳಗೊಂಡಿದೆ ಎಂಬುದನ್ನು ಹೇಳುವುದರ ಮೂಲಕ ಅವರ ಸಮುದಾಯದ ಭಾಷೆಯಲ್ಲಿ  ಅಂದರೆ ಸೋಲಿಗ ನುಡಿಯಲ್ಲಿ ಹವ್ಯಕ ಕನ್ನಡ, ಬಡಗಕನ್ನಡ ಮತ್ತು ಕೊಡಗು ಕನ್ನಡದಂತೆ  ಹಳಗನ್ನಡದ ಕೆಲವು ಪದಗಳು ಇನ್ನು ಉಳಿದುಕೊಂಡಿದೆ ಎಂದು ಹೇಳಿದ್ದಾರೆ. ಸೋಲಿಗ ಕನ್ನಡದಲ್ಲಿ 'ವ' ಕಾರ 'ಬ' ಕಾರವಾಗಿದೆ. ಆದರೆ ಅದು 'ಹ' ಕಾರವಾಗಿಲ್ಲ ಎಂದು ಹೇಳಿದ್ದಾರೆ. ಹಾಗೆಯೇ ಹಳಗನ್ನಡದ ಅಕ್ಷರಗಳಾದ ಶಕಟರೇಪ ಮತ್ತು ಕಂಪಿತ ಅಕ್ಷರಗಳು ಇನ್ನೂ ಸೋಲಿಗ ಕನ್ನಡದ ಧ್ವನಿಯಲ್ಲಿ ಉಳಿದುಕೊಂಡಿದೆ ಎಂದು ಹೇಳಿದ್ದಾರೆ. ನನ್ನ ಅಧ್ಯಯನಕ್ಕೆ ಇದು ಪೂರಕ ಸಾಮಗ್ರಿಯಾಗಿ ಕಂಡುಬರುತ್ತದೆ.

ಆಂಜಿನೇಯ "ಮ್ಯಾಸಬೇಡರ ಕನ್ನಡ: ಸಮಾಜೋಭಾಷಿಕ ಅಧ್ಯಯನ" ೨೦೦೬ ಅಪ್ರಕಟಿತ ಸಂಶೋಧನಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ. ಪ್ರಬಂಧದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲಸಿರುವ ಮ್ಯಾಸಬೇಡರು ಬಳಸುವ ಕನ್ನಡವನ್ನು ಸಾಮಾಜಿಕ ಭಾಷಾವೈಜ್ಞಾನಿಕ ಹಿನ್ನಲೆಯಲ್ಲಿ ಅಧ್ಯಯನವನ್ನು ಮಾಡಿದ್ದಾರೆ. ಮ್ಯಾಸಬೇಡರು ಬಳಸುವ ಕೌಟುಂಬಿಕ ವಲಯದಲ್ಲಿ ಯಾವ ರೀತಿ ಭಾಷೆಯನ್ನು ಬಳಸುತ್ತಾರೆ ಎಂಬುದನ್ನು ತಿಳಿಸಿದ್ದಾರೆ. ಭಾಷೆಯು ವ್ಯವಹಾರಿಕವಾಗಿ ಬಳಸುವ ಕನ್ನಡ ಭಾಷೆಗೂ ಅವರ ಒಂದು ಸಮುದಾಯದವರೊಡನೆ ಮಾತನಾಡುವ ಭಾಷೆಗೂ ಯಾವರೀತಿ ವ್ಯತ್ಯಾಸವಾಗುತ್ತದೆ ಎಂಬುದನ್ನು ಭಾಷಾ ವೈಜ್ಞಾನಿಕ ಹಿನ್ನಲೆಯಲ್ಲಿ ಅಧ್ಯಯನ ಮಾಡಿದ್ದು, ಇಂತಹ ದ್ವಿಭಾಷಿಕ ಸನ್ನಿವೇಶದಲ್ಲಿ ಉಂಟಾಗುವ ನುಡಿಬೆರೆಕೆ ಮತ್ತು ನುಡಿಮಿಶ್ರಣ ಯಾವ ಒಂದು ಸಂದರ್ಭದಲ್ಲಿ ಬಳಸುತ್ತಾರೆ ಎಂಬುದನ್ನು ಇದರಲ್ಲಿ ವಿಶ್ಲೇಷಿಸಿದ್ದಾರೆ. ಕೌಟುಂಬಿಕ ವಲಯ ಮತ್ತು ವ್ಯವಹಾರಿಕ ವಲಯವನ್ನು ಪರಿಗಣಿಸಿ ಸಮಾಜೋಭಾಷಿಕ ಹಿನ್ನಲೆಯಲ್ಲಿ ಮ್ಯಾಸಬೇಡರ  ಬುಡಕಟ್ಟು ಸಮುದಾಯವನ್ನು ಅಧ್ಯಯನ ಮಾಡಿದ್ದಾರೆ.

ಸೋಲಿಗರು-ಮೈ.ನ. ನಾಗರಾಜ-೧೯೮೫ ಐಬಿಎಚ್ ಪ್ರಕಾಶನ. ಈ ಒಂದು ಗ್ರಂಥದಲ್ಲಿ ಸೋಲಿಗರ ಸಂಸ್ಕೃತಿಗೆ ಸಂಬಂಧಪಟ್ಟಂತೆ ವಿಷಯಗಳನ್ನು ಕಲೆ ಹಾಕಿದ್ದಾರೆ. ಗ್ರಂಥದಲ್ಲಿ ಪೌರಾಣಿಕ ದಂತಕಥೆಗಳನ್ನು ಅವರು ಹುಟ್ಟಿನ ಬಗ್ಗೆ ತಿಳಿಸಿದ್ದಾರೆ. ಅವರ ವೇಷಭೂಷಣ ಅವರ ದೈಹಿಕ ಚಹರೆ ಮತ್ತು ಬದುಕಿನ ಕಷ್ಟ ಪರಿಸ್ಥಿತಿಯನ್ನು ಇಲ್ಲಿ ತಿಳಿಸಿಕೊಟ್ಟಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಅವರ ಪಾತ್ರ ಮತ್ತು ಕಟ್ಟುನಿಟ್ಟುಗಳೇನು? ಎಂಬುದನ್ನು ಹಾಗೆಯೇ ವೃತ್ತಿ ಪ್ರವೃತ್ತಿ ನಂಬಿಕೆಗೊಂದು ಭಾಷೆ ಎನ್ನುವಂತದ್ದು ಸೋಲಿಗರು ಸೋಲಿಗರ ಕನ್ನಡ ಎಂಬುದನ್ನು ಬಳಕೆ ಮಾಡಿಕೊಂಡು

ಇವರು "ರ" ಕಾರಕ್ಕೆ "ಲ"ಕಾರವನ್ನು ಉಪಯೋಗಿಸುತ್ತಾರೆ. "ಬರೆ"-ಮಲಿಯಾಗುತ್ತದೆ. ಮಕ್ಕಳು ಎನ್ನುವುದಕ್ಕೆ ಮಕ್ಕಗ ಎಂದು ಸಂಬೋಧನೆ ಮಾಡುತ್ತಾರೆ ಎಂಬುದನ್ನು ತಿಳಿಸಿದ್ದಾರೆ. ಇವರಿಗೆ ತಮಿಳಿನ ಪ್ರಭಾವ ಇವರ ಮೇಲೆ ಬೀರಿದೆ. ಕನ್ನಡ-ತಮಿಳು ವಿಶ್ರಣವೇರ್ಪಟ್ಟಿದೆ ಎಂದಿದ್ದಾರೆ. ಇವರು ಮಾತನಾಡುವಂತಹ ಸಂದರ್ಭದಲ್ಲಿ ಇವರು ಬಿಡಿ ಬಿಡಿಯಾಗಿ ಉಚ್ಚಾರಣೆ ಮಾಡುತ್ತಾರೆ. ಸೋಲಿಗರ ಬದುಕಿನಲ್ಲಿ ಕಂಡುಬರುವಂತಹ ಆಚರಣೆ ಮತ್ತು ಸಂಪ್ರದಾಯಗಳು ಹಾಗೂ ಅವರ ಕುಲಪಂಗಡಗಳ ಪ್ರಕಾರಗಳು ಬಿಳಿಗಿರಿರಂಗಪ್ಪ ಅವರಿಗೆ ಭಾವನಾದ ಕಥೆಯ ಸ್ಪಷ್ಟ ಚಿತ್ರಣವನ್ನು ನೀಡಿದ್ದಾರೆ. ಇನ್ನೂ ಹೆಚ್ಚಿನ ಭಾಷಿಕ ವಿಶ್ಲೇಷಣೆಯನ್ನು ಕೊಡಬಹುದಾಗಿತ್ತು. ಈ ಒಂದು ಕೃತಿಯು ಒಟ್ಟಾರೆಯಾಗಿ ಅವರ ಸಂಸ್ಕೃತಿ ಮತ್ತು ಆಚಾರ ವಿಚಾರದ ಬಗ್ಗೆ ಅಧ್ಯಯನ ಮಾಡಲು ಇದು ಪ್ರಮುಖವಾದ ಆಕರ ಗ್ರಂಥವಾಗಿದೆ.

ಎಸ್ ಎನ್. ಶ್ರೀಧರ್ ಅವರು "ಇಂದಿನ ಕನ್ನಡ ರಚನೆ ಮತ್ತು ಬಳಕೆ" (೨೦೧೧) ಶ್ರೀಧರ್ ರವರು ಈ ಪುಸ್ತಕದಲ್ಲಿ ಭಾಷೆಯನ್ನು ಕುರಿತು ಸಾಮಾಜಿಕ ಮತ್ತು ಮಾನವಶಾಸ್ತ್ರ ನೆಲೆಯಲ್ಲಿ ಮತ್ತು ಸಮಾಜಶಾಸ್ತ್ರದ ಹಿನ್ನಲೆಯಲ್ಲಿ ಕುರಿತು ಚರ್ಚಿಸಿದ್ದಾರೆ. ಈ ಕೃತಿಯು ಅನ್ಯಭಾಷೆ ಬಳಕೆ ಹಾಗೂ ನುಡಿಬೆರೆಕೆ ಮತ್ತು ನುಡಿಜಿಗಿತಗಳ ಬಗ್ಗೆ ಒಂದು ತಾತ್ವಿಕ ಆಯಾಮವನ್ನು ಕಟ್ಟಿಕೊಡುವಲ್ಲಿ ತುಂಬಾ ಸಹಾಯಕಾರಿಯಾಗಿದೆ. ಕನ್ನಡ ಭಾಷೆಯನ್ನು ಜಾಗತೀಕ ಚಿಂತನೆಗಳಲ್ಲಿ ತೊಡಗುವಂತೆ ಈ ಕೃತಿಯು ವಿಷಯವನ್ನು ನೀಡುತ್ತದೆ. ಅಧ್ಯಯನಕ್ಕೆ ಸಂಬಂಧಪಟ್ಟಂತೆ ನುಡಿಬೆರೆಕೆ ಮತ್ತು ನುಡಿಜಿಗಿತಗಳು ಯಾವ ಯಾವ ಸಂದರ್ಭಗಳಲ್ಲಿ ಹೇಗೆ ಆಗುತ್ತವೆ ಎಂಬುದನ್ನು ಸಂಪೂರ್ಣವಾದ ಮಾಹಿತಿಯನ್ನು ನೀಡಿದ್ದಾರೆ. ಜಾಗತೀಕರಣಕ್ಕೆ ಸಂಬಂಧಿಸಿದಂತೆ ಈ ಕೃತಿಯು ಸಂಶೋಧನೆಗೆ ಪೂರಕವಾದ ಮಾಹಿತಿಯನ್ನು ಒದಗಿಸಿಕೊಡುವ ಆಕರ ಗ್ರಂಥವಾಗಿದೆ.

ಡಾ. ಕೆಂಪೇಗೌಡ ಅವರು "ಸಮಾನ್ಯ ಭಾಷಾ ವಿಜ್ಞಾನ" (೧೯೯೬) ಭಾಷೆ ಮಾನವನ ಜೀವನದಲ್ಲಿ ಒಂದು ಅತ್ಯತ್ತಮವಾದ ಸಾಧನ, ಸಾಹಿತ್ಯ, ಜಾನಪದ, ಮಾನವಶಾಸ್ತ್ರ ಸಮಾಜಶಾಸ್ತ್ರ ಮುಂತಾದವುಗಳ ಅಧ್ಯಯನದಲ್ಲಿ ಭಾಷೆಯ ನೆರವು ಅಗತ್ಯವಾದುದಾಗಿದೆ. ಭಾಷೆಗಳ ಅಧ್ಯಯನ ಹೆಚ್ಚು ವಿದ್ವಾಂಸರನ್ನು ಆಕರ್ಷಿಸುತ್ತದೆ. ಇದಕ್ಕೆ ಭಾಷೆ ಮತ್ತು ಭಾಷಾ ವಿಜ್ಞಾನಗಳಲ್ಲಿ ಸಾಮಾನ್ಯ ತಿಳುವಳಿಕೆ ಅವಶ್ಯಕವಾಗಿರುತ್ತದೆ. ಈ ದೃಷ್ಟಿಯಿಂದ ಭಾಷೆ ಎಂದರೇನು ? ಭಾಷಾ ವಿಜ್ಞಾನ ಎಂದರೇನು, ಭಾಷೆಯ ಸ್ವರೂಪ, ಲಕ್ಷಣ ಮತ್ತು ಪ್ರಭಾವ ಭಾಷೆಯಿಂದ ಪ್ರಯೋಜನಗಳು ಭಾಷೆಯ ವಿವಿಧ ರೂಪಗಳು ಭಾಷೆ ಮತ್ತು ಬರಹ ಬರಹದ ಭಾಷೆ, ಸಮಾಜ ಮತ್ತು ಸಂಸ್ಕೃತಿ ಹೇಗೆ ಆಧ್ಯಾಯಗಳಾಗಿ ರೂಪಿಸಿಕೊಂಡ ಸಮಗ್ರವಾಗಿ ನಿರೂಪಿಸಿದ್ದಾರೆ. ಕನ್ನಡ ಭಾಷೆಗಳ ಅಧ್ಯಯನಕ್ಕೆ ಇದು ಉತ್ತಮವಾದ ಆಕರ ಗ್ರಂಥವಾಗಿದೆ.

ಪಿ ಮಹಾದೇವಯ್ಯ ಅವರು "ಕನ್ನಡ ನುಡಿ ಬಳಕೆಯ ನೆಲೆಗಳು (೨೦೧೪) ಭಾಷಿಕವಾಗಿ ಇಲ್ಲಿ ಮೂರು ಲೇಖನಗಳು ಭಾಷೆಗೆ ಸಂಬಂಧಪಟ್ಟಂತ ಮಾಹಿತಿಯನ್ನು ನೀಡುವಂತಹ ಲೇಖನಗಳಾಗಿವೆ. ಭಾಷೆ ಸಮಾಜ ಮತ್ತು ಸಂಸ್ಕೃತಿ, ರಾಜಕೀಯ ಮತ್ತು ಭಾಷೆ, ಸಮೂಹ ಮಾಧ್ಯಮಗಳು ಮತ್ತು ಭಾಷೆ. ಈ ಲೇಖನಗಳು ಪ್ರಸ್ತುತ ಸಂದರ್ಭವನ್ನು ಲಕ್ಷಿಸಿ ರಚಿತವಾಗಿರುವ ಲೇಖನಗಳಾಗಿವೆ. ವಿವಿಧ ವಲಯಗಳಲ್ಲಿ ಬಳಕೆಯಾಗುತ್ತಿರುವ ಭಾಷಾ ಬಳಕೆಯನ್ನು ಗುರಿಯಾಗಿಸಿಕೊಂಡು. ಈ ಲೇಖನಗಳನ್ನು ರಚಿಸಲಾಗಿದೆ. ಭಾಷೆ ಸಮಾಜ ಮತ್ತು ಸಂಸ್ಕೃತಿಗೆ ಹೇಗೆ ಅವಲಂಬಿತವಾಗಿದೆ ಎಂಬುದನ್ನು ಈ ಕೃತಿಯಿಂದ ತಿಳಿದುಬರುತ್ತದೆ.

ಸೋಲಿಗ ಸಮುದಾಯದ ಈವರೆಗಿನ ಅಧ್ಯಯನದ ಸಮೀಕ್ಷೆಯಿಂದ ಅವರ ಪಾರಂಪರಿಕ ಜ್ಞಾನ ಹಾಗೂ ಭಾಷೆ ಮತ್ತು ಕಾಡಿನಲ್ಲಿರುವ ಬದುಕು ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಕುರಿತ ಈ ಸಮೀಕ್ಷೆಯಲ್ಲಿ ಒಂದು ಸ್ಥೂಲವಾದ ಚಿತ್ರಣವನ್ನು ಒದಗಿಸಿಕೊಡುತ್ತದೆ. ಸೋಲಿಗರು ದಟ್ಟವಾದ ಕಾಡಿನ ಮಧ್ಯಭಾಗದಲ್ಲಿದ್ದರೂ ಸಹ ಇವರ ಆಚರಣೆ ಮತ್ತು ಸಂಪ್ರದಾಯಗಳು ಅವರ ಭಾಷೆಯು ವಿಶೇಷವಾಗಿ ಕಂಡುಬರುತ್ತದೆ. ಇಂತಹ ಒಂದು ಪರಿಸ್ಥಿತಿಯಲ್ಲಿ ಈ ಸಮುದಾಯದವರು ನಾಡಿನವರ ಜೊತೆ ಜನಸಂಪರ್ಕವನ್ನು ಮತ್ತು ಅವರ ಸಮಾಜದೊಂದಿಗಿನ ವ್ಯವಹಾರ ಹಾಗೂ ಮಾರುಕಟ್ಟೆ ಗ್ರಾಹಕರೊಂದಿಗೆ ವ್ಯವಹಾರ ಮುಂತಾದವುಗಳಿಗಾಗಿ ನಾಡಿನ ಜನರ ಒಡನಾಟ ಬೆಳೆಯುತ್ತಿರುವುದರಿಂದ ಅವರ ಒಂದು ಬದುಕು ಮತ್ತು ಭಾಷೆ ಬದಲಾವಣೆಗಳುತ್ತಿರುವುದನ್ನು ನೋಡಬಹುದಾಗಿದೆ. ಆದುದರಿಮದ ಸಂಸ್ಕೃತಿ ಮತ್ತು ಭಾಷೆಯು ಆಧ್ಯಯನವನ್ನು ಮಾಡುವುದು ತುಂಬಾ ಅವಶ್ಯಕವಾಗಿದೆ.

## ಕೊನೆಟಿಪ್ಪಣಿಗಳು

೧. ಸೋಲಿಗರು, ಚಾಮರಾಜನಗರ ವೆಬ್.ಕಾಮ್

೨. ಅದೇ

೩. ಚಂದ್ರುಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪುಟ ಸಂ.೧೨೫

೪. ಕೇಶವನ್ ಪ್ರಸಾದ್ ಕೆ. ೧೯೯೮ ಮಲೆಮಾಹದೇಶ್ವರ ಕಾವ್ಯ ಪುಟ ಸಂ ೮೯

೫. ಎಂ. ಭೈರೇಗೌಡ, ಇರುಳಿಗರ ಜಾನಪದ ಅಧ್ಯಯನ. ಪುಟ ಸಂ.೩೬

೬. ಸುನಂದಮ್ಮ ೨೦೧೧ ಬುಡಕಟ್ಟು ಅಭಿವೃದ್ಧಿಗಳು ಪುಟ ಸಂ ೪೨

೭. ಎಂ. ಭೈರೇಗೌಡ, ಇರುಳಿಗರ ಜಾನಪದ ಅಧ್ಯಯನ. ಪುಟ ಸಂ.೩೮

೮. ತೀ.ನಂ. ಶಂಕರನಾರಾಯಣ, ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆ. ಪುಟ ಸಂ ೧೨

೯. ನಾಗರಾಜ ಮೈ.ನ, ೧೯೮೫, ಸೋಲಿಗರು ಪುಟ ಸಂ.೩

೧೦. ಕೇಶವನ್ ಪ್ರಸಾದ್.೨೦೦೫, ಬುಡಕಟ್ಟು ವಿಸ್ಮಯ, ಪುಟ ಸಂ.೨೯

# ಅಧ್ಯಾಯ–ಮೂರು

# ಸೋಲಿಗ ಕನ್ನಡ ಬಳಕೆಯ ನೆಲೆಗಳು

# ಅಧ್ಯಾಯ–ಮೂರು

# ಸೋಲಿಗ ಕನ್ನಡ ಬಳಕೆಯ ನೆಲೆಗಳು

## ೩.೧. ಗಾದೆಗಳು

ಯಾವುದೇ ಜನಾಂಗದ ಅಥವಾ ಸಮುದಾಯದ ಜಾನಪದ ಸಾಹಿತ್ಯ ಪ್ರಕಾರಗಳಲ್ಲಿ ಗಾದೆ–ಒಗಟುಗಳದ್ದು ಪ್ರಮುಖ ಪಾತ್ರವಹಿಸುತ್ತದೆ, ಇವು ಭಾಷೆ ಬಳಕೆಯ ವಿಶಿಷ್ಟ ರಚನೆಯಾಗಿದ್ದು. ಗಾದೆಗಳು ಸಾಮಾಜಿಕ ರಚನೆಯನ್ನು ಸಮುದಾಯಗಳ ನಡೆನುಡಿಯನ್ನು ಬಿಂಬಿಸುತ್ತದೆ. ಸಮಾಜದ ಬದುಕಿನಲ್ಲಿ ಪರಸ್ಪರರ ಬಗೆಗಿನ ತಿಳುವಳಿಕೆಯನ್ನು ಮತ್ತು ಮನೋಭಾವಗಳನ್ನು ಗಾದೆಗಳು ಹಾಗೂ ಒಗಟುಗಳ ಮುಖಾಂತರ ಅಭಿವ್ಯಕ್ತಪಡಿಸುವುದನ್ನು ಕಾಣಬಹುದಾಗಿದೆ. ಸಮುದಾಯಗಳು ಪರಸ್ಪರರೊಂದಿಗೆ ವ್ಯವಹರಿಸುವಂತಹ ಸಂದರ್ಭದಲ್ಲಿ ಹಾಗೆಯೇ ಇತರ ಜನಸಾಮಾನ್ಯರಿಗೆ ತಿಳಿದಿರುವಂತಹ ವಿಚಾರಗಳನ್ನು ಅವರ ದಿನನಿತ್ಯದ ಅನುಭವಗಳನ್ನು ಗಾದೆಗಳ ಮೂಲಕ ಅಭಿವ್ಯಕಿಸುತ್ತಿರುವುದನ್ನು ಈ ಮೂಲಕ ನೋಡಬಹುದಾಗಿದೆ. ಗಾದೆಗಳಿಲ್ಲದ ಭಾಷೆಯೊಂದು ಹುಡುಕಿದರೆ ಸಿಗಲಾರದೇನೋ. ಆದಿವಾಸಿಯಾಗಲಿ, ಜನಪದ ಸಮಾಜದ ಸದಸ್ಯನಾಗಲಿ, ನಗರವಾಸಿಯಾಗಲಿ ಪ್ರಜ್ಞಾ ಪೂರ್ವಕವಾಗಿಯೇ ಅಪ್ರಜ್ಞಾ ಪೂರ್ವಕವಾಗಿಯೇ ಗಾದೆಯನ್ನು ಮಾತಿನ ಮಧ್ಯೆ ಬಳಸುತ್ತಾನೆ. ಆಡು ಮುಟ್ಟದ ಸೋಪ್ಪಿಲ್ಲ ಎನ್ನುವಂತೆ ಗಾದೆ ಮುಟ್ಟದ ಬದುಕಿನ ಭಾಗವಿಲ್ಲ. ಜೆಮ್ಸ್ ಎ ಕಿಲ್ಲೊರವರು ಹೇಳುವಂತೆ ಸಂಕ್ಷಿಪ್ತತೆ, ತೀಕ್ಷ್ಣತೆ ಸಾರವತ್ತತೆ ಹಾಗೂ ಜನಪ್ರಿಯತೆಗಳ ಗಾದೆಯ ಲಕ್ಷಣಗಳೆಂದಿರುವುದನ್ನು ಒಪ್ಪಬಹುದಾಗಿದೆ.[೧] ಗಾದೆ ವೇದಕ್ಕೆ ಸಮಾನವೆಂದು, ಜನವಾಣಿಯೇ ಜನಾರ್ಧನವಾಣಿಯೆಂಬ ಲೋಕೋಕ್ತಿಗಳಂತೆ ಇವುಗಳನ್ನು ಇಂತಹವರೆ ಪ್ರಯೋಗಿಸಬೇಕು ಎಂಬ ನಿಯಮಗಳಿಲ್ಲದೆ ಮಾನವನ ಸಹಜ ಮಾತುಕತೆಗಳಿಂದ ಹಿಡಿದು ಬರಹ ಭಾಷಣ, ಚರ್ಚೆ, ಬೋಧನೆ ಭಾಷೆಯನ್ನು

ಬಳಸುವ ಕಡೆಯಲ್ಲೆಲ್ಲ ಗಾದೆಗಳು ಆ ಸಂದರ್ಭಕ್ಕೆ ಅನುಗುಣವಾಗಿ ಮಾತುಗಳು ಹೊರಡುತ್ತವೆ. ಗಾದೆಗಳಿಗೆ ಮೇಲ್ನೋಟಕ್ಕೆ ಕಾಣುವ ಅರ್ಥ ಒಂದಿದ್ದರೆ ಅದರ ಒಳಾರ್ಥ ಬೇರೊಂದು ಇರುತ್ತದೆ. ಆ ಒಂದು ಒಳಾರ್ಥವನ್ನು ತಿಳಿದುಕೊಂಡಾಗ ಮಾತ್ರ ಆ ಗಾದೆಯ ಉದ್ದೇಶ ಸ್ಪಷ್ಟವಾಗಿ ತಿಳಿಯುತ್ತದೆ.[3] ಗಾದೆಯು ನೂರು ಅಡಿಯಲ್ಲಿ ಹೇಳಬೇಕಾದದ್ದನ್ನು ಮೂರು ಅಡಿಯಲ್ಲಿ ಹೇಳುತ್ತದೆ. ಆದುದರಿಂದಲೆ, ಆಕ್ಸಫರ್ಡ್ ನಿಘಂಟಿನಲ್ಲಿ ಗಾದೆಯನ್ನು ಸಾಮಾನ್ಯ ಬಳಕೆಯಲ್ಲಿನ ಚಿಕ್ಕ ಹೇಳಿಕೆ ಎಂದಿದ್ದಾರೆ.

ಗಾದೆಗಳು ಸಂಸ್ಕೃತಿಯನ್ನು ಪ್ರತಿನಿಧಿಸುತ್ತಾ ತಲೆಮಾರುಗಳಿಂದ ಉಳಿದುಕೊಂಡು ಬಂದಿದೆ. ಆದ್ದರಿಂದ ಗಾದೆಗಳನ್ನು ಮಾನವಶಾಸ್ತ್ರೀಯ ದೃಷ್ಟಿಯಿಂದ ಓರೆ ಹಚ್ಚಿದಾಗ ಸ್ವಾರಸ್ಯ ವಿಚಾರಗಳು ಬಿಚ್ಚಿಕೊಳ್ಳುತ್ತದೆ. ಗಾದೆ ಅಥವಾ ಒಗಟುಗಳ ಹುಟ್ಟು ಯಾವಾಗ ಆಯಿತೆಂಬುದಕ್ಕೆ ಲಿಖಿತ ಆಧಾರಗಳಿಲ್ಲ, ಮಾನವ ಭಾಷೆಯನ್ನು ಕಲಿತಾಗಲೆ ಗಾದೆಗಳನ್ನು ವ್ಯಕ್ತಪಡಿಸುವುದನ್ನು ಕಲಿತ. ಆದರೆ ತುಂಬಾ ಪುರಾತನ ಕಾಲದಿಂದಲೂ ವೇದ ಉಪನಿಷತ್ತುಗಳಲ್ಲಿ ಬೈಬಲ್, ಕುರಾನ್ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ರಾಮಾಯಣ, ಮಹಾಭಾರತ ಪ್ರಾಚೀನ ಮಹಾಕಾವ್ಯಗಳಲ್ಲಿ ಗಾದೆಯ ಮಾತುಗಳನ್ನು ಕಾಣಬಹುದಾಗಿದೆ. ಆದರೆ ಈ ಗಾದೆಯ ಕರ್ತೃ ಎಲ್ಲ ಆರಂಭದ ದಿನಗಳಲ್ಲಿ ಕೇವಲ ವಾಚಿಕ ಪರಂಪರೆಯಲ್ಲಿ ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆ ಆಗಿದೆ. ಜೀವನದ ಅಪಾರ ಅನುಭವವುಳ್ಳ ವ್ಯಕ್ತಿಯು ಕಿರಿಯರು ತಪ್ಪಿ ನಡೆದಾಗ ಅವರನ್ನು ತಿದ್ದುವ ಸಲುವಾಗಿ ಅತ್ಯಂತ ಅರ್ಥಗರ್ಭಿತವಾದ ಮಾರ್ಮಿಕವಾದ ಈ ನುಡಿಗಳು ಸಹಜವಾಗಿ ಹೊರಹೊಮ್ಮಿವೆ. ಅನಂತರದಲ್ಲಿ ಅದು ಮುಂದುವರಿಕೆಯಾಗಿ ಉಳಿದುಕೊಂಡು ಬಂದಿದೆ. ಅವುಗಳು ಕಾಡಿನ ಜನರಿಗೂ ಪ್ರಭಾವ ಬೀರುವ ಮೂಲಕ ಗಾದೆಗಳಲ್ಲಿ ತಮ್ಮ ಅನುಭವದ ಅಂಶವನ್ನು ಸೇರಿಸಿಕೊಂಡು ಸಮುದಾಯಕ್ಕೆ ಪೂರಕವಾದ ರೀತಿಯಲ್ಲಿ ಬದಲಾವಣೆಗೆ ಒಳಪಡಿಸಿದ್ದಾರೆ. ಗಾದೆಗಳು ಪ್ರತಿಯೊಂದು ಸಮುದಾಯದಲ್ಲೂ ಇದೆ. ಆದರೆ ಅದು ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಜೊತೆಗೆ ಅನ್ಯ ಸಮುದಾಯಗಳಲ್ಲಿ ಇರುವ ಗಾದೆ ಅಲ್ಲಿನ ಬದಲಾವಣೆಯೊಂದಿಗೆ ತಮ್ಮದಾಗಿಸಿಕೊಂಡಿರುವ ಸಾಧ್ಯತೆಗಳು ಇವೆ.

ಗಾದೆಗಳು ಅನುಭವಗಳಿಂದ ಹುಟ್ಟಿದಂತಹವುಗಳೆಂದು ಹೇಳಬಹುದು. ಈ ಅನುಭವ ಕೇವಲ ಒಬ್ಬನದೇ ಆಗಿರುವುದಿಲ್ಲ. ಜನಸಾಮಾನ್ಯರ ತಾರ್ಕಿಕ ಅನುಭವದ ಒಂದು ಗ್ರಂಥ ಎಂದರೆ ತಪ್ಪಾಗಲಾರದು. ಗಾದೆ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆಗೊಳ್ಳುವಾಗ ಅನೇಕ ರೂಪಾಂತರಗಳನ್ನು ಪಡೆದುಕೊಳ್ಳುತ್ತವೆ. ಗಾದೆಗಳು ಹುಟ್ಟಿದ ಜಾಗದಲ್ಲಿಯೇ ಸುತ್ತುತ್ತವೆ ಅಥವಾ ಯಾವುದೊಂದು ಪ್ರದೇಶಕ್ಕೆ ಸೀಮಿತವಾಗಿರುತ್ತದೆ ಎಂದು ಹೇಳಲಾಗದು. ಇವು ಭಾಷೆ, ಸಮುದಾಯದ, ಸೀಮೆಗಳನ್ನು ದಾಟಿ ಸಂಚರಿಸಬಲ್ಲದ್ದು. ಗಾದೆಗಳು

ತಮ್ಮ ಅಸ್ತಿತ್ವದಲ್ಲಿ ಪರಸ್ಪರ ಆಂತರಿಕ ಸಂಬಂಧವನ್ನು ಹೊಂದಿದವುಗಳಲ್ಲ. ಒಂದು ಗಾದೆಯು ಇನ್ನೊಂದು ಗಾದೆಯಂತೆ ಕಂಡರು ಸಹ ವಿವರಣಾತ್ಮಕ ವಿಷಯಗಳು ಬೇರೆ ಬೇರೆಯಾಗಿ ತಿಳಿಸಿಕೊಡುತ್ತದೆ. ಒಂದು ಗಾದೆಯಿಂದ ಇನ್ನೊಂದು ಗಾದೆ ಯಾವುದೇ ಸಂದರ್ಭದಲ್ಲೂ ಹುಟ್ಟುವುದಿಲ್ಲ. ಹುಟ್ಟಿನ ಮೂಲ ಕೂಡ ಒಂದೇ ಆಗಿರಲು ಸಾಧ್ಯವಿಲ್ಲ. ಇದು ಒಂದು ಅನುಭವದ ಮೇಲೆ ಒಂದೊಂದು ಗಾದೆಯು ಕಂಡುಬರುತ್ತದೆ.

ಗಾದೆಗಳು ಸಮಾಜದ ವಿಶಾಲವಾದಂತಹ ವಿಷಯಗಳನ್ನು ಒದಗಿಸಿಕೊಡುತ್ತದೆ. ಸಮಾಜದ ಸ್ವರೂಪ ಕಟ್ಟುಪಾಡುಗಳು ನಂಬಿಕೆ, ಆಚರಣೆ, ಕುಲಸಂಬಂಧ ಮುಂತಾದ ವಿಷಯಗಳನ್ನು ಸಂಗ್ರಹಿಸಿಕೊಡುತ್ತದೆ. ಸಮುದಾಯದಲ್ಲಿ ಹಲವು ಜಾತಿ ಜನಾಂಗ ಉದ್ಯೋಗಸ್ಥರು, ಅಕ್ಷರಸ್ಥರು, ಅನಕ್ಷರಸ್ಥರು, ಸಹಜವಾಗಿ ಕಂಡುಬರುತ್ತಾರೆ. ನಮ್ಮದು ಕೃಷಿ ಪ್ರಧಾನ ದೇಶವಾಗಿರುವುದರಿಂದ ನಮ್ಮ ಜನಪದರ ಮುಖ್ಯ ಉದ್ಯೋಗ ಒಕ್ಕಲುತನದಲ್ಲಿಯೇ ತಮ್ಮ ಜೀವಿತಾವಧಿಯ ಬಹುಕಾಲವನ್ನು ಕಳೆಯುತ್ತಿದ್ದಾರೆ. ಕೃಷಿ ಸಂಬಂಧಿಯಾದಂತಹ ಅನುಭವ, ಒಕ್ಕಲಿಗನ ಜೀವನ ಸ್ವಭಾವಗಳು ಅವನ ಪರಿಸರ– ಹೊಲ ಗದ್ದೆ ತೋಟ ಉತ್ತುವುದು ಬಿತ್ತುವುದು ಇತ್ಯಾದಿಗಳ ಬಗ್ಗೆ ಅಪಾರವಾದ ಜ್ಞಾನವನ್ನು ಗಾದೆಗಳಲ್ಲಿ ಕಾಣಬಹುದಾಗಿದೆ.

ಗಾದೆಯಿಂದ ಮನುಷ್ಯನ ಸ್ವಭಾವಗಳನ್ನು ಅವನ ಹಾವಭಾವಗಳನ್ನು ಗುರುತಿಸುವಂತಹ ಸಹಜವಾದ ಲಕ್ಷಣಗಳನ್ನು ಕಂಡುಕೊಳ್ಳಬಹುದಾಗಿದೆ. ಇಲ್ಲಿ ಲಿಂಗವನ್ನಾಧರಿಸಿ ನೋಡಿದಾಗ ಗಂಡು ಹೆಣ್ಣುಗಳ ಸ್ವಭಾವಗಳನ್ನು ಹಿಡಿದಿಡುವಲ್ಲಿ ಗಾದೆಗಳು ಮಹತ್ವದ ಪಾತ್ರವನ್ನು ವಹಿಸುತ್ತದೆ. ಗಾದೆಯು ಭಾಷೆಯ ಜೀವಾಳವಿದ್ದಂತೆ, ಅನುಭವದ ವೇದಗಳು ಇದ್ದಂತೆ ಎಂದು ಅನೇಕ ವಿದ್ವಾಂಸರು ಹೇಳಿದ್ದಾರೆ. ಜನ ಜೀವನದ ಸರಿತಪ್ಪುಗಳನ್ನು ಎತ್ತಿ ತೋರಿಸುವಲ್ಲಿ ರೀತಿ ನೀತಿಗಳನ್ನು ತಿಳಿಸಿಕೊಡುವಲ್ಲಿ ಗಾದೆಗಳು ಪ್ರಮುಖವಾಗಿ ಪ್ರಭಾವ ಬೀರುತ್ತವೆ. ಗಾದೆಗಳು ಚಿಕ್ಕ ವಾಕ್ಯಗಳಂತೆ ಇದ್ದರೂ ಕೂಡ ಅವುಗಳು ಕೊಡುವಂತಹ ಅರ್ಥ ಹಿರಿಯದಾಗಿದೆ. ಗಾದೆಗಳು ಜೀವನವನ್ನು ಪ್ರತಿಬಿಂಬಿಸುವ ಭಾಷೆಯಾಗಿ ಕಂಡುಬರುತ್ತದೆ.[1]

ಸೋಲಿಗರು ವಾಸಿಸುವ ಪರಿಸರ ದಟ್ಟವಾದ ಕಾಡಾದರು ನಾಡಿನ ಜನರ ಸಂಪರ್ಕ ಅವರಿಗೆ ಒಂದು ವಿಧದಲ್ಲಿ ಇದ್ದೆ ಇರುತ್ತದೆ. ಗಾದೆ ಒಂದು ಅಪೂರ್ವವಾದ ಸಂಪತ್ತಾಗಿ ಅವರಲ್ಲಿದೆ. ಗಾದೆಗಳಲ್ಲಿ ಕಾಣುವ ಮುಖ್ಯ ವಿಷಯವೆಂದರೆ ಬಯಲು ನಾಡಿನ ಗಾದೆಗಳಿಗೂ ಸೋಲಿಗರ ಸಮುದಾಯದ ಗಾದೆಗಳಿಗೂ, ಕೆಲವೊಂದು ಭೌಗೋಳಿಕವಾದ ವ್ಯತ್ಯಾಸ ಕಂಡುಬರುತ್ತದೆ. ಸೋಲಿಗರು ಕಾಡಿನ ಪರಿಸರದಲ್ಲಿ ತಮ್ಮದೇ ಆದ ಬದುಕನ್ನು ರೂಪಿಸಿಕೊಂಡಿದ್ದಾರೆ. ತಮ್ಮ ಆಚಾರ ವಿಚಾರಕ್ಕೆ ತಕ್ಕಂತೆ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಗಾದೆ, ಹಾಡು ಒಗಟುಗಳನ್ನು ಕಟ್ಟಿಕೊಂಡಿರುವರು. ಅವುಗಳು ಸೋಲಿಗರ ಬದುಕಿನ ಭಾಗವಾಗಿ ಬಳಕೆಯಲ್ಲಿರುತ್ತವೆ. ಜನ ಜೀವನದ ಸಂಸ್ಕೃತಿಯ ಅಂತರಂಗವನ್ನು ಗಾದೆಗಳ ಮಾತಿನಲ್ಲಿ

ಕಾಣಬಹುದು. ಗಾದೆಗಳು ಸಾಮಾಜಿಕ ಚಹರೆಯಾಗಿ ಕಾರ್ಯ ನಿರ್ವಹಿಸುತ್ತದೆ. ಗಾದೆ ಒಂದು ಸಮಾಜದಲ್ಲಿನ ಜನರ ಸ್ಥಿತಿಗತಿಗಳನ್ನು ಹೇಗೆ ಇದೆಯೋ ಆಗೆ ತನ್ನದೇ ಆದ ಶೈಲಿಯಲ್ಲಿ ಚಿತ್ರಿಸುತ್ತದೆ. ಬಡವ ಬಲ್ಲಿದ ಎಂಬ ಬೇದ ಭಾವ ಎಲ್ಲಾ ವರ್ಗದ ಜನರಲ್ಲಿಯೂ ಇರುವ ಹಾಗೆ ಸೋಲಿಗರಲ್ಲಿಯೂ ಇದೆ. ಇಲ್ಲಿ ಶ್ರೀಮಂತ ಬಡವರ ಶೋಷಣೆಯನ್ನು ಮಾಡುವ ವ್ಯಕ್ತಿಯಾಗಿಯೂ ಸಹ ಇದರಲ್ಲಿ ಕಾಣಿಸಿಕೊಳ್ಳುತ್ತಾನೆ. ಆದ್ದರಿಂದ ಸೋಲಿಗ ಸಮುದಾಯದಲ್ಲಿ ಸಹ ಗಾದೆಗಳು ಅನುಭವಗಳ ಮಹತ್ವ ಹೊರ ಹಾಕುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಗಾದೆ ಮಾತು ಜನರ ಮನಸ್ಸನ್ನು ಒಂದು ಮುಖದಲ್ಲಿ ಬಿಂಬಿಸುತ್ತದೆ. ಮತ್ತೊಂದು ಮುಖದಲ್ಲಿ ಅರಳುತ್ತದೆ. ಅವರ ಅನುದಿನದ ಚಟುವಟಿಕೆಗಳನ್ನು ಕುರಿತು ಕೆಲವೊಮ್ಮೆ ವಿವರಿಸುತ್ತದೆ. ಗಾದೆಗಳು ಕೇವಲ ಜಾತಿ ವ್ಯವಸ್ಥೆಯನ್ನು ತಿಳಿಯಲು ಉಪಯೋಗಿಸಿದರೆ ಅದರ ಮೌಲ್ಯ ಅಪೂರ್ಣವಾಗುತ್ತದೆ. ಅದಕ್ಕಾಗಿ ಗಾದೆಗಳಲ್ಲಿ ಉಲ್ಲೇಖವಾಗಿರುವ ಚಾರಿತ್ರಿಕ ವಿಷಯಗಳನ್ನು ಬೆಳಕಿಗೆ ತರಲು, ಭಾಷಾಶಾಸ್ತ್ರ ವಿಷಯಗಳನ್ನು ಪರಿಶೀಲಿಸಲು, ಸಮಾಜದಲ್ಲಿಯ ಸಂಪ್ರದಾಯ ಪದ್ಧತಿಗಳನ್ನು ಇವುಗಳ ಮೂಲಕ ತಿಳಿದುಕೊಂಡಾಗ ಮಾತ್ರ ನಮಗೆ ಪೂರ್ಣವಾಗಿ ಆ ಸಮುದಾಯವನ್ನು ಅರ್ಥೈಸಿಕೊಳ್ಳಬಹುದು.[೪] ಈ ಹಿನ್ನೆಲೆಯಲ್ಲಿ ಸೋಲಿಗ ಸಮುದಾಯದ ಮೇಲೆ ಬಂದಿರುವ ಗಾದೆಗಳನ್ನು ಈ ಅಧ್ಯಯದಲ್ಲಿ ಚರ್ಚಿಸಲಾಗಿದೆ. ಸೋಲಿಗರ ಗಾದೆಗಳ ಪ್ರಯೋಗದಲ್ಲಿ ಕಲ್ಪನೆ ಮತ್ತು ಅವರ ಬುದ್ಧಿ ಪ್ರಯೋಗ ತನ್ನ ತಾರ್ಕಿಕ ಶಕ್ತಿಯನ್ನು ವಿವರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಸೋಲಿಗ ಸಮುದಾಯದಲ್ಲಿ ಕಂಡುಬರುವ ಗಾದೆಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಸೋಲಿಗರು ಬಳಸುವಂತಹ ಗಾದೆಗಳನ್ನು ಐದು ವಿಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ.

- ನೀತಿ ಪ್ರಧಾನ ಗಾದೆಗಳು
- ಲಿಂಗ ಪ್ರಧಾನ ಗಾದೆಗಳು
- ಜಾತಿ/ಸಮುದಾಯ /ಕಸುಬು ಸೂಚಕ ಗಾದೆಗಳು
- ಪ್ರಾಣಿ ಸೂಚಕ ಗಾದೆಗಳು
- ಭೌತಿಕ ವಸ್ತು ಸೂಚಕ ಗಾದೆಗಳು

### ೧. ನೀತಿ ಪ್ರಧಾನ ಗಾದೆಗಳು

- **ಕದ್ದ ಕೂಳು ಮದ್ದನಕ್ಕಿಲ್ಲ, ಸತ್ತಕೂಳು ಸಂಜೆಕಿಲ್ಲ**

ಈ ಗಾದೆಯು ಸೋಲಿಗ ಸಮುದಾಯದಲ್ಲಿ ಒಂದು ವ್ಯವಸ್ಥೆಯನ್ನು ಆಧರಿಸಿ ಹೇಳುವಂತಹದ್ದಾಗಿದೆ. ಗಾದೆಯು ಸೋಲಿಗರ ಕಳ್ಳತನದ ಕುರಿತು ಮಾತನ್ನು ಇಲ್ಲಿ ಹೇಳುತ್ತದೆ. ಸೋಲಿಗರ ಆರ್ಥಿಕ ಸ್ಥಿತಿ ಹಾಗೂ ಅವರ ಬದುಕು ಅವರ ಬಡತನದ ಬಗ್ಗೆ ನಿರೂಪಿಸುತ್ತದೆ. ಕಳ್ಳನಾದವನು ಕದಿಯುವ ವ್ಯಕ್ತಿಯಿಂದ ಕದಿಯಲು ಬೆಲೆಯುಳ್ಳ ವಸ್ತು ಯಾವುದು ಇರುವುದಿಲ್ಲ. ಒಂದು ವೇಳೆ ಅವರಿಂದ ಕದ್ದರೆ ಒಪ್ಪತ್ತಿನ ಕೂಳನ್ನ ಕದಿಯಬಹುದು. ಹಾಗೇಯೇ ಒಂದೊತ್ತಿನ

ಕೂಳು ಅಂದರೆ ಆಹಾರ ಎಂಬರ್ಥದಲ್ಲಿ ಇಲ್ಲಿ ಹೇಳಲಾಗಿದೆ. ಒಂದೊತ್ತಿನ ಆಹಾರವನ್ನು ಕದ್ದರೆ ಬೆಳಗಿನ ಊಟಕ್ಕೆ ಮಾತ್ರ ಬರುತ್ತದೆ. ಇನ್ನು ಮಧ್ಯಾಹ್ನದ ಊಟಕ್ಕೆ ಏನೂ ಇಲ್ಲದಂತಾಗಿ ಬಿಡುತ್ತದೆ. ಇದೇ ರೀತಿಯಲ್ಲಿ ನೋಡಿದಾಗ ಒಂದು ನಿರ್ದಿಷ್ಟ ದಿನದಂದು ತಿಥಿ ಕಾರ್ಯಮಾಡುತ್ತಾರೆ. ಮಧ್ಯಾಹ್ನ ಬಂದ ನೆಂಟರಿಷ್ಟರಿಗೆಲ್ಲಾ ಒಂದು ಊಟ ಕೊಡುತ್ತಾರೆ. ಅಲ್ಲಿಗೆ ಮುಗಿಯಿತು ಸತ್ತವನ ಕೂಳನ್ನು ಯಾರು ಪ್ರತಿದಿನವೂ ಹಾಕುವುದಿಲ್ಲ ಎಂಬ ವಾಸ್ತವ ಸಂಗತಿಗಳು ಈ ಗಾದೆಯ ಮಾತಿನಲ್ಲಿ ಅಭಿವ್ಯಕ್ತವಾಗುತ್ತದೆ. ಗಾದೆಗಳು ಕುಟುಂಬ ಜೀವನವನ್ನು ಕುರಿತಂತೆ ಬೇಕಾದಷ್ಟು ಕಂಡುಬರುತ್ತದೆ. ಗಾದೆಗಳ ಮೂಲಕ ವಿವೇಕವನ್ನು ಹೇಳುವ ಕೆಲಸ ಹಿರಿಕರು ಮಾಡುತ್ತಿದ್ದರು.

- **ಕಣ್ಣಿರತನಕ ನೋಟ ಕಾಲಿರತಂಕ ಆಟ**

ಸೋಲಿಗರಲ್ಲಿ ಬಳಕೆಯಲ್ಲಿರುವಂತಹ ನೀತಿ ಪ್ರಧಾನವಾದ ಗಾದೆ ಇದಾಗಿದೆ. ಇದನ್ನು ಅವರು ಕಣ್ಣಿನ ದೃಷ್ಟಿ ಚೆನ್ನಾಗಿರುವವರೆಗೂ ಪರಿಸರವನ್ನು ವೀಕ್ಷಣೆ ಮಾಡು, ಕಾಲು ಗಟ್ಟಿಯಿರುವರೆಗೂ ಆಟವಾಡು ಎಂಬರ್ಥದಲ್ಲಿ ಈ ಗಾದೆಯನ್ನು ಹೇಳಿದರೂ ಕೂಡ ಇದರ ಗೂಡಾರ್ಥವು ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳಬೇಕೆಂಬುದಾಗಿರುತ್ತದೆ. ಯಾವುದೇ ಒಂದು ಅವಕಾಶವನ್ನು ತಪ್ಪಿಸಿಕೊಳ್ಳಬಾರದು ಎಂಬುದು ಇದರ ಒಳ ಅರ್ಥದಲ್ಲಿ ಸೋಲಿಗರು ಇದನ್ನು ಬಳಸಿರುವುದು ಕಂಡುಬರುತ್ತದೆ.

- **ಕ್ವಾಪದಾಗೆ ಕುದ ಮೂಗು ಆಮ್ಯಾಲೆ ಬರ್ತದ.**

ಇಲ್ಲಿ ಸಿಟ್ಟು ಬಂದಾಗ ಮಾಡುವ ಅನಾಹುತಕ್ಕೆ ಸೋಲಿಗರಲ್ಲಿ ಬಳಸುವಂತಹ ನೀತಿ ಪ್ರಧಾನ ಗಾದೆಯಾಗಿದೆ. ಒಮ್ಮೆ ಮಾಡಿದ ಕೆಲಸವನ್ನು ಆಲೋಚನೆ ಮಾಡಿ ಮಾಡಬೇಕು ಎನ್ನುವಂತಹ ಅರ್ಥದಲ್ಲಿ ಇದನ್ನು ಬಳಸುತ್ತಾರೆ. ಸಿಟ್ಟು ಬಂದಾಗ ಮೂಗನ್ನು ಕುಯ್ದುಕೊಂಡರೆ ಮತ್ತೆ ಅದು ಬೆಳೆಯುವುದಿಲ್ಲ ಎಂಬ ಅರ್ಥವನ್ನೊಳಗೊಂಡ ಈ ಗಾದೆಯ ಮೂಲಾರ್ಥ ಆತುರದಿಂದ ಯಾವುದೇ ನಿರ್ಧಾರಗಳನ್ನು ತೆಗೆದುಕೊಳ್ಳಬಾರದು ಎಂಬುದಾಗಿರುವುದರಿಂದ ಈ ಗಾದೆಯನ್ನು ಸಂದರ್ಭಕ್ಕೆ ಅನುಸಾರವಾಗಿ ಸಮುದಾಯದವರು ಬಳಸುತ್ತಾರೆ.

- **ಕೆಟ್ಟಾಗ ನೆಂಟ್ರಲ್ಲ ಸತ್ತಾಗ ದೇವ್ರಿಲ್ಲ.**

ಸೋಲಿಗ ಸಮುದಾಯದಲ್ಲಿ ಬಳಕೆಯಲ್ಲಿರುವ ಈ ಗಾದೆಯು ಮಹತ್ವವಾದ ವಿಚಾರವನ್ನು ತಿಳಿಯಪಡಿಸುತ್ತದೆ. ಸಮಾಜದಲ್ಲಿ ಸಂಘಜೀವಿಯಾಗಿ ಬದುಕುವ ಮಾನವ ಸಂತೋಷವಾದ ಸುಖಮಯವಾದ ಜೀವನವನ್ನು ನಡೆಸುವಾಗ ಬಂದು ಬಳಗವೆಲ್ಲವೂ ಜೊತೆಯಲ್ಲಿರುತ್ತದೆ. ಆದರೆ ಅವನು ಯಾವುದೇ ಸಂದರ್ಭದಲ್ಲಿ ತೊಂದರೆಗೆ ಒಳಗಾದಾಗ ಯಾವ ಬಂಧುಗಳು ಬರುವುದಿಲ್ಲ. ಹಾಗೆಯೇ ಮಾನವನು ಹುಟ್ಟಿನಿಂದ ಸಾವಿನ ತನಕವೂ ದೇವರನ್ನು ಆರಾಧಿಸುತ್ತಾನೆ. ಮಾನವ ತನ್ನವರನ್ನು ಉಳಿಸಿಕೊಳ್ಳುವ ಸಲುವಾಗಿ ಇರುವ ದೇವರನ್ನೆಲ್ಲ ಬೇಡಿಕೊಳ್ಳುತ್ತಾನೆ. ಒಂದು ವೇಳೆ

ಆ ವ್ಯಕ್ತಿ ಬದುಕುಳಿಯಲ್ಲಿಲ್ಲವಾದರೆ ಆಗ ಯಾವ ದೇವರನ್ನು ಪೂಜಿಸುವುದಿಲ್ಲ. ಹಾಗೂ ಸತ್ತಾಗ ಯಾವ ದೇವರನ್ನು ಪೂಜಿಸುವುದಿಲ್ಲ ಎಂಬುದು ಈ ಗಾದೆಯ ಒಳಾರ್ಥವಾಗಿರುತ್ತದೆ.

**• ಗುಂಡ್ಕಲು ನೀವಳ್ಸಿ ಗುಡಾಣಕ್ಕೆ ಹಾಕ್ತಂಗಾಯ್ತು**

ಅಂದರೆ ಉಪಯುಕ್ತವಾದ ವಸ್ತು ಅಥವಾ ವ್ಯಕ್ತಿಯನ್ನು ಸರಿಯಾಗಿ ಬಳಸಿಕೊಳ್ಳದೆ ಅದರ ಮಹತ್ವವನ್ನು ಸಾರ್ಥಕ ಪಡಿಸಿಕೊಳ್ಳದೇ ಇರುವ ಸ್ಥಿತಿಯನ್ನು ಈ ಗಾದೆಯ ಮೂಲಕ ಹೇಳಲಾಗಿದೆ. ಗುಂಡುಕಲ್ಲನ್ನು ಮಸಾಲೆ ವಸ್ತುಗಳನ್ನು ಅಥವಾ ಎಣ್ಣೆ ಬೀಜಗಳನ್ನು ರುಬ್ಬುವ ಉದ್ದೇಶಕ್ಕಾಗಿ ಬಳಸಿಕೊಳ್ಳುವುದನ್ನು ಬಿಟ್ಟು ಅದಕ್ಕೆ ಪೂಜೆ ಮಾಡಿ ಯಾರು ಮುಟ್ಟಲಾಗದಂತೆ ಗುಡಾಣದೊಳಗೆ ಹಾಕಿದರೆ ಗುಂಡುಕಲ್ಲಿನ ಉಪಯೋಗವನ್ನು ನಿರರ್ಥಕಗೊಳಿಸಿದಂತಾಗುತ್ತದೆ ಎಂಬುದನ್ನು ಸೋಲಿಗರು ಈ ಗಾದೆಯ ಮೂಲಕ ಹೇಳಿದ್ದಾರೆ.

**• ಅಂಬಲಿಗಿಂತ ಊಟಿಲ್ಲ ಕಂಬಳಿಗಿಂತ ಹೊದ್ಕಿಲ್ಲ**

ಸೋಲಿಗರ ಒಂದು ಜೀವನ ಕ್ರಮವನ್ನು ಅವರ ಸ್ಥಿತಿಗತಿಯನ್ನು ಅಂಬಲಿ ಮತ್ತು ಕಂಬಳಿಯ ಮೂಲಕ ತೋರ್ಪಡಿಸಲಾಗಿದೆ. ಅಂದರೆ ಊಟದಲ್ಲೆಲ್ಲಾ ಅತಿ ಹೆಚ್ಚು ಪೌಷ್ಟಿಕಾಂಶವುಳ್ಳದ್ದು ಅಂಬಲಿ ಮಾತ್ರ ಊಟಗಳಲ್ಲೆ ಹೆಚ್ಚು ಸಾತ್ವಿಕವಾದುದು ಅಂಬಲಿ. ಹಾಗೆಯೇ ಹೊದಿಕೆಯಲ್ಲಿ ಎಂತಹ ಬಟ್ಟೆಗಳಿದ್ದರೂ ಕೂಡ ಚಳಿಯನ್ನು ಕಡಿಮೆ ಮಾಡುವಲ್ಲಿ ಬೆಚ್ಚನೆಯ ಕಂಬಳಿಯನ್ನು ಮೀರಿಸುವಂತಹದ್ದು ಮತ್ತೊಂದಿಲ್ಲ ಎಂಬುದನ್ನು ಈ ಗಾದೆಯ ಮೂಲಕ ತಿಳಿಯಬಹುದಾಗಿದೆ.

**• ಒನಕೆಯನ್ನು ಆಚೆ ಇಟ್ಟರೆ ಒರಳೇ ಸಂಬಳ ಕೊಡಬೇಕು.**

ಈ ಗಾದೆಯು ಸೋಲಿಗರ ಬದುಕಿನ ಮತ್ತು ದುಡಿಮೆಯ ಸ್ಥಿತಿಯನ್ನು ಇಲ್ಲಿ ತಿಳಿಸುತ್ತದೆ. ಪ್ರಧಾನವಾಗಿ ಕೆಲಸ ನಿರ್ವಹಿಸದೆ ಇರುವವರನ್ನು ಈ ಗಾದೆ ತಿಳಿಸುತ್ತದೆ. ಅಸಮರ್ಥರನ್ನು ಕೆಲಸಕ್ಕೆ ಹಚ್ಚಿದರೆ ಕೆಲಸ ನಷ್ಟವನ್ನು ಅನುಭವಿಸುವುದು ಖಚಿತವೆಂಬ ನೆಲೆಯಲ್ಲಿ ಗಾದೆಯನ್ನು ಸೃಷ್ಟಿ ಮಾಡಲಾಗಿದೆ. ಇಲ್ಲಿ ಒನಕೆಯನ್ನು ಸಮರ್ಥ ಕಾರ್ಮಿಕನಿಗೂ, ಒರಳನ್ನು ಮಾಲೀಕ ಅಥವಾ ಯಜಮಾನನಿಗೂ ಹೋಲಿಕೆ ಮಾಡಲಾಗಿದೆ.

**೨. ಲಿಂಗ ಪ್ರಧಾನ ಗಾದೆಗಳು**

**ಅ) ಪುರುಷ ಪ್ರಧಾನ ಗಾದೆಗಳು**

ಸಮುದಾಯದಲ್ಲಿ ಗಾದೆಗಳು ಸಮಯಕ್ಕೆ ತಕ್ಕಂತೆ ಉಪಯೋಗ ಆಗುವುದನ್ನು ಕಾಣಬಹುದು. ಪುರುಷ ಪ್ರಧಾನ ಗಾದೆಗಳಲ್ಲಿ ಪುರುಷನನ್ನು ಕೇಂದ್ರವಾಗಿಸಿಕೊಂಡು ರಚಿಸಲಾಗಿದೆ. ಈ ಕೆಲವು ಗಾದೆಗಳು ಸಮುದಾಯಗಳಲ್ಲಿ ಬಳಕೆಯಲ್ಲಿದ್ದರೂ ಸಹ, ಇವುಗಳು ಪ್ರಾದೇಶಿಕ ಪರಿಸರದ ಪ್ರಭಾವದಿಂದ ಹಾಗೆಯೇ ನಾಡಿನ ಜನತೆಯೊಂದಿಗೆ ಸಂಪರ್ಕವಿರುವುದರಿಂದ ಈ ಗಾದೆಗಳು ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ.

• ಇತತ ಬಾ ಅಂದ್ರೆ ಇದ್ದದ್ನೆಲ್ಲ ಕಿತ್ಕಂಡ

ಈ ಗಾದೆ ದಕ್ಷಿಣ ಕರ್ನಾಟಕದ ಭಾಗದಲ್ಲಿ ಹಲವು ರೂಪಗಳಲ್ಲಿ ಬಳಕೆಯಾಗುವುದನ್ನು ಕಾಣಬಹುದು. ಅಂದರೆ ಮದ್ವೆ ಆಗೋ ಬ್ರಾಹ್ಮಣ ಅಂದ್ರೆ ನೀನೆ ನನ್ನೆಂಡ್ರಾಗು ಅಂದ್ರಂತೆ, ಬಿದ್ದಿದ್ದೋಳ್ಗೆ ಬಿನ್ನೇರ್ ಕೋಟ್ರೆ, ಎದ್ಬಂದ್ ಎದ್ದೊಗ್ದ್ರಂತೆ ಹೀಗೆ ಸೋಲಿಗರ ಸಮುದಾಯದಲ್ಲಿ ಈ ಗಾದೆ ಬಳಕೆಯಾಗಿರುವುದನ್ನು ಕಾಣಬಹುದು. ಯಾವುದೇ ಒಬ್ಬ ವ್ಯಕ್ತಿಯನ್ನು ಕುರಿತು ಅವನಿಗಾಗುತ್ತಿರುವ ಅಪಾಯವನ್ನು ತಿಳಿಸಿ ರಕ್ಷಿಸಬೇಕೆಂಬ ಉದ್ದೇಶದಿಂದ ಈ ಗಾದೆ ಸೃಷ್ಟಿಯಾಗಿದೆ. ತನ್ನತ್ತ ಬರಮಾಡಿಕೊಂಡರೆ, ಉಪಕಾರ ಮಾಡಿದವನಿಗೆ ಅಪಾಯ ಬಗೆಯುವ ಹಾಗೆ ಅವ ನಮಗೆ ತೊಂದರೆ ಕೊಟ್ಟು ನಮ್ಮಲ್ಲಿದುದ್ದನ್ನು ಕಸಿದುಕೊಂಡಂತೆ ಆಯ್ತು, ನೆಲೆಯಿಲ್ಲದವರಿಗೆ ಸೂರು ಕೊಟ್ಟರೆ ಮುಂದೊಂದು ದಿನ ಆ ಸೂರೆ ನನ್ನದು ಎಂದು ಹೇಳಿದ, ಹಾಗೆ ಈ ಗಾದೆಯ ಮಾತು ತುಂಬಾ ಅರ್ಥಗರ್ಭಿತವಾದುದಾಗಿದೆ. ಅಂದರೆ ಅವರಿಗೆ ಸ್ವಲ್ಪ ಸಹಾಯವನ್ನು ನಾವು ಮಾಡಿದರೆ ಅವರು ನಮ್ಮ ಸಹಾಯವನ್ನು ಮರೆತು ನಮ್ಮನ್ನೇ ಹೊರದೂಡುತ್ತಾರೆ. ಇಂತಹ ಆಲೋಚನೆಯನ್ನು ಇಟ್ಟುಕೊಂಡು ಈ ಗಾದೆ ಬಳಕೆಯಾಗಿರುತ್ತದೆ.

• ಅಕ್ಕಿಯ ಮೇಲೆ ಆಸೆ ನೆಂಟ್ರ ಮೇಲೆ ಪ್ರೀತಿ

ಸೋಲಿಗರಲ್ಲಿ ಬಳಕೆಯಲ್ಲಿರುವ ಈ ಗಾದೆಯು ಸಾಮಾನ್ಯವಾಗಿ ಎಲ್ಲಾ ಭಾಗಗಳಲ್ಲೂ ಬಳಕೆಯಲ್ಲಿದೆ. ಮನುಷ್ಯನ ಮನೋಧೋರಣೆಯನ್ನು ಕುರಿತು ಹೇಳುವ ಸಂದರ್ಭದಲ್ಲಿ ಇಂತಹ ಗಾದೆಗಳು ಹುಟ್ಟಿಕೊಂಡಿರಬಹುದು. ಇಲ್ಲಿ ಸೋಲಿಗರು ನಾಡಿನ ಜನರ ಸಂಪರ್ಕಕ್ಕೆ ಒಳಗಾದಾಗ ಅವರ ಜೊತೆ ಒಡನಾಟ ಇದ್ದಂತಹ ಸಂದರ್ಭದಲ್ಲಿ ಎದುರಾಗಿರಬಹುದೇನೊ ಎಂಬ ಅಭಿಪ್ರಾಯವಿದೆ. ಅಂದರೆ ಏಕ ಕಾಲದಲ್ಲಿ ಎರಡು ವಸ್ತುಗಳನ್ನು ಅಪೇಕ್ಷಿಸುವಲ್ಲಿ ಯಾವುದಾದರು ಒಂದರ ಆಯ್ಕೆ ಎದುರಾದಾಗ ಆ ವ್ಯಕ್ತಿ ಯಾವುದನ್ನು ಬಿಟ್ಟುಕೊಡುವ ಸ್ಥಿತಿಯಲ್ಲಿರುವುದಿಲ್ಲ. ಹಾಗೆಯೇ ಮನೆಯಲ್ಲಿರುವ ಅಕ್ಕಿಯೂ ಮುಗಿಯಬಾರದು ಮನೆಗೆ ಬಂದ ನೆಂಟರೂ ಹೋಗಬಾರದು ಎಂಬ ಮನಸ್ಥಿತಿಯಲ್ಲಿ ತೊಳಲಾಡುವ ಮನುಷ್ಯನ ಮನೋಧೋರಣೆಯನ್ನು ಕುರಿತು ಈ ಗಾದೆ ಹೇಳುತ್ತದೆ.

• ಹೊಲ್ದಲ್ಲಿ ಅಣ್ಣೆಸೊಪ್ಪು ಕೂಯ್ತಿದ್ರೆ, ಅಟ್ಟಿಗೆ ಬಾ ಬ್ಯಾಳೆ ಕೊಡ್ತೀನಿ ಅಂತಿದ್ನಂತೆ

ಈ ಗಾದೆಗೆ ಪೂರಕವಾಗಿ ದಕ್ಷಿಣ ಕರ್ನಾಟಕದ ಭಾಗದಲ್ಲಿ ಮತ್ತೊಂದು ಗಾದೆ ಇರುವುದನ್ನು ಕಾಣಬಹುದು. ಅದೇನೆಂದರೆ ಮನೆಗ್ ಬಂದು ಮಜ್ಜಿಗೆ ಕೇಳಿದ್ರೆ ಇಲ್ಲಂದೋರ್, ಬೀದಿಲ್ ನಿಂತ್ಕಂಡು ಬೆಣ್ಣೆಗೆ ಹೇಳ್ಕಳ್ಸಿದ್ರೆ ಕೊಟ್ಟಕಳುಸ್ತಿದ್ದೆ ಅಂದ್ರಂತೆ ಅನ್ನೊ ಹಾಗೆ, ಬೆಲೆಬಾಳದ, ನೈಸರ್ಗಿಕವಾಗಿ ಬೆಳೆದ ಅಣ್ಣೆಸೊಪ್ಪನ್ನು ಹೊಲದಲ್ಲಿ ಕಿತ್ತುಕೊಳ್ಳಲು ಬಿಡದಂತಹ ಜಿಪುಣ ಸಮಾಜವು ಸ್ವಪ್ರತಿಷ್ಠೆ ಹೆಚ್ಚಿಸಿಕೊಳ್ಳಲು ಬೀದಿಯಲ್ಲಿ ನಿಂತುಕೊಂಡು ಜನರೆಲ್ಲರಿಗೂ ಕೇಳುವಂತೆ ಬೆಲೆ ಬಾಳುವ ಬೇಳೆಕಾಳುಗಳನ್ನು ಕೇಳಿದ್ರೆ ಕೊಡ್ತಿನಿ ಅಂತ ಜಂಬದಿಂದ ಹೇಳುವುದು. ಇಂತಹ ಜನರು ಸೋಲಿಗ

ಸಮುದಾಯದಲ್ಲಿ ಅಷ್ಟೆ ಅಲ್ಲ ಎಲ್ಲಾ ಸಮುದಾಯಗಳಲ್ಲೂ ಇರುತ್ತಾರೆ. ಈ ಉದ್ದೇಶವನ್ನಿಟ್ಟುಕೊಂಡು ಈ ಗಾದೆಯು ಪ್ರಚಲಿತವಾಗಿರುವುದನ್ನು ಕಾಣಬಹುದು. ಈ ಗಾದೆಯನ್ನು ಸೋಲಿಗರು ಹೊರಗಿನ ಪ್ರಪಂಚದ ಜನರ ಸಂಪರ್ಕದ ಪ್ರಭಾವದಿಂದ ಅವರು ಈ ಗಾದೆ ಬಳಸುವುದನ್ನು ಕಾಣಬಹುದಾಗಿದೆ.

**• ಇಟ್ಟೊತ್ತಿಗೆ ಬಂದ ಕೂತ್ನಳ್ಳಿ ಕೋಡ**

ಈ ಗಾದೆಯು ದಕ್ಷಿಣ ಕರ್ನಾಟಕದ ವಿವಿಧ ಭಾಗಗಳಲ್ಲಿ ಬಳಕೆಯಲ್ಲಿ. ಇದಕ್ಕೆ ಪರ್ಯಾಯವಾಗಿ ಆಟಕ್ಕೆ ನನ್ ಕರಿಬ್ಯಾಡ, ಊಟಕ್ಕೆ ನನ್ನ ಮರಿ ಬ್ಯಾಡ ಎನ್ನುವ ಮಾತಿನಂತೆ ಸೋಲಿಗರಲ್ಲಿ ಈ ರೀತಿಯ ಗಾದೆ ಇರುವುದನ್ನು ಕಾಣಬಹುದು, ಬೇಜವಾಬ್ದಾರಿ ವ್ಯಕ್ತಿಯನ್ನು, ಸೋಮಾರಿತನದಿಂದ ಇರುವವನನ್ನು, ಅಲಸ್ಯ ಮನುಷ್ಯರನ್ನು ಕುರಿತು ಈ ಗಾದೆಯನ್ನು ಸೃಷ್ಟಿ ಮಾಡಿದ್ದಾರೆ ಎಂಬುದು ಅರ್ಥವಾಗುತ್ತದೆ. ಇದರಲ್ಲಿ ಕೂತ್ನಳ್ಳಿ ಕೊಡ ಎಂದರೆ ಕೇವಲ ಉಪಮೇ ಮಾತ್ರವಾಗಿದ್ದು, ಯಾವೊಂದು ಕೆಲಸವನ್ನು ಮಾಡದೆ ಸೋಂಬೇರಿ ವ್ಯಕ್ತಿಯು ಊಟದ ಸಮಯಕ್ಕೆ ಸರಿಯಾಗಿ ಹಾಜರಾಗುವಂತಹ ವ್ಯಕ್ತಿಯನ್ನು ಕುರಿತು ಈ ಗಾದೆ ಬಳಕೆಗೆ ಬಂದಿದೆ ಎಂದು ಹೇಳಬಹುದು.

**• ಅಟ್ಕ ಇಕ್ಕಂಡು ಉಂಡಕ್ಕಂಡು ಇರು ಅಂದ್ರ ಅಡ್ಮಿಂಡನ್ ನೋಡ್ಕಂಡು ನೀರ್ ಹೊರ್ತಿನಿ ಅಂದ್ಲಂತೆ**

ಇಲ್ಲಿ ಪ್ರಮುಖವಾಗಿ ಸುಲಭವಾದ ಬದುಕಿನ ದಾರಿಯನ್ನು ಗೌರವಯುತವಾಗಿ ಜೀವನವನ್ನು ನಡೆಸಬೇಕೆಂಬ ಆಶಯವನ್ನು ಸಮುದಾಯಗಳು ಹೊಂದಿರುತ್ತವೆ. ಸಮಾಜದಲ್ಲಿ ಆ ಗೌರವಯುತವಾದ ಬದುಕುವ ದಾರಿಯನ್ನು ಆಯ್ಕೆ ಮಾಡಿಕೊಳ್ಳುವವರನ್ನು ಕುರಿತು ಹೇಳಿದ್ದಾಗಿದೆ. ಅಟ್ಟ ಎಂದರೆ ಸೋಲಿಗರಲ್ಲಿ ಆಟ ಅಕ್ಕಂಡು ಎಂದರೆ ಆಡಿಕೊಂಡು ಎಂದರ್ಥ. ಒಟ್ಟಾರೆಯಾಗಿ ಆಟ ಆಡಿಕೊಂಡು ಆರಾಮವಾಗಿ ಮಾಡಿದ್ದನ್ನು ಊಟ ಮಾಡಿಕೊಂಡಿರು ಎಂದು, ಒಂದು ಹೆಣ್ಣನ್ನು ಕುರಿತು ಹೇಳಿದರೆ ಆಕೆ ಎಷ್ಟೇ ಕಷ್ಟವಾದರೂ ಪರವಾಗಿಲ್ಲ ಸಮಾಜದಲ್ಲಿ ನಿಕೃಷ್ಟ ಸ್ಥಾನವನ್ನು ಪಡೆದರೂ ಸರಿಯೇ ನಾನು ಅಡ್ಮಿಂಡನ್ ಜೊತೆ (ಪರಪುರುಷನೋ ಅನೈತಿಕ ಸಂಬಂಧ ಹೊಂದಿರುವವಳು)ನೀರ್ ಹೊರ್ತಿನಿ ಅಂದಳಂತೆ. ನೀರ್ ಹೊರ್ತಿನಿ ಎಂಬುದವುರ ಗೂಡಾರ್ಥ ಜೀವನ ನಡೆಸುತ್ತೇನೆ ಎಂಬುದೇ ಆಗಿದೆ. ಪ್ರಸ್ತುತ ಸಮಾಜದಲ್ಲಿ ಇಂತಹ ಸಾವಿರಾರು ಉದಾಹರಣೆಗಳನ್ನು ನಾವು ನೋಡಬಹುದು. ಈ ಗಾದೆ ವಾಸ್ತವತೆಗೆ ತುಂಬ ಹತ್ತಿರವಾಗಿದೆ ಎಂದು ಹೇಳಬಹುದು. ಇಂತಹ ಸನ್ನಿವೇಶಗಳು ಸೋಲಿಗ ಸಮುದಾಯದಲ್ಲಿಯೂ ಕಂಡು ಬಂದಿರುವುದರಿಂದ ಸಮುದಾಯದ ಹಿರಿಯರು ಇಂತಹ ಗಾದೆಗಳನ್ನು ಬಳಕೆ ಮಾಡುವುದನ್ನು ಕಾಣಬಹುದಾಗಿದೆ.

• **ಅಳ್ತಾ ಹೋದೋಳು ಆಡು ಕಾಯ್ತಾಳ್**

ಕೆಲಸ ಮಾಡಲು ಇಚ್ಛೆ ಇಲ್ಲದವಳಿಗೆ ಒತ್ತಾಯ ಪೂರ್ವಕವಾಗಿ ಕೆಲಸಕ್ಕೆ ಹಚ್ಚಿದರೆ ಆ ಕೆಲಸವನ್ನು ಯಶಸ್ವಿಯಾಗಿ ಮುಗಿಸಲಾರಳು ಎಂಬುದನ್ನು ಈ ಗಾದೆ ಸೂಚಿಸುತ್ತದೆ. ಅಂದರೆ ಅವಳಿಗೆ ಆಡು ಕಾಯಲು (ಮೇಕೆ) ಮೊದಲೇ ಇಷ್ಟಯಿಲ್ಲದೆ ಅಳುವ ಮೂಲಕ ವಿರೋಧ ವ್ಯಕ್ತಪಡಿಸುತ್ತಿದ್ದವಳಿಗೆ ಒತ್ತಾಯ ಪೂರ್ವಕವಾಗಿ ಆಡು ಕಾಯಲು ಹಚ್ಚಿದರೆ ಅವಳು ಹೇಗೆ ತಾನೆ ಕಾಯುತ್ತಾಳೆ. ಆದ್ದರಿಂದ ಇಷ್ಟವಿಲ್ಲದ ಕೆಲಸವನ್ನು ಯಾರಿಗೂ ಒತ್ತಾಯ ಪೂರ್ವಕವಾಗಿ ಹಚ್ಚಬಾರದು ಎಂಬುದು ಈ ಗಾದೆಯ ತಾತ್ಪರ್ಯ.

• **ಉಳ್ಳನೆಂಡ್ರುಗೆ ಒಳ್ಳೆಲ್ಲಾ ಬಂಗಾರ್ದಂತೆ**

ಆರ್ಥಿಕವಾಗಿ ಸದೃಢನಾಗಿದ್ದವರು ತನ್ನ ಶ್ರೀಮಂತಿಕೆಯನ್ನು ಹಲವಾರು ರೀತಿಯಲ್ಲಿ ತೋರ್ಪಡಿಸುವುದುಂಟು. ಅತಿ ಹೆಚ್ಚಾದ ಸೌಕರ್ಯವು ಅವರನ್ನು ಅವಲಂಬಿಸಿದರೆ ಎಲ್ಲಾ ತರಹದ ಮೋಹವು ಹೆಚ್ಚಾಗುತ್ತದೆ. ಆದರೆ ಸೋಲಿಗ ಸಮುದಾಯದವರೊಳಗೆ ಶ್ರೀಮಂತಿಕೆಯ ದರ್ಪಗೊತ್ತಿರುವುದಿಲ್ಲ. ಕೆಲವೊಂದು ಸಂದರ್ಭದಲ್ಲಿ ಕೆಲಸವನ್ನು ಮಾಡುವುದನ್ನು ಬಿಟ್ಟು ಪೋಡುಗಳಲ್ಲಿಯೇ ದರ್ಪವನ್ನು ತೋರಿಸಿರುತ್ತಾರೆ. ಇಂತಹ ಸನ್ನಿವೇಶಗಳನ್ನು ಇಟ್ಟುಕೊಂಡು ಸೋಲಿಗ ಸಮುದಾಯದ ಹಿರಿಯರು ಈ ಗಾದೆಯನ್ನು ಬಳಕೆ ಮಾಡಿರುವುದು ಕಾಣಬಹುದಾಗಿದೆ. ಸಾಮಾನ್ಯವಾಗಿ ಬಂಗಾರದ ಆಭರಣಗಳನ್ನು ಮಾಡಿಸಲು ಬಳಸುವುದುಂಟು, ಆದರೆ ಅತಿಯಾಗಿ ಬಂಗಾರ ಇದ್ದಾಗ ಯಾವ ವಿಧವಾದ ಒಡವೆಗಳನ್ನು ಮಾಡಿಕೊಳ್ಳುತ್ತಾರೆ ಎಂಬುದನ್ನು ತಿಳಿಸುವುದಕ್ಕೆ ಈ ಗಾದೆ ಬಳಸಲಾಗಿದೆ.

**ಆ) ಸ್ತ್ರೀ ಪ್ರಧಾನ ಗಾದೆಗಳು**

ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಪುರಷ ಪ್ರಧಾನ ಗಾದೆಗಳು ಇದ್ದಂತೆ ಮಾತಿನ ಸಂದರ್ಭದಲ್ಲಿ ಸ್ತ್ರೀಯನ್ನು ಕುರಿತಂತೆ ಗಾದೆಗಳು ಹುಟ್ಟಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಒಂದು ಸಮುದಾಯದಲ್ಲಿ ಪರಸ್ಪರರು ಹೆಣ್ಣನ್ನು ಬೈಯಲ್ಲಿಕ್ಕೆ ಅವಳು ಬದುಕಿನ ದಾರಿಯನ್ನು ತಪ್ಪಿದಾಗ ಹಲವು ಗಾದೆಗಳು ಹುಟ್ಟಿರುವುದನ್ನು ಕಾಣಬಹುದು.

• **ಅಂಕಿ ಸಂಕಿಯಿಲ್ಲದ ಹೆಣ್ಣು ಕೆಡ್ತದೆ, ಮಜ್ಜಿಗೆ ಇಲ್ಲದೆ ಬೆಣ್ಣೆ ಕೆಡ್ತದೆ**

ಗಂಡು ಮಕ್ಕಳಿಗೆ ಬುದ್ಧಿಮಾತಿನ ರೂಪದ ಗಾದೆಗಳನ್ನು ಹೇಳುವಂತೆಯೇ ಹೆಣ್ಣು ಮಕ್ಕಳನ್ನು ಕುರಿತು ಪ್ರಯೋಗವಾದ ಗಾದೆಗಳನ್ನು ಕಾಣಬಹುದಾಗಿದೆ. ಅಂತಹ ಒಂದು ಗಾದೆಯನ್ನು ಇಲ್ಲಿ ನೋಡಬಹುದು. ಸೋಲಿಗರು ಪ್ರಾದೇಶಿಕತೆಯ ಪ್ರಭಾವದಿಂದಾಗಿ ಈ ತೆರನಾದ ಗಾದೆಗಳನ್ನು ಬಳಸಿರುವವರು. ಮಜ್ಜಿಗೆ ಇಲ್ಲದೆ ಬೆಣ್ಣೆ ಕೆಡುವುದು ವೈಜ್ಞಾನಿಕವಾಗಿ ಸತ್ಯ ಈ ವೈಜ್ಞಾನಿಕವಾದ ಸತ್ಯವನ್ನು ಹೆಣ್ಣಿಗೆ ಸಮೀಕರಿಸಿ ಹೇಳಿರುವುದನ್ನು ಕಾಣಬಹುದು. ಸಮಾಜದ ಕೆಲವೊಂದು ನಿಯಮಗಳಿಗೆ ಹೊಂದಿಕೊಂಡು ಬದುಕಬೇಕಾಗುತ್ತದೆ. ಪ್ರತಿಯೊಂದು ಗಂಡು-ಹೆಣ್ಣಿಗೆ ಸಮಾಜವು

ಕೆಲವೊಂದು ಶರತ್ತುಗಳನ್ನು ರೂಪಿಸಿರುತ್ತವೆ. ಅಂತಹ ನಿಯಮಾವಳಿಗಳನ್ನು ಮೀರಿ ಜೀವಿಸಿದರೆ, ಸಮಾಜ ವಿರೋಧಿ ನಡವಳಿಕೆಯಿಂದ ಬದುಕಿದರೆ ಅದಕ್ಕೊಂದು ಬೇರೆನೆ ಅರ್ಥವು ಘಟಿಸುತ್ತದೆ. ಹೀಗಾಗಿ ಮಹಿಳೆಯು ತನ್ನ ವ್ಯಕ್ತಿತ್ವ ಕಾಪಾಡಿಕೊಂಡು ಬದುಕನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಇಲ್ಲದೇ ಇದ್ದರೆ ಚಾರಿತ್ರ್ಯಹೀನವಾಗಿ ಸಮಾಜವು ಗುರುತಿಸುತ್ತದೆ. ಸ್ತ್ರೀಯಾದವಳು ತನ್ನ ಚಾರಿತ್ರ್ಯ ವಧೆಯನ್ನು ಮಾಡಿಕೊಳ್ಳದೇ ಸಚಾರತ್ರ್ಯವಾಗಿ ಬದುಕನ್ನು ಕಟ್ಟಿಕೊಳ್ಳಬೇಕಾಗುತ್ತದೆ.

- **ಅಂಬಲಿ ಕುಡಿದು ಕಂಬಳಿ ಹೊದ್ದುಕೊಂಡು, ಗಂಡನ ಮನೇಲಿ ಸಂದಾಕಿ ಬಾಳು**

ಈ ಗಾದೆಯು ಸೋಲಿಗ ಸಮುದಾಯದಲ್ಲಿ ಹೆಣ್ಣು ಮಗಳನ್ನು ಕೇಂದ್ರವಾಗಿಸಿಕೊಂಡು ಬಳಕೆ ಮಾಡಲಾಗಿದೆ. ತಮ್ಮ ಹೆಣ್ಣು ಮಗಳು ಈ ತನಕ ಕಷ್ಟಗಳ ಸಂಕೋಲೆಯೊಳಗೆ ಬೆಳೆದು ಬಂದವಳು. ಅವಳಿಗೆ ಮುಂದಾದರೂ ಸುಖ ಸಿಗಲಿ ಎಂಬ ಭಾವನೆ ಅವರ ಕುಟುಂಬದ್ದು. ಅದೂ ಇಲ್ಲದೇ ಇದ್ದಿದ್ದರೆ ಇದ್ದುದ್ದರಲ್ಲಿ ತೃಪ್ತಿ ಪಟ್ಟುಕೊಂಡು ಬಾಳುವುದು ಒಂದೆ ಉಳಿದಿರುವ ದಾರಿ "ಬಡವ ನೀ ಮಡಗಿದ ಹಂಗಿರು' ಎಂಬ ಅವರ ಮತ್ತೊಂದು ಗಾದೆಯಂತೆ ಅವಳು ಗಂಭೀರಳಾಗಿ ಬದುಕಬೇಕು. ಬದುಕು ಸಮಾಜದ ಸ್ಥಿತಿಗತಿಯ ಬಗೆಗೆ ಬೆಳಕು ಚೆಲ್ಲುವ ಈ ಬಗೆಯ ಗಾದೆಗಳು ಸೋಲಿಗರಲ್ಲಿ ಅಪಾರ ಸಂಖ್ಯೆಯಲ್ಲಿ ದೊರೆಯುತ್ತವೆ. ಈ ನಿಟ್ಟಿನಿಂದ ನೋಡಿದಾಗ ಆರ್ಥಿಕವಾಗಿ ವಿಂಗಡಣೆಗೊಂಡ ಬಡವ ಬಲ್ಲಿದ ಎನ್ನುವ ಎರಡು ವರ್ಗಗಳನ್ನು ಅಲ್ಲಿಯೂ ಗುರುತಿಸಲು ಸಾಧ್ಯವಿದೆ ಎಂಬುದನ್ನು ಗುರುತಿಸಬಹುದಾಗಿದೆ. ಸೋಲಿಗರು ಮೂಲತಃ ಬಡವರು ಆಗಿದ್ದಾರೆ. ಇವರಲ್ಲಿ ಕೆಲವರು ಇತ್ತೀಚಿನ ದಿನಗಳಲ್ಲಿ ಸ್ಥಿತಿವಂತರಾಗುತ್ತಿರುವುದನ್ನು ನೋಡಬಹುದಾಗಿದೆ. ಸುಮಾರು ಬುಡಕಟ್ಟುಗಳಲ್ಲಿ ಈ ರೀತಿಯಾದಂತಹ ಜನಸಾಮಾನ್ಯರು ಇಲ್ಲಿ ಸಿಗುತ್ತಾರೆ. ಸೋಲಿಗರು ಸ್ಥಿತಿವಂತರಾದ ನಾಡಿನ ಜನರ ಹತ್ತಿರ ಜೀತಕ್ಕೆ ಸೇರಿ ಅವರಿಂದ ಶೋಷಣೆಗೆ ಒಳಗಾದ ಸಂದರ್ಭಗಳು ಹೆಚ್ಚಾಗಿದೆ. ಒಟ್ಟಾರೆ ಈ ಗಾದೆ ಸೋಲಿಗ ಮಹಿಳೆಗೆ ಬದುಕಲಿ ಏನೇ ಕಷ್ಟ ಬಂದರು ಸಹಿಸಿಕೊಂಡು ಅಂಬಲಿಯಂತಹ ಆಹಾರ, ಕಂಬಳಿಯಂತಹ ಹೊದಿಕೆ ಬಡತನದ ಸೂಚಕ ಪದಗಳು. ಹಾಗಾಗಿ ಸಂಸಾರಿಕ ಜೀವನದಲ್ಲಿ ಎಲ್ಲವನ್ನು ಸ್ವೀಕರಿಸಿ ಮಹಿಳೆಯನ್ನು ಬಾಳುವಂತೆ ಸೂಚಿಸಿದೆ.

- **ಕಳ್ಳನ ಹೆಂಡತಿ ಯಾವತ್ತಿದ್ರು ಮುಂಡೆ**

ಈ ಗಾದೆಯು ಸೋಲಿಗರು ಪ್ರಾಮಾಣಿಕತನಕ್ಕೆ ಹೆಚ್ಚು ಮಹತ್ವವನ್ನು ನೀಡಿರುವುದು ಕಂಡುಬರುತ್ತದೆ. ಸಮುದಾಯದವರು ಇತರ ಜನರಂತೆ ಕದಿಯುವುದು ಮೋಸ ಮಾಡುವುದು ಒಂದು ಅಪರಾದವೆಂದು ಇವರು ಪರಿಗಣಿಸುತ್ತಾರೆ. ಈ ಗಾದೆಯು ಸಾರ್ವತಿಕವಾಗಿ ಎಲ್ಲಾ ಸಮುದಾಯದಲ್ಲೂ ಬಳಕೆಯಲ್ಲಿದೆ. ಕಳ್ಳತನವನ್ನು ಒಂದು ವೃತ್ತಿಯನ್ನಾಗಿ ಮಾಡಿಕೊಂಡಿರುವ ವ್ಯಕ್ತಿಗಳು ಯಾವತ್ತಾದರೂ ಒಂದು ದಿವಸ ಅನಾಹುತಕ್ಕೆ ತುತ್ತಾಗುವವರು ಎಂಬುದನ್ನು ನೇರವಾಗಿ

ಹೇಳುವ ಒಂದು ಪರಿಕಲ್ಪನೆಯಾಗಿದೆ. ಗಾದೆಯ ಮಾತಿನ ಹಿಂದೆ ಕಳ್ಳನ ಕುಟುಂಬದ ಅವರ ಸ್ಥಿತಿಗತಿಗಳನ್ನು ಇದರಲ್ಲಿ ಅಡಕವಾಗಿರುವುದನ್ನು ತಿಳಿಸುತ್ತದೆ. ಕಳ್ಳತನ ಮಾಡುವವನಿಗೆ ಪರೋಕ್ಷವಾಗಿ ಹೇಳುವಂತಹ ಸಂದರ್ಭ ಇಲ್ಲಿ ಒದಗಿ ಬರುತ್ತದೆ.

- **ಸಂತೆ ಸೂಳೆ ನೆಚ್ಚಿ ಮನೆಯೆಂಡ್ರನ್ಬಿಟ್ಟೆ**

ಈ ಗಾದೆಯ ಅರ್ಥ ಅಲ್ಪ ತೃಪ್ತಿಗಾಗಿ, ಕ್ಷಣಿಕ ಸುಖಕ್ಕಾಗಿ, ಶಾಶ್ವತ ಸುಖವನ್ನು ನೆಮ್ಮದಿಯನ್ನು ಹಾಳು ಮಾಡಿಕೊಳ್ಳಬಾರದು ಎಂಬ ನೀತಿಯನ್ನು ಹೇಳುವಂತಹದ್ದಾಗಿದೆ. ಈ ಗಾದೆಯು ದಕ್ಷಿಣ ಕರ್ನಾಟಕದ ಎಲ್ಲಾ ಭಾಗಗಳಲ್ಲೂ ಸಾಮಾನ್ಯವಾಗಿ ಬಳಕೆಯಲ್ಲಿರುವುದನ್ನು ಗಮನಿಸಬಹುದು. ಅಂದರೆ ಆ ಭಾಗದಲ್ಲಿ ಹರ್ಷದ ಕೂಳಿಗಾಗಿ ವರ್ಷದ ಕೂಳು ಕಳ್ಕೊಂಡ್ರು ಎನ್ನುವ ಗಾದೆಗೆ ಸಮಾನವಾಗಿ ಇವರು ಬಳಸಿರಬಹುದು. ಅಂದರೆ ಇಲ್ಲಿ ಸಂತೆ ಸೂಳೆ ಎಂದರೆ ಯಾರು ಬೇಕಾದರೂ ಸೂಳೆಯ ಹತ್ತಿರ ಹೋಗಿ ತನ್ನ ಲೈಂಗಿಕ ಸುಖವನ್ನು ಪಡೆದುಕೊಳ್ಳಬಹುದು, ಆದರೆ ಒಂದು ಸುಖವನ್ನು ಶಾಶ್ವತವಾಗಿ ಪ್ರತಿದಿನವೂ ಆಕೆಯಿಂದ ಪಡೆಯಲಾಗುವುದಿಲ್ಲ ಇಂತಹ ಕ್ಷಣಿಕ ಸುಖಕ್ಕಾಗಿ ಶಾಶ್ವತವಾಗಿ ಜೊತೆಗಿದ್ದು, ಆ ಗಂಡಿನ ಎಲ್ಲಾ ಕಷ್ಟ ಸುಖಗಳೊಂದಿಗೆ ಭಾಗಿಯಾಗಿ ಪ್ರತಿದಿನವೂ ಲೈಂಗಿಕ ಸುಖವನ್ನು ನೀಡುವ ತನ್ನ ಹೆಂಡತಿಯನ್ನು ಬಿಡುವುದು ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ಪ್ರಶ್ನಿಸುವ ರೀತಿಯಲ್ಲಿ ಈ ಗಾದೆಯನ್ನು ಬಳಸಲಾಗಿದೆ. ಸಮಾಜದಲ್ಲಿ ಇಂತಹ ಕ್ಷಣಿಕ ಸುಖಕ್ಕಾಗಿ ಶಾಶ್ವತ ಸುಖ ಕಳೆದುಕೊಂಡಿರುವ ಹಲವು ಉದಾಹರಣೆಗಳನ್ನು ಇಂದು ಕಾಣಬಹುದಾಗಿದೆ. ಇದೇ ರೀತಿಯಾಗಿ ಬೇರೆ ಬೇರೆ ಅರ್ಥಗಳಿಗೆ.

- **ಮಕ್ಕುಟ್ಟೊಕ್ಕುಂಚೆ ಉಂಡು ತೀರಿಸ್ಕೊ, ಸೊಸೆ ಬರೋಕ್ಕುಂಚೆ ಉಟ್ಟು ತೀರಿಸ್ಕೊ**

ಈ ಗಾದೆ ಸಾಮಾನ್ಯವಾಗಿ ವೈಚಾರಿಕ ನೆಲೆಯಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಯಾವುದೇ ತಂದೆ ತಾಯಿ ಮಕ್ಕಳಿಗಾಗಿ ಎಲ್ಲವನ್ನು ತ್ಯಾಗಮಾಡಲು ಸಿದ್ಧರಿರುತ್ತಾರೆ. ಹಾಗಾಗಿ ಏನನ್ನು ತಿನ್ನಬೇಕೆಂದರೂ ಕೂಡ ಮೊದಲು ತಮ್ಮ ಮಕ್ಕಳಿಗೆ ಮೀಸಲಿಡುವುದು ಸಾಮಾನ್ಯ. ತಾವು ತಿನ್ನುವ ಆಸೆ ಇದ್ದರೂ ತಿನ್ನಲಾಗದ ಸ್ಥಿತಿ ಮಕ್ಕಳಾದ ಮೇಲೆ ಬರುವುದು ಸಹಜ. ಹಾಗೆಯೇ ಅತ್ತೆಯಾದವಳು ಸೊಸೆ ಮನೆಗೆ ಬರುತ್ತಾಳೆ ಏನನ್ನು ಉಣ್ಣಲು ಉಡಲು ನಿರ್ಬಂಧಗಳಿರುವುದಿಲ್ಲ. ಆದರೆ ಸೊಸೆ ಮನೆಗೆ ಬಂದಾಗಿನಿಂದ ಅತ್ತೆಯಾದವಳು ಬೇಕಾದನ್ನೆಲ್ಲ ಉಡಲು ಸಾಧ್ಯವಾಗುವುದಿಲ್ಲ ಇದಕ್ಕೆ ಎರಡು ಪ್ರಮುಖ ಕಾರಣಗಳಿವೆ. ಮೊದಲಿಗೆ ತಮ್ಮ ಮಕ್ಕಳು ಮದುವೆಗೆ ಮುಂಚೆ ತಾಯಿಯನ್ನು ಹೆಚ್ಚು ಪ್ರೀತಿಸುತ್ತಿದ್ದ, ಕೇಳಿದ್ದನ್ನು ತಂದು ಕೊಡುವ ಮನಸ್ಥಿತಿಯಲ್ಲಿರುತ್ತಿದ್ದರು. ಆದರೆ ಸೊಸೆ ಮನೆಗೆ ಬಂದಾಗ ಗಂಡನಾದವನು ಮೊದಲ ಆದ್ಯತೆಯನ್ನು ಹೆಂಡತಿಗೆ ನೀಡಬೇಕಾಗುತ್ತದೆ. ಹಾಗಾಗಿ ಅತ್ತೆಗೆ ಬೇಕಾದ್ದನ್ನು ಉಡಲು ಸ್ವಲ್ಪ ಕಷ್ಟವಾಗುತ್ತದೆ.

ಎರಡನೇ ಕಾರಣ ಸೊಸೆ ಮನೆಗೆ ಬಂದಾಗಿನಿಂದ ಅತ್ತೆಯಾದವಳು ಮನೆಯ ಯಜಮಾನಿಯಾಗಿ ತನ್ನ ಜವಾಬ್ದಾರಿಯನ್ನು ಅರಿತು ನಿಭಾಯಿಸಬೇಕಾಗುತ್ತದೆ. ಸೊಸೆಯಂತೆ ಸಿಂಗಾರ ಮಾಡಿಕೊಂಡು ಇರಲು ಸಾಧ್ಯವಾಗುವುದಿಲ್ಲ. ಹಾಗಾಗಿಯೇ ಇಂತಹ ಗಾದೆಯನ್ನು ಬಳಸಲಾಗಿದೆ ಇದು ಈ ಸಮುದಾಯದಲ್ಲಿ ಈಗಲೂ ಬಳಕೆಯಲ್ಲಿರುವುದನ್ನು ಕಾಣಬಹುದು. ಈ ಗಾದೆ ಈ ಸಮುದಾಯಕ್ಕೆ ಮಾತ್ರ ಸೀಮಿತವಾಗದೆ ಇಡೀ ಸಮಾಜಕ್ಕೆ ಅನ್ವಯವಾಗುವಂತಹದ್ದಾಗಿದೆ.

**೩. ಜಾತಿ/ಸಮುದಾಯ/ಕಸುಬು ಸೂಚಕ ಗಾದೆಗಳು**

- **ಹೊಲೆಯನ ಮಾತು ಒಪ್ಪೊತ್ತಿಗಿಲ್ಲ, ಮಾದಿಗನ ಮಾತು ಮದ್ದನಕ್ಕಿಲ್ಲ, ಸೋಲಿಗನ ಮಾತು ಸೊತ್ತೊತ್ತಿಗಿಲ್ಲ**



ಈ ಗಾದೆಯು ಜಾತಿ ಮತ್ತು ಸಮುದಾಯವನ್ನು ಕುರಿತು ಹೇಳುವಂತಹದ್ದಾಗಿದೆ. ಹಾಗೆಯೇ ಸಮಾಜದಲ್ಲಿ ಮೂರನೇ ವರ್ಗದ ಗುಂಪಿಗೆ ಹೆಚ್ಚಿನ ಒತ್ತು ಬೀಳುತ್ತದೆ. ಈ ಗಾದೆ ಸಾಮಾಜಿಕ ವರ್ಗದ ಜನರು ಸಮಾಜದಲ್ಲಿ ಅತ್ಯಂತ ಕೆಳವರ್ಗ ಅಥವಾ ಕೆಳಸ್ತರದ ಜನ ಮೇಲ್ವರ್ಗದ ಜನರೊಡನೆ ವ್ಯವಹಾರ ಮಾಡಬೇಕಾಗಿ ಬಂದಾಗ ಆ ವೇಳೆಗೆ ಸರಿಯಾಗಿ ನಡೆದುಕೊಳ್ಳಲಾಗದ್ದರಿಂದ ಮೇಲ್ವರ್ಗದ ಜನರೊಡನೆ ನಂಬಿಕಸ್ತರಾಗದೇ ಇರುವುದರಿಂದ ಇಂತಹ ಒಂದು ಗಾದೆಗಳು ಉಗಮಕ್ಕೆ ಕಾರಣವೆನ್ನಬಹುದು. ಸೋಲಿಗರ ಮಾತು ಸೋತ್ತೋತ್ತಿಗಿಲ್ಲ ಸಂಜೆ ವೇಳೆಗೆ ಅವನ ಮಾತು ಇಲ್ಲದಂತಾಗುತ್ತದೆ ಎಂಬುದು ಇದರ ತಾತ್ಪರ್ಯವಾಗಿದೆ. ವರ್ಗಗಳಿಗಿಂತ ಮಾತಿಗೆ ತಪ್ಪಿ ನಡೆಯುವುದರಲ್ಲಿ ಸಂಶಯವಿಲ್ಲ ಎಂಬುದು ಸಾಧಿತವಾಗುತ್ತದೆ. ಈ ರೀತಿಯ ಒಂದು ಅಪ್ರಾಮಣಿಕತೆಗೆ ಅವರ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳು ಪ್ರಬಲ ಕಾರಣ ಎಂಬುದು ಈ ಮೇಲಿನ ಗಾದೆಯಿಂದ ವ್ಯಕ್ತವಾಗುತ್ತದೆ. ಸಾಮಾಜಿಕತೆಯ ಹಿನ್ನೆಲೆಯಲ್ಲಿ ಬಂದ ಈ ಗಾದೆ ಆಯಾ ಸಮುದಾಯದ ಅಸಮರ್ಥತೆಯನ್ನು ಸೂಚಿಸುತ್ತದೆ. ತಳಸಮಾಜದ ಜನವರ್ಗಗಳು ಆರ್ಥಿಕ, ಶೈಕ್ಷಣಿಕವಾಗಿ ಹಿಂದುಳಿದವರು, ಇವರನ್ನು ಕುರಿತು ರಚನೆಯಾದ ಗಾದೆಯಾಗಿದೆ.

- **ಸೋಲಿಗರ ಮಾತು ಸೋತು ಹೊತು**

ಸೋಲಿಗರ ನಿಜವಾದ ಜೀವನ ಸಂಗತಿ, ಅವರ ಸ್ಥಿತಿಗತಿಗಳನ್ನು, ನೋವು ನಲಿವುಗಳನ್ನು ಹೇಳುವಂತಹದ್ದಾಗಿದೆ. ಸೋಲಿಗರ ಒಂದು ಅಸಾಯಕತೆ ಜೀವನ ಸ್ಥಿತಿಯನ್ನು ವಿವರಿಸುವಂತಹದ್ದಾಗಿದೆ. ಇವರ ಜೀವನದ ಬದುಕು ಕಾಡಿನ ಮಧ್ಯದಲ್ಲಿ ಬಹಳ ಕಷ್ಟ ನಷ್ಟಗಳಿಂದ ನಡೆಯುತ್ತದೆ. ಕಾಡು ಪ್ರಾಣಿಗಳ ಹಾವಳಿಯಿಂದ ಜೀವನ ರಕ್ಷಣೆ ಸತತ ಹೋರಾಟ, ಬೆಳೆಯ ರಕ್ಷಣೆ ಕಾಡಿನಲ್ಲಿ ದಿನನಿತ್ಯದ ಜೀವನದ ಬದುಕು ಬಹಳ ಕಷ್ಟಕರವಾಗಿದೆ. ದಕ್ಷಿಣ ಕರ್ನಾಟಕದ ಒಕ್ಕಲಿಗರ ಸಮುದಾಯದಲ್ಲಿ "ವ್ಯವಸಾಯ ಮನೆಮಕ್ಕೆಲ್ಲಾ ಸಾಯ" ಎನ್ನುವಂತಹ ಗಾದೆಯು ಅವರು ಅಚ್ಚುಕಟ್ಟಾಗಿ ವ್ಯವಸಾಯ ಮಾಡಿದರು ಸಹ ಮಳೆಯ ಕಾರಣಕ್ಕೋ, ಮಾರುಕಟ್ಟೆಯ

ನಷ್ಟದ ಕಾರಣಕ್ಕೊಂದಲ್ಲ ಒಂದು ರೀತಿಯಲ್ಲಿ ಸಮಸ್ಯೆಯುಂಟಾಗುತ್ತದೆ. ಬೆಳೆ ಬಂದಾಗ ಪ್ರಯೋಜನವಾಗುವುದಿಲ್ಲ. ಇಂತಹ ಕಾರಣಕ್ಕಾಗಿ ಉಪಯೋಗಿಸುತ್ತಾರೆ. ಅದೇ ರೀತಿಯಾಗಿ ಉಪವಾಸ ಇರುವಂತಹ ಸಂದರ್ಭಗಳು ಒದಗುತ್ತವೆ. ಇವರು ಆರ್ಥಿಕವಾಗಿ ಸಬಲರಾಗುವುದಕ್ಕೆ ಸಾಧ್ಯವಾಗುವುದಿಲ್ಲ. ಸೋಲಿಗ ಸಮುದಾಯವು ಇತ್ತೀಚಿನವರೆಗೂ ಸಹ ಬಗೆ ಬಗೆಯ ಕಷ್ಟಗಳನ್ನು ಪಡುತ್ತಿದ್ದಾರೆ. ದಿನೇ ದಿನೇ ಇವರ ಬಾಳು ಸೋತು ಹೋಗುತ್ತದೆ. ಬದುಕಿನ ಹೋರಾಟದಲ್ಲಿ ಇವರು ಸೋತಿದ್ದಾರೆ, ಆದ್ದರಿಂದ ಈ ಗಾದೆಯು ಅವರ ಜೀವನ ನೋವಿನ ಸಂಕಷ್ಟಗಳನ್ನು ತಿಳಿಯುವಲ್ಲಿ ಪ್ರಮುಖವಾಗಿದೆ.

- **ಆಸಾರಿ ಮಾತು ಅರ್ಧಮಾತು**

ಈ ಗಾದೆಯು ಅಕ್ಕಸಾಲೆ ವೃತ್ತಿಯನ್ನು ಮಾಡುವವರ ಗುಣ ಸ್ವಭಾವವನ್ನು ತಿಳಿಸಿಕೊಡುತ್ತದೆ. ಇದು ದಕ್ಷಿಣ ಕರ್ನಾಟಕದ ಕೆಲವು ಭಾಗಗಳಲ್ಲಿ ಯಾವುದೇ ವಸ್ತುವನ್ನಾಗಲಿ, ಹಣವನ್ನು ಹಿಂತಿರುಗಿಸಿ ಕೊಡುವ ಸಮಯದಲ್ಲಿ ಈಗ ಬನ್ನಿ ಆಗ ಬನ್ನಿ ಎಂದು ಸುಮ್ಮನೆ ಅಲೆಸುತ್ತಿದ್ದಾಗ ಇಂತಹ ಸಂದರ್ಭದಲ್ಲಿ ಜನಸಾಮಾನ್ಯರು ಬಳಸುವರು. ಅಕ್ಕಸಾಲಿಗರು ಬಡಗಿ ಕೆಲಸವನ್ನು ಮಾಡುವ ವೃತ್ತಿಯನ್ನು ಈ ಸಮಾಜದಲ್ಲಿ ಆಯ್ದುಕೊಂಡಿದ್ದಾರೆ. ರೈತನ ಹೊಲದಲ್ಲಿ ಕೆಲಸ ಮಾಡುವ ಸಲಕರಣೆಯಿಂದ ಹಿಡಿದು ಮನೆಯನ್ನು ಕಟ್ಟುವ ಬಡಗಿ ಕೆಲಸಮಾಡುವುದು. ಹಾಗೆಯೇ ಚಿನ್ನಾಭರಣಗಳನ್ನು ಮಾಡುವುದು ಹೀಗೆ ಕೆಲಸವನ್ನು ಮಾಡಬೇಕಾಗಿರುತ್ತದೆ. ತನ್ನ ಅಂಗಡಿಗೆ ಬರುವ ಗ್ರಾಹಕರಿಗೆ ಸರಿಯಾದ ಸಮಯಕ್ಕೆ ಅವರಿಗೆ ಬೇಕಾದಂತಹ ವಸ್ತುಗಳನ್ನು ಮಾಡಿಕೊಡುವುದಕ್ಕೆ ಆಗುವುದಿಲ್ಲ. ಅದಕ್ಕಾಗಿ ಅವರನ್ನು ಕೇಂದ್ರವಾಗಿಟ್ಟುಕೊಂಡು ಸಮುದಾಯದಲ್ಲಿ ಈ ರೀತಿ ಸಂದರ್ಭಕ್ಕೆ ಅನುಸಾರವಾಗಿ ಇದನ್ನು ಬಳಸುತ್ತಾರೆ.

- **ಸಾಹುಕಾರಿಗೆ ಊಟದ ಚೌಕರ್ಯ, ಬಡವನಿಗೆ ನೀರು ಚೌಕರ್ಯ**

ಇದು ಸೋಲಿಗರಲ್ಲಿನ ಬಡತನದ ವಾಸ್ತವಿಕತೆಯನ್ನು ಪ್ರತಿಬಿಂಬಿಸುತ್ತದೆ. ಸೋಲಿಗರು ಬಡತನದಲ್ಲಿಯೇ ಅವರ ಜೀವನವನ್ನು ಕಳೆಯಬೇಕಾದ ಪರಿಸ್ಥಿತಿಯನ್ನು ಅವರು ಎದುರಿಸುತ್ತಿರುವುದನ್ನು ಕಾಣುತ್ತೇವೆ. ಏಕೆಂದರೆ ಹಳೆಯ ತಲೆಮಾರಿನಿಂದ ಬೆಟ್ಟಗುಡ್ಡಗಳಲ್ಲಿ ಶ್ರೀಮಂತರ ಕೆಲಸಗಳನ್ನು ಮಾಡಿಕೊಂಡು ಒಪ್ಪತ್ತಿನ ಊಟಕ್ಕೂ ಸಹ ತೊಂದರೆ ಪಡುತ್ತಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಎಲ್ಲಾ ಮನುಷ್ಯ ವರ್ಗಕ್ಕೂ ಪ್ರಕೃತಿ ನೆಲ, ನೀರು, ಗಾಳಿ ಇವು ಮೂರು ಬಡವ ಮತ್ತು ಶ್ರೀಮಂತರಿಗೆ ಲಭ್ಯವಿರುವಂತಹದ್ದಾಗಿದೆ. ಇದರಲ್ಲಿ ಶ್ರೀಮಂತನಿಗೆ ಊಟದ ಒಂದು ಸೌಕರ್ಯವಿದ್ದರೆ, ಅಂದರೆ ಮನೆಯಲ್ಲಿ ಉತ್ತಮ ಭೋಜನದ ವ್ಯವಸ್ಥೆ ಇದ್ದರೆ ಬಡವನಿಗೆ ಪ್ರಕೃತಿಯು ಅವನಿಗೆ ನೀರಿನ ಸೌಕರ್ಯವಾದರೂ ಇರುತ್ತದೆ. ಇದರ ಫಲವಾಗಿ ಶ್ರೀಮಂತ ಸುಖದ ಸುಪ್ಪತ್ತಿಗೆಯಲ್ಲಿ ಬದುಕಿದರೆ ಬಡವನಿಗೆ ಬಡತನದಲ್ಲಿಯೇ ಪ್ರಕೃತಿಯ ಫಲವಾಗಿ ಹೇಗೋ ಬದುಕುತ್ತಿದ್ದಾನೆ. ಹೀಗೆ ಸೋಲಿಗರ ಸ್ಥಿತಿಗತಿಯನ್ನು ಕುರಿತು ಈ ಗಾದೆಯು ವಿಶ್ಲೇಷಣೆ ಮಾಡುತ್ತದೆ.

• **ಮನೆಬಿಟ್ಟ ಎಂಗ್ಸು ನಾಯ್ಗಿಂತ ಕಡೆ**

ಗಾದೆಯು ಹೆಣ್ಣಿನ ಚಾರಿತ್ರ್ಯವನ್ನು ಕುರಿತು ಹೇಳುವಾಗ ಬಳಕೆಯನ್ನು ಮಾಡುತ್ತಾರೆ. ಒಂದು ಹೆಣ್ಣಿನ ಗೌರವ ಉಳಿಯುವುದು ಆಕೆ ಮನೆಯ ಒಳಗೆ ಗೃಹಿಣಿಯಾಗಿ ಒಳ್ಳೆಯ ಶೀಲವಂತೆಯಾಗಿ ಗಂಡನಿಗೆ ಮಾತ್ರ ತನ್ನನ್ನು ತಾನು ಅರ್ಪಿಸಿಕೊಂಡವಳಾಗಿ ಬದುಕಬೇಕೆಂಬುದು ಈ ಗಾದೆಯ ಮಹತ್ವವಾಗಿರುತ್ತದೆ. ಇಲ್ಲಿ ಸಾಮಾನ್ಯವಾಗಿ ಸೋಲಿಗರಲ್ಲಿ ಮದುವೆಗೆ ಮುಂಚೆ ಓಡಿಹೋದಾಗ ಅವರನ್ನು ಕರೆದು ಮದುವೆ ಮಾಡುವ ಸಂದರ್ಭಗಳು ಒದಗಿ ಬರುತ್ತದೆ. ಅದೇ ಮದುವೆಯಾದ ನಂತರ ಪರ ಪುರುಷನೊಂದಿಗೆ ಅನ್ಯ ಸಂಬಂಧ ಹೊಂದಿದ್ದು ತನ್ನ ಮನೆಯವರನ್ನು ದಿಕ್ಕರಿಸಿ ಹೊರಟು ಹೋದರೆ ಆಕೆ ಸಮಾಜದಲ್ಲಿ ನಾಯಿಗಿಂತ ಕೀಳಾಗುತ್ತಾಳೆ. ಇಲ್ಲಿ ಎಂಗ್ಸು ಎನ್ನುವ ಪದವು ಸೋಲಿಗರಲ್ಲಿ ಬಳಕೆಯಲ್ಲಿದ್ದು, ಬರಹದ ನುಡಿಯಲ್ಲಿ ಹೆಂಗಸರು ಎಂಬ ಅರ್ಥವನ್ನು ಸೂಚಿಸುತ್ತದೆ.

**ಭೌತಿಕವಸ್ತು ಸೂಚಕ ಗಾದೆಗಳು**

• **ಅಡಿಮ್ಯಾಗಲ ಅಣ್ಣೆ ಸೊಪ್ಪು ಏಡಗಾಲಿಗೆ ಬೇಕಾಯ್ತಂತೆ.**

ಸೋಲಿಗರು ತಮ್ಮ ಪರಿಸರದಲ್ಲಿ ಈ ಗಾದೆಯ ಬಳಕೆಯನ್ನು ಮಾಡುತ್ತಾರೆ. ಸೋಲಿಗರ ಆಹಾರದಲ್ಲಿ ಅಣ್ಣೆಸೊಪ್ಪು ಪ್ರಮುಖವಾದುದು, ಹೊಟ್ಟೆ ತುಂಬಿದಾಗ ಸೊಪ್ಪನ್ನು ತಿನ್ನಲು ಬಯಸುವುದಿಲ್ಲ. ಕೇವಲ ಅವರು ರುಚಿಗಾಗಿ ಮೇಲಿನ ಭಾಗವನ್ನು ಮತ್ತು ಕೆಳಗಿನ ಭಾಗವನ್ನು ಬಿಟ್ಟು ಮಧ್ಯೆ ಭಾಗದ ಸ್ವಲ್ಪವನ್ನು ತಿನ್ನುವುದುಂಟು. ಆದರೆ ಹಸಿವೆ ಆದಾಗ ಆಗ ಬೇಡವಾಗಿದ್ದ ಅಡಿ ಮ್ಯಾಗಲ ಮೇಲಿನದು ಅತ್ತ ಕೆಳಗಿನ ಅಣ್ಣೇ ಸೊಪ್ಪು ಬಹಳ ರುಚಿಯಾಗಿ ಕಾಣುತ್ತದೆ. ಈ ಮಾತು ಒಂದು ಸಂದರ್ಭಗಳಲ್ಲಿ ಬೇಡವಾದ ಇನ್ನೊಂದು ಸಂದರ್ಭದಲ್ಲಿ ಅವಶ್ಯಕವಾಗಿ ಬೇಕಾಗುವುದು. ಆದ್ದರಿಂದ ಯಾವುದನ್ನು ಯಾವಾಗಲು ತಿರಸ್ಕಾರದಿಂದ ಕಾಣಬಾರದು ಎಂಬುದು ಈ ಗಾದೆಯ ಆಶಯವಾಗಿದೆ.

• **ಒಡೆದ ಹಾಲು ಹೆಪ್ಪಿಗೆ ಬಂದಿತೆ**

ಸೋಲಿಗರಲ್ಲಿ ಈ ಒಂದು ಮೇಲಿನ ಗಾದೆಯನ್ನು ಬಳಸುವುದನ್ನು ಕಾಣಬಹುದು. ಸಮುದಾಯದಲ್ಲಿ ಅವರ ಜೀವನ ಕ್ರಮವನ್ನು ಅರಿತು ವಿವರಿಸುವಂತಹ ವಿಷಯ ಇದಾಗಿದೆ. ಅಂದರೆ ಮನುಷ್ಯನಾದವನು ಜೀವನದುದ್ದಕ್ಕು ಅರಿತು ಬಾಳಿದರೆ ಅವನು ಸಂತೋಷದಿಂದ ಬದುಕುವನು. ಮನುಷ್ಯ ಹಾಳಾಗಿ ಹೋದರೆ ಯಾವುದಕ್ಕೂ ಪ್ರಯೋಜನವಿಲ್ಲ ಎನ್ನುವಂತಹ ಅರ್ಥದಲ್ಲಿ ಸೋಲಿಗರು ಮಾನವನಿಗೆ ಹೋಲಿಕೆ ಮಾಡಿ ಹೇಳುವುದನ್ನು ನೋಡುತ್ತೇವೆ.

• **ಹಾಗಲಕಾಯಿ ಬೀಜ ಹಾಕಿ, ಹೀರೆಕಾಯಿ ಕೊಯ್ಯಲಿಕ್ಕಾಗುವುದಿಲ್ಲ.**

ಸೋಲಿಗರಲ್ಲಿ ಈ ಒಂದು ಗಾದೆಯ ಪ್ರಮುಖವಾಗಿ ಕಂಡುಬರುತ್ತದೆ. ಇಲ್ಲಿ ಹಾಗಲಕಾಯಿಯ ಬೀಜವನ್ನು ಹಾಕಿದರೆ ಹುಟ್ಟುವುದೇ ಹಾಗಲಕಾಯಿ. ಅದನ್ನು ಬಿಟ್ಟು ಬೇರೆ

ಯಾವ ಗಿಡವು ಬರುವುದಿಲ್ಲ. ಹಾಗಲಕಾಯಿ ಬೀಜವನ್ನು ಬಿತ್ತಿದರೆ ಹೀರೆಕಾಯಿ ಹುಟ್ಟುವುದಿಲ್ಲ ಎಂಬುದು ತಿಳಿದ ಸಂಗತಿ. ಮಾನವನು ತನ್ನ ದಿನನಿತ್ಯದ ಕಾರ್ಯಗಳಲ್ಲಿ ಒಳ್ಳೆಯ ಕೆಲಸವನ್ನು ಮಾಡಿದರೆ ಒಳ್ಳೆಯ ಲಾಭವನ್ನು ಪಡೆಯಬಹುದು. ಕೆಟ್ಟ ಕೆಲಸ ಮಾಡಿದರೆ ಕೆಟ್ಟ ಪರಿಣಾಮ ಬೀರುತ್ತದೆ. ಕೆಟ್ಟ ಕಾರ್ಯ ಮಾಡಿದರೆ ಒಳ್ಳೆಯ ಫಲ ಸಿಕ್ಕುವುದಿಲ್ಲವೆಂಬ ಅರ್ಥದಲ್ಲಿ ಈ ಗಾದೆಯನ್ನು ಸೋಲಿಗ ಸಮುದಾಯವು ಬಳಸಿದೆ.

- **ಕುಡುಗೋಲು ಕುಂಬಳಕಾಯಿ ನಿನಗೊಪ್ಪಿಸಿದ್ದೇನೆ ಅಡ್ಡವಾದರೂ ಕುಯ್ಯಿ ಉದ್ದವಾದರೂ ಕುಯ್ಯಿ**

ಈ ಗಾದೆಯು ಸೋಲಿಗ ಸಮುದಯಾದಲ್ಲಿ ಅಸಹಾಯಕತೆಯನ್ನು ಕುರಿತು ತಿಳಿಸಿಕೊಡುತ್ತದೆ. ಅವರ ಜೀವನ ಶೈಲಿಯು ತುಂಬಾ ಸರಳವಾಗಿದೆ ಮತ್ತು ಅವರು ಬದುಕುವಂತಹ ಸ್ಥಿತಿಯು ಸಮಸ್ಯಾತ್ಮಕವಾಗಿ ಕಂಡುಬಂದರೂ ಅವರು ಪರರ ಕೈಗೆ ಯಾವುದೇ ಒಂದು ಕೆಲಸವನ್ನು ಪೂರ್ತಿ ವಿಶ್ವಾಸ ಪೂರ್ಣವಾಗಿ ಒಪ್ಪಿಸಿ ಹೇಳುವಂತಹ ಮಾತಿದು. ದಕ್ಷಿಣ ಕರ್ನಾಟಕದ ನಾನಾ ಭಾಗಗಳಲ್ಲಿ ಹಾಲ್ನಲ್ಲಾದ್ರು ಹಾಕು ನೀರ್ನಲ್ಲಾದ್ರು ಹಾಕು ಎನ್ನುವಂತಹ ಗಾದೆಯನ್ನು ಬಳಸಿದರೆ ಸೋಲಿಗರು ಭೌತಿಕ ಪದಾರ್ಥಗಳ ಮೇಲೆ ಇದನ್ನು ವಿವರಿಸಿರುವುದನ್ನು ನೋಡಬಹುದಾಗಿದೆ.

**೩.೨. ಒಗಟುಗಳು**

ಗಾದೆಗಳು ಮಾನವನ ಅನುಭವಗಳ ಸಾರ್ವತ್ರಿಕತೆಯನ್ನು ಸಾರಿದರೆ, ಒಗಟುಗಳು ಅವನ ಬೌದ್ಧಿಕ ಜಾಣ್ಮೆಯನ್ನು ಹೇಳುತ್ತದೆ. ಜನಪದರ ನಂಬಿಕೆ, ರೂಢಿ ಪದ್ಧತಿ ಸಂಪ್ರದಾಯ–ಸಂಸ್ಕೃತಿಗಳು ಜನಪದ ಸಾಹಿತ್ಯ ಪ್ರಕಾರಗಳ ಪರಂಪರೆ ಎಂದರೆ ಪುರಾತನ ಮನಸ್ಸಿನ ಪಳಯುಳಿಕೆಗಳು. ಆಗಿದ್ದರಿಂದ ಅವುಗಳ ಅಧ್ಯಯನದಲ್ಲಿ ಜನಾಂಗದ ಬದುಕಿನ ಇತಿಹಾಸವೇ ಆಗಿದೆ. ಒಗಟಿನ ವಿಶಿಷ್ಟ ಲಕ್ಷಣವೇ ಗೂಡಾರ್ಥವಾಗಿದೆ. ಬದುಕಿನ ನೋವು ನಲಿವು, ಆಸರ ಬೇಸರಗಳಲ್ಲಿ ಅಷ್ಟೇ ಅಲ್ಲ ಬೌದ್ಧಿಕತೆಯು ಸ್ಪಂದಿಸುವ ಶಕ್ತಿ ಒಗಟುಗಳಿಗಿದೆ. ಬದುಕಿನ ಕಾಲ್ಪನಿಕ ವಿಚಾರಗಳನ್ನು ಮತ್ತು ಗಂಭೀರತೆಯನ್ನು ಕಾಲಕಾಲಕ್ಕೆ ಒಳಗು ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಬದುಕಿನ ರಹಸ್ಯವನ್ನು ತಿಳಿಯಲು ಒಂದು ಕ್ರಿಯೆಯಾಗಿದೆ.

ಒಗಟು ಎಂದರೆ ಸಮಸ್ಯಾತ್ಮಕ ವಿಷಯವನ್ನು ಬಿಡಿಸುವುದು ಎಂದರ್ಥ. ಜನಪದರಲ್ಲಿ ಅನೇಕ ಬಗೆಯ ಮಾದರಿಗಳನ್ನು ಕಾಣಬಹುದಾಗಿದೆ. ಒಗಟು ಮಾದರಿಯ ಅನೇಕ ಬಗೆಯ ಹಾಡುಗಳು, ಕಥೆಗಳು (ಒಡಗಡೆ) ಲೆಕ್ಕಗಳು ಮುಂತಾದವು ಕಾಣಸಿಗುತ್ತದೆ. ಇವೆಲ್ಲವುಗಳನ್ನು ಕರ್ನಾಟಕದ ಜಾನಪದ ವಿದ್ವಾಂಸರು ಒಗಟುಗಳೆಂದು ಪರಿಗಣಿಸಿರುವುದು ಕಂಡುಬರುತ್ತದೆ. ಬಹುಶಃ ಇದಕ್ಕೆ ಪಾಶ್ಚತ್ಯರ ಅಂಧಾನುಕರಣ ಕಾರಣವು ಇರುವುದೆಂದು ತೋರುತ್ತದೆ. ಜನಸಾಮಾನ್ಯರಲ್ಲಿ ಜಿದ್ದಿನ ಸ್ವಭಾವವು ಈ ಎಲ್ಲಾ ಒಗಟು ಮಾದರಿಗಳಿಗೆ ಮೂಲ ಪ್ರೇರಣೆ ಎನ್ನಬೇಕು. ಇನ್ನೊಬ್ಬರ ಸಾಮರ್ಥ್ಯವನ್ನು ಓರೆಗೆ ಹಚ್ಚುವ ತನ್ಮೂಲಕ ತನ್ನ ವರ್ಚಸ್ಸಿನ ಪ್ರಭಾವವನ್ನು

ಹೆಚ್ಚಿಸಿಕೊಳ್ಳುವ ಉದ್ದೇಶ ಒಗಟು ಒಡ್ಡುವವನದಾಗಿರುತ್ತದೆ. ಆ ಗಂಟನ್ನು ಬಿಡಿಸಿ ತನ್ನ ಜಾಣತನವನ್ನು ಪ್ರದರ್ಶಿಸುವ ಅವಕಾಶವನ್ನು ಒಗಟು ಎದುರಾಳಿಗೆ ಕೊಡುತ್ತದೆ.

ಒಗಟು ಮನುಷ್ಯನ ಕುತೂಹಲವನ್ನು ಹೆಚ್ಚಿಸುವುದರ ಜೊತೆಗೆ ತಾರ್ಕಿಕತೆ ಮತ್ತು ಅವುಗಳ ಲೋಕಜ್ಞಾನವನ್ನು ಅರಿತುಕೊಳ್ಳಬಹುದಾಗಿದೆ. ಇಲ್ಲಿ ಒಗಟುಗಳನ್ನು ಸಮುದಾಯಗಳಲ್ಲಿ ಬಿಡುವಿನ ವೇಳೆಯಲ್ಲಿ ಚಮತ್ಕಾರಗಳ ಆಟಗಳನ್ನು ಆಡುತ್ತಾ ಒಬ್ಬರಿಗೊಬ್ಬರು ಒಗಟುಗಳನ್ನು ಹಾಕಿಕೊಳ್ಳುತ್ತಾ ಒಗಟುಗಳನ್ನು ಬಿಡಿಸುವಲ್ಲಿ ಪ್ರಯತ್ನ ಮಾಡುವುದನ್ನು ಕಂಡುಬರುತ್ತದೆ. ಇಲ್ಲಿ ಒಂದು ವಸ್ತುವಿನ ವರ್ಣನೆ, ಗುಣಗಾನ ಬೇರೊಂದರ ಹೋಲಿಕೆ ಕೊಟ್ಟು ಹೇಳುವುದು, ಒಗಟುಗಳಲ್ಲಿ ಕಂಡುಬರುವ ಸಾಮಾನ್ಯ ಗುಣಗಳಾಗಿವೆ. ಇವುಗಳ ಇನ್ನೊಂದು ವಿಶೇಷ ಲಕ್ಷಣವೆಂದರೆ ರಚನಾಕ್ರಮ ಪ್ರಾಸ ಬದ್ಧವಾದ ಒಂದು ವಾಕ್ಯ ಅಥವಾ ಸೂತ್ರಪ್ರಾಯವಾದ ಸಣ್ಣ ಸಣ್ಣ ವಾಕ್ಯದ ಕೆಲವು ತುಣುಕುಗಳಿಂದ ಸೃಷ್ಟಿ ಗೊಂಡಿರುತ್ತದೆ. ಕಾವ್ಯದ ಛಾಯೆ ಹೊಂದಿರುವುದರಿಂದ ಕೇಳುಗರ ಆ ಶಕ್ತಿಯನ್ನು ತನ್ನತ್ತ ಸೆಳೆಯವಲ್ಲಿ ಯಶಸ್ವಿಯಾಗುತ್ತದೆ. ಒಂದು ವಸ್ತು ವಿಷಯ ಸ್ಥಳ ಅಥವಾ ಜೀವಿಯ ವಿಶೇಷವಾದ ಬಾಹ್ಯ ರೂಪ ಲಕ್ಷಣಗಳೇ ಒಗಟು ರಚನೆಯಲ್ಲಿ  ಕಾಣಸಿಗುತ್ತದೆ. ಈ ವಿಶಿಷ್ಟ ರೂಪ ಲಕ್ಷಣಗಳು ಜನಪದರ ಅನುಭವಕ್ಕೆ ತೀರ ಸಾಮಾನ್ಯವಾಗಿರುತ್ತದೆ. ಒಗಟುಗಳಿಗೆ ಮುಖ್ಯವಾದ ಗುರಿ ಮನುಷ್ಯನಿಗೆ ಮನರಂಜನೆ ನೀಡುವುದು ಹಳ್ಳಿಗಳಲ್ಲಿ ವಿರಾಮ ಸಮಯದಲ್ಲಿ ಬೇಸರವನ್ನು ತಡೆಯುವಲ್ಲಿ ಒಗಟುಗಳು ತನ್ನದೇ ಆದಂತಹ ಪಾತ್ರವನ್ನು ವಹಿಸುತ್ತದೆ. ಒಗಟುಗಳನ್ನು ವ್ಯಕ್ತಿಪರ, ವಸ್ತುಪರ, ಪ್ರಾಣಿಪರವೆಂದು ಸರಳ ಹಾಗೂ ಸಂಕೀರ್ಣ ಒಗಟುಗಳೆಂದು ಚಾತೂರ್ಯ ಪ್ರಧಾನ ಹಾಗೂ ಸೌಂದರ್ಯ ಪ್ರಧಾನ ಒಗಟುಗಳೆಂದು ವಿನೋದಪರ ಆಚರಣೆ ಪರ ಒಗಟುಗಳಲ್ಲದೆ ಒಗಟು ಕಥೆಗಳನ್ನು ಸೋಲಿಗ ಸಮುದಾಯದಲ್ಲಿ ಕಾಣುತ್ತೇವೆ. ದಟ್ಟವಾದ ಕಾಡಿನ ಮಧ್ಯ ಬೆಳೆದ ಈ ಜನ ಮರಗಿಡಗಳ ಜೊತೆಗೆ ಗೆಡ್ಡೆಗೆಣಸುಗಳ ಜೊತೆ ಒಡನಾಡಿದವರು ಅವರ ಬದುಕಿನ ಅವಿಭಾಜ್ಯ ಅಂಗಗಳಾದ ಇವು ಒಗಟುಗಳ ಮೇಲೆ ಬಹಳಷ್ಟು ಪ್ರಭಾವ ಬೀರಿರುವುದು ಕಂಡುಬರುತ್ತದೆ.

ಹೊರನೋಟಕ್ಕೆ ಲೈಂಗಿಕ ಎನ್ನುವಂತೆ ಕಾಣುವ ಒಳಗೆ ಗಂಭೀರ ಅರ್ಥವನ್ನು ಒಳಗೊಂಡಿರುವಂತಹ ಒಗಟುಗಳನ್ನು ವಿಶ್ವದ ಇತರ ಜನಾಂಗಗಳಲ್ಲಿ ಕಾಣುವಂತೆಯೇ ಸೋಲಿಗರಲ್ಲಿಯೂ ಅಪಾರ ಸಂಖ್ಯೆಯಲ್ಲಿ ಕಾಣಬಹುದು.

ಸೋಲಿಗರು ಕಾಯ್ದ ಹದವಾಗಿ ಆರಿದ ಹಾಲಿಗೆ ಹೆಪ್ಪು ಕೊಟ್ಟರೆ ಮೊಸರಾಗುತ್ತದೆ ಎಂಬ ಸ್ವರ ವಿಧಿತ ಸೋಲಿಗರ ಈ ಕೆಳಗಿನ ಒಗಟನ್ನು ನಾವು ಗುರುತಿಸಬಹುದಾಗಿದೆ.

ಅಣ್ಣನ ಗಡ್ಡಿ ಗಿಣ್ಣಾಗಿ

ಎಳಂದೂರು ಹೆಣ್ಣಾಗಿ

ಮಧ್ಯಾಹ್ನಕ್ಕೆ ಮುಟ್ಟಾಗಿ

ಬೆಳಗಾವ ಬಸುರ್‍ಾಗಿ

ಎದ್ದೇಟಿಗೆ ಹೆಸರು ಕಟ್ಟೊದು. (ಮೊಸರು)

ಇಲ್ಲಿ ಈ ಒಗಟಿನ ಮುಖ್ಯ ಸಂದೇಶ ಹಾಲು ಮೊಸರಾಗುವುದು. ಒಂದು ರಾಸಾಯನಿಕ ಕ್ರಿಯೆಯ ಫಲವಾಗಿ ಅದನ್ನು ಈ ಒಗಟಿನಲ್ಲಿ ಮನುಷ್ಯನ ಜೀವನದ ಮಜಲುಗಳಾದ ಬಾಲ್ಯ ತಾಯ್ತನ ಹುಟ್ಟುಗಳಿಗೆ ನವೀಕರಿಸಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಹಾಲಿನ ಸ್ವಭಾವದಿಂದ ಮುಕ್ತವಾಗಿ ಮನುಷ್ಯ ಉಪಯೋಗಿಸಿ ಬ್ಯಾಕ್ಟೀರಿಯಾಗಳ ಸಹಾಯದಿಂದ ಇಡಿ ರಾತ್ರಿ ಹೆಪ್ಪಿನ ಕ್ರಿಯೆಗೆ ಒಳಪಟ್ಟು ಬೆಳಗ್ಗೆ "ಮೊಸರು" ಎಂದು ಕರೆಸಿಕೊಳ್ಳುವ ಚಿತ್ರಣ ಈ ಒಗಟಿನಲ್ಲಿ ಕಾಣಬಹುದಾಗಿದೆ.

- ಮೂರು ಕಣ್ಣುಂಟು ಮುಕ್ಕಣ್ಣನಲ್ಲ, ನೀರುಂಟು ಗಂಗೆಯಲ್ಲ (ತೆಂಗಿನ ಕಾಯಿ)
- ನೀರಿನ್ಯಾಗ ಹುಟ್ಟೈತಿ  ನೀರುಮುಟ್ಟಿದ್ದರೆ ಸಾಯ್ತೈತಿ (ಉಪ್ಪು)
- ಎಳ್ಳುಗಾತ್ರ ಎಲಿಸಣ್ಣ
  ಹೂವಲಿ ಮೂರು ಬಣ್ಣ
  ಒಡೆದವ ನಮ್ಮಣ್ಣ
  ಬಡಿದಿದ್ದಂಟಾ ಮುಕ್ಕಿಗೆ
  ಮೂಗಳ ಸಣ್ಣ

ಸೋಲಿಗರು ಒಂದು ಜಾತಿಯ ಗಿಡವನ್ನು ಕುರಿತಂತೆ ಹೇಳುತ್ತಾರೆ. ಕಾಡಿನಲ್ಲಿ ಬೆಳೆಯುವಂತಹ ಒಂದು ಗಿಡ ಇದು ಬಡವರ ಗಿಡ ಎಂದು ಇವರ ಅರ್ಥದಲ್ಲಿ ಇದು ಮೂಡುತ್ತದೆ. ಈ ಒಗಟು ಪ್ರಾಸ ಬದ್ಧವಾಗಿ ಇವರು ದಿನ ಹೇಳುತ್ತಾರೆ ಹೇಳುವಂತಹ ಸಂದರ್ಭದಲ್ಲಿ ಅದರ ಒಂದು ಕಾಲ್ಪನಿಕ ಚಿತ್ರಣ ಕಾಣುತ್ತದೆ.

- ಕತ್ತಲೆ ಮನೇಲಿ ಕರಡಿ ಸುಲಿತವುರೆ

ಈ ಒಂದು ಒಗಟಿನ ಅರ್ಥವು ಹಲಸಿನ ಹಣ್ಣು ಎಂಬುದನ್ನು ತಿಳಿಸಿಕೊಡುತ್ತದೆ. ಸ್ಥಳೀಯ ಮತ್ತು ಪ್ರಾದೇಶಿಕ ಪರಿಸರದಲ್ಲಿ ಈ ಒಗಟನ್ನು ಕತ್ತಲೆ ಮನೆಯಲ್ಲಿ ಹಂದಿ ಗುಟ್ರಕುತ್ತೆ, ಮುಲೆಯಲ್ಲಿ ಮುದ್ಕಿ ಕುಯ್ತಾರೆ ಎಂಬುದಾಗಿದೆ. ಇಲ್ಲಿ ಪ್ರಾದೇಶಿಕವಾಗಿ ಅವರಿಗೆ  ಪರಿಚಿತವಾದ ವಸ್ತು ಪ್ರಾಣಿ, ಪಕ್ಷಿ, ಗಿಡ ಮರ ಬಳಸಿಕೊಳ್ಳುವುದರಿಂದ ಬದಲಾವಣೆ ಕಂಡುಬರುತ್ತದೆ. ಹಲಸಿನ ಹಣ್ಣು ಕುಯ್ಯುವುದನ್ನು ಮೇಲಿನ ಮೂರು ಒಗಟುಗಳು ಭಿನ್ನವಾಗಿ ಕಂಡುಬರುತ್ತದೆ.

- ಏಳುದರೆ ಉಂಟು ಈರದ ಕಾಯಿಯಲ್ಲ (ಹೀರೆಕಾಯಿ)
- ಉಳಿ ಉಂಟು ಹುಣಸೆ ಕಾಯಿಯೂ ಅಲ್ಲ (ನೆಲ್ಲಿಕಾಯಿ)
- ಮುಳ್ಳು ಹೊಲದಲ್ಲಿ ಬೆಳ್ಳಿ ಗೂಟ (ಮೂಲಂಗಿ)

- ಒಂದೇ ಕೋಳಿಗೆ ಬರಿದೇ ತೊಡೆ (ಬದನೆಕಾಯಿ)
- ಕೊಕ್ಕು ಮುಳ್ಳು ಅದ್ದುಗುಂಡು,
  ಕುರಿಮರಿ ದಪ್ಪಗುಂಡು,
  ಜಾಣಗಾರ ಹಕ್ಕಿ ಮರದ ಮ್ಯಾಲೆ ಕೂತದೆ (ಹಲಸಿನಹಣ್ಣು)
- ಚೋಟುದ್ದ ಗಿಡ
  ಗೆರ್ಸಿ ಅಗಲ ಎಲೆ (ಬಾಳೆ ಗಿಡ)
- ಮರದೊಳಗೆ ಮರ ಹುಟ್ಟಿ
  ಮರಕಾಯಿ ಹಣ್ಣಾಗಿ ನೋಡಲು ಬಲು ರುಚಿ ತಿನ್ನಕ್ಕಾಗಲ್ಲ (ಮಗು)
- ತೇರು ಒಡುತ್ತೆ
  ಹೂವು ಉದುರುತ್ತೆ (ರಾಗಿಕಲ್ಲು- ಹಸಿಟು)
- ನಡಿಯವು ಎಣ್ಟು
  ನಡೆ ತಪ್ಪಿದವು ಎರ್ಡು
  ನಡೆಯೋವು ನಾಲ್ಕು
  ಒಟ್ಟು ತಲೆ ಐದು (ಹೆಣ ಮತ್ತು ಹೋತ್ತ ನಾಲ್ವರು)
- ಚೊಟುದ್ದವನಿಗೆ ಚಿಟಿ ಕುಪಾಲಿ (ಬೆಂಕಿ ಕಡ್ಡಿ)
- ಹೀರು ದಾರೆಗಳಲ್ಲಿ ಹೀರೆಕಾಯಿ
  ಒಳಗೆ ಹುಳಿ ಉಂಟು ಹುಣಸೇ
  ಕಾಯಲ್ಲ ಮೇಲೆ ಕೆಂಪುಂಟು
  ನಿಂಬೆ ಹಣ್ಣಲ್ಲ ಎನದು (ನೆಲ್ಲಿಕಾಯಿ)
- ಒಂದು ಸಂಪಿಗೆಮರ ಹುಟ್ಟಿತು
  ಮರದಡಿ ಸಂತೆ ಹೂಡಿದರು
  ಸಂಪಿಗೆಮರ ಬಿದ್ದೋತು
  ಸಂತೆ ಹಾಕ್ದೋರು ಹೊಟ್ರೋದ್ರು
  (ಸೂರ್ಯನ ಉದಯಾಸ್ತ)
- ಕಾರಯ್ಯನ ಬೆಟ್ಟಕೂವೆ
  ಕಾಲಿಲ್ಲದ ಮುರುಗ ನಡತದೆ
  (ಮಂಜು)

೩.೩. ಸ್ಥಳನಾಮಗಳು

ಸೋಲಿಗರು ವಾಸಿಸುವ ಬಿಳಿಗಿರಿರಂಗನ ಬೆಟ್ಟ ಹಾಗೂ ಮಲೆಮಹಾದೇಶ್ವರ ಬೆಟ್ಟ ಪ್ರದೇಶಗಳಿಗೆ ಪ್ರಾಚೀನ ಇತಿಹಾಸ ಇದೆ. ಮಾನವನ ಅಸ್ತಿತ್ವವು ಕ್ರಿ.ಪೂ.೧೨೦೦ ವರ್ಷಗಳವರೆಗೂ ಹೋಗುತ್ತದೆಂದು ತಜ್ಞರ ಅಭಿಪ್ರಾಯವಿದೆ. ಇಂತಹ ದಟ್ಟವಾದ ಕಾಡಿನಲ್ಲಿ ಸೋಲಿಗರ ಸಮುದಾಯವು ವಾಸಿಸುತ್ತಿದೆ. ಇವರು ಇಟ್ಟುಕೊಂಡಿರುವ ಸ್ಥಳನಾಮಗಳ ಅಧ್ಯಯನವು ಬಹಳ ಮುಖ್ಯವಾದಂತಹದ್ದು. ಬಹುಶಿಸ್ತೀಯ ಅಧ್ಯಯನದ ನೆಲೆಯಲ್ಲಿ ಸ್ಥಳನಾಮಗಳನ್ನು ವಿಶ್ಲೇಷಿಸುತ್ತಾ ಹೋದಂತೆಲ್ಲಾ ಅವುಗಳ ಸಾಂಸ್ಕೃತಿಕ, ಜಾನಪದೀಯ ಹಾಗೂ ಭಾಷಿಕ ಮಹತ್ವಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಹಾಗೆಯೇ ಬಹಳ ಗಂಭೀರವಾಗಿ ಸ್ಥಳನಾಮಗಳ ವಿವಿಧ ಘಟಕಗಳನ್ನು ವಿಶ್ಲೇಷಿಸಿದರೆ ಅನೇಕ ಹೊಸ ಹೊಸ ವಿಚಾರಗಳು ಬೆಳಕಿಗೆ ಬರುತ್ತವೆ. ಅದು ಮಾನವನ ಹುಟ್ಟು, ಬೆಳವಣಿಗೆ, ಸಂಸ್ಕೃತಿ ನಾಗರೀಕತೆಯ ಹೊಸದೃಷ್ಟಿ ಮತ್ತು ಜೀವಂತ ಪಳಿಯುಳಿಕೆಗಳ ಮಹತ್ವವನ್ನು ಖಚಿತಪಡಿಸುತ್ತದೆ. ಸೋಲಿಗ ಸಮುದಾಯವು ದಟ್ಟವಾದ ಕಾಡಿನ ಮಧ್ಯದಲ್ಲಿ ವಾಸಿಸಲು ಗುಂಪುಗಳ ನೆಲೆಗಳಿಂದ ಆರಂಭವಾದವು. ಈ ನೆಲೆಗಳನ್ನು ಗುರುತಿಸಿ ಹೆಸರು ಹೇಳುವ ಸಲುವಾಗಿ ಸ್ಥಳನಾಮದ ಅಗತ್ಯ ಕಂಡುಬರುತ್ತದೆ. ಆಯಾಪ್ರದೇಶಕ್ಕೆ ಸಂಬಂಧಿಸಿದಂತೆ ಸಮುದಾಯಗಳು ಅಲ್ಲಿಯ ಪ್ರಾಕೃತಿಕ ವೈಶಿಷ್ಟ್ಯತೆಯ ಆಧಾರದ ಮೇಲೆ ತಮ್ಮ ತಮ್ಮ ನೆಲೆಗಳಿಗೆ ಹೆಸರುಗಳನ್ನು ಗುರುತಿಸಿದರು. ಬೆಟ್ಟ ಗುಡ್ಡ, ಕೆರೆ, ಕುಂಟೆ, ಬಂಗಲೆ, ಗವಿ, ಕೊಳ, ಕಲ್ಲು ಇದರ ಜೊತೆಗೆ ಪೋಡು ಎಂದು ಸೇರಿಸುವುದರ ಮೂಲಕ ತಮ್ಮ ವಾಸದ ಸ್ಥಳಗಳಿಗೆ ಹೆಸರಿಟ್ಟು ಕರೆದರು ಹಾಗೂ ಅಲ್ಲಿಯ ಪರಿಸರದ ಹಿನ್ನೆಲೆಯಲ್ಲಿ ಸ್ಥಳನಾಮಗಳು ಇಟ್ಟಿರುವ ಚಾರಿತ್ರಿಕವಾಗಿ ಅಂಶಗಳು ಗೋಚರಿಸುತ್ತವೆ. ಈ ಸಮುದಾಯ ಬೆಟ್ಟ ಗುಡ್ಡಗಳಲ್ಲಿ ವಾಸಿಸುತ್ತಿರುವುದರಿಂದ ತಮಗೆ ಅಗತ್ಯಕ್ಕೆ ಅನುಗುಣವಾಗಿ ನೀರಿನ ತಾಣಗಳನ್ನು ಹುಡುಕಿಕೊಂಡು ಹೋಗಿ ನೆಲಸಿರುವುದು ಕಂಡುಬರುತ್ತದೆ. ಅವರು ವಾಸಿಸುವಂತಹ ಸ್ಥಳಗಳು ಜೀವನ ನಿರ್ವಹಣೆಗಾಗಿ ಅನುಕೂಲಕರವಾಗಿರುವುದು ಕಂಡುಬರುತ್ತದೆ.

ಸೋಲಿಗರು ವಾಸಿಸುವಂತಹ ಸ್ಥಳನಾಮಗಳು ಹೆಚ್ಚಾಗಿ ಬೆಟ್ಟ, ಗುಡ್ಡ, ಮರ, ಮನೆ, ನೆಲ, ಹೀಗೆ ವಿಶಿಷ್ಟ ಮಾದರಿಯ ಭೌಗೋಳಿಕ ಅಂಶಗಳಿಂದ ಆವರಿಸಿದೆ. ಹೀಗಾಗಿ ಸೋಲಿಗರ ಸ್ಥಳನಾಮಗಳು ವಿಶೇಷವಾಗಿ ಆಸಕ್ತಿಯುತವಾಗಿದೆ. ಸ್ಥಳನಾಮಗಳು ಸಾಮಾನ್ಯವಾಗಿ ಸಂಯುಕ್ತವಾಗಿರುತ್ತವೆ. ಭಾಷಾಶಾಸ್ತ್ರಜ್ಞರ ನಾಮಗಳ ರಚನೆಯನ್ನಾಧರಿಸಿ ಪೂರ್ವಪದವೆಂದು ಉತ್ತರಪದವೆಂದು ಕರೆಯುತ್ತಾರೆ. ಕೆಲವು ಪೂರ್ವಪದವು ವಿಶಿಷ್ಟಾರ್ಥವನ್ನು ಹೊಂದಿದ್ದು, ಇದನ್ನು ನಿರ್ದಿಷ್ಟವೆಂತಲೂ ಉತ್ತರಪದವು ಸಾಮಾನ್ಯವಾಗಿದ್ದು ವಾರ್ಗಿಕವೆಂದು ಬಳಸಲಾಗುತ್ತದೆ. ಉತ್ತರಪದವು "ಪೋಡು" ಎಂದು ಕರೆಯುತ್ತಾರೆ. ಅಂದರೆ ವಾರ್ಗಿಕವಾಗಿ ಪೋಡು ಎಂಬ

ಪದ ಬಳಕೆಯಾಗುತ್ತದೆ. ಸಾಮಾನ್ಯವಾಗಿ ಸೋಲಿಗರ ಸ್ಥಳನಾಮಗಳೆಲ್ಲವು "ಪೋಡು" ಎಂಬ ವಾರ್ಗಿಕದೊಡನೆ ಸೇರಿಕೊಂಡು ರಚನೆಯಾಗಿರುವುದನ್ನು ಕಾಣಬಹುದು.

ಹೊಸ ಪೋಡು

ಬಂಗಲೆ ಪೋಡು

ಮಂಜಿಗುಂಡಿ ಪೋಡು

ಗೊಂಬೆಗಲ್ಲು ಪೋಡು

ಸಂಪಿಗೆ ಪೋಡು

ಕೆರೆದಿಂಬ ಪೋಡು

ಪುರಾಣಿ ಪೋಡು

ಕಲ್ಯಾಣಿ ಪೋಡು

ಯರಕನಗದ್ದೆ(ಕಾಲೋನಿ) ಪೋಡು

ಬೂತಾಣಿ ಪೋಡು

ಕನ್ನೆರ ಕಾಲೋನಿ ಪೋಡು

ಹೀಗೆ ಸೋಲಿಗ ಸಮುದಾಯವು ತಮ್ಮ ಸ್ಥಳನಾಮವನ್ನು ಕರೆದುಕೊಂಡಿರುವುದು ನಮಗೆ ಕಂಡುಬರುತ್ತದೆ. ಒಂದೊಂದು ಸ್ಥಳನಾಮಕ್ಕೂ ಒಂದೊಂದು ವಿಶೇಷತೆ ಇರುವುದು ಗೋಚರಿಸುತ್ತದೆ. ಇದನ್ನು ಇಲ್ಲಿ ಭಾಷಿಕವಾಗಿ ವಿಶ್ಲೇಷಿಸಲಾಗಿದೆ.

**ಗೊಂಬೆಗಲ್ಲು ಪೋಡು**

ಈ ಸ್ಥಳನಾಮವು ವಿಶಿಷ್ಟವಾದ ಭೌಗೋಳಿಕ ಲಕ್ಷಣವನ್ನು ಒಳಗೊಂಡಿದೆ. ಗೊಂಬೆ+ಕಲ್ಲು= ಗೊಂಬೆಗಲ್ಲು ಆಗಿದೆ. ಆ ಸ್ಥಳದಲ್ಲಿ ತಾಯಿಯು ಮಗುವನ್ನು ಎತ್ತಿಕೊಂಡಿರುವ ರೀತಿಯಲ್ಲಿ ಒಂದು ಕಲ್ಲಿನಲ್ಲಿ ಗೋಚರಿಸುತ್ತದೆ. ಇದರಿಂದ ಅಲ್ಲಿ ವಾಸಿಸುವ ಸೋಲಿಗರು ಆ ಪ್ರದೇಶವನ್ನು ಗೊಂಬೆಗಲ್ಲು ಎಂದು ಕರೆದುಕೊಂಡಿರುವುರು. ಗೊಂಬೆ+ಕಲ್ಲು= ಗೊಂಬೆಗಲ್ಲು. ಇಲ್ಲಿ ಕ ಕಾರಕ್ಕೆ ಇಲ್ಲಿ ಗ ಕಾರವಾಗಿ ಬದಲಾವಣೆಯಾಗಿದ್ದು, ಕಲ್ಲು>ಗಲ್>ಗಲ್ಲು ಎಂದು ಬಳಕೆಯಾಗಿದೆ. ಈ ಪ್ರದೇಶವು ಬೃಹತ್ ಶಿಲಾಯುಗದ ನಿವೇಶನವೆಂದು ಗುರುತಿಸಲಾಗಿದೆ. ಇದರ ಸುತ್ತಿನ ಹತ್ತಾರು ಮೈಲಿಗಳ ಸುಪರ್ದಿನಲ್ಲಿ ಏಳೆಂಟು ನಿವೇಶನಗಳಿರುವುದನ್ನು ಗುರ್ತಿಸಲಾಗಿದೆ.

**ಮಂಜಿಗುಂಡಿ ಪೋಡು**

ಮಂಜಿಗುಂಡಿ ಎಂಬ ಸ್ಥಳವು ಸೋಲಿಗರು ನೆಲೆ ನಿಂತಿರುವ ಒಂದು ಪ್ರದೇಶ. ದಟ್ಟವಾದ ಅರಣ್ಯದಲ್ಲಿ ಬದುಕನ್ನು ಕಟ್ಟಿಕೊಂಡು ಬದುಕುತ್ತಿರುವ ಇವರು ತಮ್ಮ ನೆಲೆಯಲ್ಲಿರುವ ಪ್ರಾಕೃತಿಕ ಅಂಶಗಳ ಹಿನ್ನೆಲೆಯಲ್ಲಿ ಸ್ಥಳಗಳ ಹೆಸರನ್ನಿಟ್ಟು ಕರೆದಿದ್ದಾರೆ. ಅಲ್ಲಿ ಮಂಜಿಗುಂಡಿ ಪೋಡು ಎಂಬ

ಸ್ಥಳನಾಮದ ಪೂರ್ವ ಪದವು ಮಂಜು ಅಥವಾ ಹಿಮದಿಂದ ಆವರಿಸಿದ ಪ್ರದೇಶವೆಂದು ಸೂಚಿಸಿದ್ದಾರೆ. ಉತ್ತರ ಪದವಾದ ಪೋಡು ಎಂಬುದು ಹಳ್ಳಿ/ಭಾಗ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ "ಮಂಜಿಗುಂಡಿ ಪೋಡು" ಎಂಬ ಪ್ರದೇಶದಲ್ಲಿ ಬೆಳಗ್ಗೆ ಮತ್ತು ಸಾಯಂಕಾಲದ ಸಮಯದಲ್ಲಿ ಬೆಟ್ಟದ ಸಾಲಿನಲ್ಲಿ ಆ ಭಾಗದಲ್ಲಿ ಮಂಜು ಕವಿದಿರುತ್ತದೆ. ಅಲ್ಲದೆ ಆ ಸ್ಥಳದಲ್ಲಿ ಒಂದು ದೊಡ್ಡ ಪ್ರಮಾಣದ ಗುಂಡಿಯೂ ಇದೆ. ಹೀಗಾಗಿ ಭೌಗೋಳಿಕ ಮಾದರಿಯ ಹಿನ್ನಲೆಯಲ್ಲಿ ಸೋಲಿಗರು ವಾಸಿಸಿರುವ ಆ ಸ್ಥಳನಾಮಕ್ಕೆ ಈ ರೀತಿಯಲ್ಲಿ ಕರೆಯುವ ರೂಢಿ ಇದೆ. ಮಂಜು+ಗುಂಡಿ ಎಂಬ ಪದವು ಸೋಲಿಗರ ಮಾತಿನ ಬಳಕೆಯಲ್ಲಿ ಮಂಜಿಗುಂಡಿ ಪೋಡು ಎಂದಾಗಿದೆ. ಸೋಲಿಗರು ಎಂದು ಈ ಭಾಗದಲ್ಲಿ ನೆಲೆ ನಿಂತರೋ ಅಂದಿನಿಂದಲೇ ಅವರು ಈ ರೀತಿಯಲ್ಲಿ ಕರೆಯುವ ವಾಡಿಕೆ ಇದೆ.

**ಕಲ್ಯಾಣಿ ಪೋಡು**

ಕಲ್ಯಾಣಿ ಪೋಡು ಸೋಲಿಗರು ನೆಲೆಸಿರುವಂತಹ ಒಂದು ಪ್ರದೇಶವಾಗಿದ್ದು. ದಟ್ಟವಾದ ಅರಣ್ಯದಲ್ಲಿ ಬಿಳಿಗಿರಿರಂಗಪ್ಪನ ದೇವಸ್ಥಾನವಿದೆ. ಆ ದೇವಸ್ಥಾನದ ಪೂಜಾ ಕಾರ್ಯಗಳಿಗೆ ಪವಿತ್ರವಾದಂತಹ ನೀರನ್ನು ಉಪಯೋಗಿಸುತ್ತಾರೆ. ಅದಕ್ಕಾಗಿ ಒಂದು ಕೊಳವನ್ನು ದೇವಸ್ಥಾನದ ಪಕ್ಕದಲ್ಲಿ ಕಲ್ಲುಗಳಿಂದ ನಿರ್ಮಿಸಿರುತ್ತಾರೆ. ಈ ಕೊಳದ ನೀರನ್ನು ದೇವಸ್ಥಾನದ ಅವಶ್ಯಕತೆಗಾಗಿ ಬಳಸುವುದನ್ನು ನೋಡಬಹುದಾಗಿದೆ. ಇದನ್ನು ಕಲ್ಯಾಣಿ ಎಂತಲೂ ಕರೆಯುವುದುಂಟು. ಕಲ್ಯಾಣಿ ಪದದ ಅರ್ಥವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಚೌಕಕಾರದ ಕಲ್ಲಿನ ಮೆಟ್ಟಿಲುಗಳಿರುವ ಕೊಳ. ಅದರ ಸುತ್ತಲಿನ ಪ್ರದೇಶದಲ್ಲಿ ಸೋಲಿಗ ಸಮುದಾಯವು ವಾಸಿಸುತ್ತಿರುವುದರಿಂದ ಅದಕ್ಕೆ ಕಲ್ಯಾಣಿ ಪೋಡು ಎಂಬುದಾಗಿ ಕರೆದಿದ್ದಾರೆ. ಮೌಖಿಕವಾಗಿ ಮತ್ತು ವಕ್ತೃಗಳ ಹೇಳಿಕೆಯಿಂದ ಮತ್ತು ಪ್ರತ್ಯಕ್ಷವಾಗಿ ಕಂಡುಬರುತ್ತದೆ.

**ಸಂಪಿಗೆ ಪೋಡು**

ಸಂಪಿಗೆ>ಸಂಪಿಗೆ ಒಂದು ಬಗೆಯ ಮರ ಮತ್ತು ಸುಗಂಧದಿಂದ ಕೂಡಿದರೆ ಹೂವು ಈ ಮರವು ಇರುವ ಸ್ಥಳವು ಸೋಲಿಗ ಸಮುದಾಯದವರಿಗೆಲ್ಲಾ ಪವಿತ್ರವಾದ ಸ್ಥಳ ಗುಂಡಾಲ ಹೊಳೆ (ಭಾರ್ಗವಿ ನದಿ)ಯ ಅಂಚಿನಲ್ಲಿರುವ ಸಂಪಿಗೆ ಮರವು ಸಾವಿರಾರು ವರ್ಷಗಳಷ್ಟು ಹಳೆಯದಾಗಿದೆ. ಅದರ ಬುಡದಲ್ಲಿ ಟೊಳ್ಳಾಗಿದ್ದು ಸಣ್ಣ ಗುಹೆಯಂತಹ ಭಾಗದಲ್ಲಿ ಲಿಂಗಾಕಾರ ಕಲ್ಲುಗಳನ್ನು ನಡೆಸಲಾಗಿದೆ, ಸುತ್ತಲು ನೂರೊಂದು ಕಲ್ಲುಗಳನ್ನು ನೆಡಲಾಗಿದೆ. ಅವರು ಅದನ್ನು ಲಿಂಗ ರೆಂಬೆ ಬೃಹದಾಕಾರವಾಗಿ ಬೆಳೆಯುತ್ತಲೆ ಇರುತ್ತದೆ. "ದೊಡ್ಡ ಸಂಪಿಗೆ" ಮರವೆಂತಲೂ ಕರೆಯುವುದುಂಟು. ಇಲ್ಲಿ ಸೋಲಿಗ ಸಮುದಾಯ ವಾಸಿಸುತ್ತಿರುವುದರಿಂದ ಅಲ್ಲದೆ ಸಂಪಿಗೆ ಮರವಿರುವುದರಿಂದ ಸಂಪಿಗೆ ಪೋಡು ಎಂದು ಕರೆದಿದ್ದಾರೆ. ತಮ್ಮ ಗ್ರಾಮದೇವತೆ ಎಂದು ಸೋಲಿಗರು ನಂಬಿದ್ದಾರೆ. ಹಬ್ಬ ಜಾತ್ರೆಯ ಆರಂಭದಲ್ಲಿ ಎಲ್ಲಾ ಸೋಲಿಗ ಸಮುದಾಯದವರು ಬಂದು ಪೂಜಿಸಿಕೊಂಡು ಹೋಗುವುದು ರೂಢಿಯಲ್ಲಿದೆ.

**ಕೆರೆದಿಂಬ ಪೋಡು**

ಸೋಲಿಗ ಸಮುದಾಯವು ವಾಸಿಸುವಂತಹ ಈ ಸ್ಥಳವು ವಿಶೇಷತೆಯನ್ನು ಹೊಂದಿರುವಂತಹದ್ದಾಗಿದೆ. ಈ ಪೋಡಿನ ಸಮೀಪದಲ್ಲಿ ಕೆರೆಯೊಂದು ಇದ್ದು ಎತ್ತರ ಪ್ರದೇಶದಲ್ಲಿ ಸೋಲಿಗರ ವಸತಿ ಸ್ಥಳವು ಇರುವುದರಿಂದ ಕೆರೆದಿಂಬ ಪೋಡು ಎಂದು ಹೆಸರಿಸಲಾಗಿದೆ. ದಿಂಬ ಎಂದರೆ ದಿಣ್ಣೆ, ದಿಬ್ಬ ಎತ್ತರವಾದ ಪ್ರದೇಶ ಎಂದು ಅರ್ಥವಾಗುತ್ತದೆ.

**ಪುರಾಣಿ ಪೋಡು**

ಮೂಲತಃ ಸೋಲಿಗರು ಕಾಡಿನಲ್ಲಿ ವಾಸ ಮಾಡುವವರು ಅದಕ್ಕಾಗಿ ಅನುಕೂಲಕರವಾದ ಜಾಗದಲ್ಲಿ ನೆಲೆ ನಿಂತಿದ್ದಾರೆ. ಕಾಡು ಪ್ರಾಣಿಗಳಿಂದ ಕಡಿಮೆ ತೊಂದರೆ ಇರುವ ಸ್ಥಳ ಸಮೀಪದಲ್ಲಿ ನೀರಿನ ಸೌಲಭ್ಯ ಇರುವುದನ್ನು ನೋಡುತ್ತಾರೆ. ಪುರಾಣಿ/ಕೊಳ, ಪುಷ್ಕರಣೆ (ತತ್ಸಮ) ಇದು ಸಂಸ್ಕೃತ ಪದವಾಗಿದೆ. ಇದರ ಅರ್ಥ ನಿಘಂಟಿನಲ್ಲಿ ಕೊಳ, ಸರೋವರ, ಹೊಕ್ಕು ತುಂಬುವ ಬಾವಿ ಎಂಬುದಾಗಿದೆ. ಅಲ್ಲಿ ವಸತಿ ಪ್ರದೇಶದಲ್ಲಿ ನೀರಿನ ಸೌಲಭ್ಯಕ್ಕಾಗಿ ಕೊಳ ಇರುವುದರಿಂದ ಪುಷ್ಕರಣೆ ಆಗಿದೆ, ಪುಷ್ಕರಣೆ ಪದವು ಅಪಬ್ರಂಶವಾಗಿ ಪುರಾಣಿಯಾಗಿರಬಹುದಾಗಿದೆ.

**ಯರಕನಗದ್ದೆ ಕಾಲೋನಿ (ಪೋಡು)**

ಇಲ್ಲಿ ನೀರು ಹೆಚ್ಚು ಇರುವುದರಿಂದ ಮತ್ತು ಯರಕನ ಮರಗಳು ಈ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುವುದರಿಂದ ಇದನ್ನು ಯರಕನಗದ್ದೆ ಪೋಡು ಎಂದು ಕರೆಯಲಾಗಿದೆ. ೧೯೭೦ರ ದಶಕದಲ್ಲಿ ದೇವರಾಜು ಅರಸು ಅವರ ಸರ್ಕಾರದಲ್ಲಿ ಸೋಲಿಗರಿಗೆ ಆಶ್ರಯ ಮನೆಗಳನ್ನು ನೀಡಿದರು. ಹಾಗಾಗಿ ಅದು ಯರಕನಗದ್ದೆ ಕಾಲೋನಿ ಎಂದು ಕರೆಸಿಕೊಂಡಿದೆ. ಯರಕನ+ಗದ್ದೆ ಇದು ಕ್ಷೇತ್ರವಾಚಕ ಭತ್ತ ಬೆಳೆಯುವ ಬೆಳೆ ಎಂದರ್ಥ. ಯರಕ ಸಸ್ಯ ಮರಗಳಿಂದ ಆವರಿಸಿದ ಪ್ರದೇಶವೆಂದು ಸೂಚಿಸುತ್ತಿದೆ. ಕಾಲೋನಿ ಉತ್ತರ ಪದದ ಅರ್ಥ. ವಸಹಾತು ಮೊಹಲ್ಲ, ಎಂದರ್ಥವಾಗುತ್ತದೆ. ಇದು ಇಂಗ್ಲೀಷ್ ಪದ ಕಾಲೋನಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಹೊಸದಾಗಿ ವಾಸ್ತವ್ಯಕ್ಕೆ ಹೂಡಿದ ಸ್ಥಳ. ಬ್ರಿಟೀಷರ ಆಳ್ವಿಕೆ ಪ್ರಭಾವದಿಂದ ಅಸ್ತಿತ್ವಕ್ಕೆ ಬಂದದಾಗಿದೆ. ಈ ಹಿನ್ನೆಲೆಯಲ್ಲಿ ಸೋಲಿಗರು ಆ ಒಂದು ಪ್ರದೇಶದಲ್ಲಿ ವಾಸಿಸುವ ಸ್ಥಳಕ್ಕೆ ಈ ಯರಕನಗದ್ದೆ ಕಾಲೋನಿ ಎಂದು ಕರೆಯಲಾಗಿದೆ.

**ಭೂತಾಣಿ ಪೋಡು**

ಸೋಲಿಗರು ವಾಸವಿರುವ ಈ ಪೋಡಿಗೆ ವಿಶೇಷವಾದ ಹೆಸರು ಇಟ್ಟಿರುವುದನ್ನು ಕಾಣಬಹುದಾಗಿದೆ. ಭೂತ + ಅಣ್ಣಿ = ಭೂತಾಣಿಯಾಗಿದೆ. ಭೂತ ಎಂದರೆ ನಿಘಂಟುವಿನಲ್ಲಿ ಜಗತ್ತಿನ ಪ್ರಾಣಿವರ್ಗ ದೆವ್ವ, ಪಿಶಾಚಿ, ಎಂಬ ಅರ್ಥವಿದೆ. ಅಣ್ಣೆ(ಹಳ್ಳ) ಒಂದು ಬಗೆಯ ಸೊಪ್ಪು ಎಂದರ್ಥ. ಇಲ್ಲಿ ಒಂದು ಹಳ್ಳ ಇದ್ದು ಆ ಸ್ಥಳಗಳಲ್ಲಿ ಭೂತ(ದೆವ್ವ, ಪಿಶಾಚಿ) ಇವೆ. ಎಂದು

ನಂಜಿದ್ದಾರೆ. ಬಿಸಿಲು ಇರುವ ಸಮಯದಲ್ಲಿ, ತುಂತುರು ಮಳೆ ಬಂದರೆ ಕಾಮನ ಬಿಲ್ಲು ಕಾಣಿಸಿಕೊಳ್ಳುವುದು ಸಹಜ. ಇದನ್ನು ಸೋಲಿಗರು ಭೂತ ಇರಬಹುದೆಂದು ಹೆದರುತ್ತಿದ್ದರು. ಆದ್ದರಿಂದ ಆ ಸ್ಥಳದಲ್ಲಿದ್ದ ಪೋಡಿಗೆ "ಭೂತಾಣಿ" ಪೋಡು ಎಂದು ಕರೆದುಕೊಂಡಿರುವುದನ್ನು ಗಮನಿಸಲಾಗಿದೆ.

**ಬಂಗಲೆ ಪೋಡು**

ಸೋಲಿಗರು ದಟ್ಟವಾದ ಅರಣ್ಯದಲ್ಲಿ ವಾಸಿಸುತ್ತಿದ್ದು ಇವರು ತಮ್ಮ ತಮ್ಮ ವಾಸಿಸುವ ಸ್ಥಳವನ್ನು ಪ್ರಾಕೃತಿಕವಾಗಿ ಹೆಸರು ಇಟ್ಟಿರುವುದು ಕಂಡುಬರುತ್ತದೆ. "ಬಂಗಲೆ ಪೋಡು" ಬಂಗ್ಲೆ + ಪೋಡು ಎನ್ನುವುದು ಇದು ವಿಶೇಷವಾಗಿದೆ. ಬಂಗಲೆ ಎಂದರೆ ದೊಡ್ಡ ಮನೆ, ಸೌಧ, ಎಂಬ ಅರ್ಥವನ್ನು ಕೊಡುತ್ತದೆ. ಸುಮಾರು ದಶಕಗಳ ಹಿಂದೆ ಬ್ರಿಟೀಷ್ ಸರ್ಕಾರದ ಸಂದರ್ಭದಲ್ಲಿ ಬೆಟ್ಟದ ಎತ್ತರವಾದ ಪ್ರದೇಶದಲ್ಲಿ ಬ್ರಿಟೀಷರು ಒಂದು ಬಂಗಲೆಯೊಂದನ್ನು ಕಟ್ಟಿ ವಾಸವಿದ್ದರು ಎಂದೆನಿಸುತ್ತದೆ. ಈ ಸುತ್ತಮುತ್ತ ಇರುವ ಪ್ರದೇಶದಲ್ಲಿ ಯಾವುದೇ ಮನೆಗಳು ಕಂಡುಬರುವುದಿಲ್ಲ. ಈಗ ಅಂತಹ ಜಾಗದಲ್ಲಿ ಸೋಲಿಗರು ವಾಸವಿರುವುದು ಕಂಡುಬರುತ್ತದೆ. ಈ ವಾಸ ಸ್ಥಳವನ್ನು ಬಂಗ್ಲೆ ಪೋಡು ಎಂಬುದಾಗಿ ಕರೆಯುತ್ತಾರೆ. ಇತ್ತೀಚೆಗೆ ಇಲ್ಲಿ ಅರಣ್ಯಾಧಿಕಾರಿಗಳ ಕಛೇರಿಯೊಂದನ್ನು ಮಾಡಿಕೊಂಡಿದ್ದಾರೆ.

**(ಸಾಮಾನ್ಯವಾಗಿ ಭೌಗೋಳಿಕ ಲಕ್ಷಣಗಳನ್ನು ಸೂಚಿಸುವಂತಹವು)**

**ಕೆ. ಗುಡಿ**

ಕ್ಯಾತದೇವರ ಗುಡಿಯನ್ನು ಚಾಮರಾಜನಗರ ಜಿಲ್ಲೆಯ ಅಂಚಿನಲ್ಲಿರುವ ಸೋಲಿಗರು ಈ ಪ್ರದೇಶಕ್ಕೆ ಕೆ.ಗುಡಿ ಎಂದು ಕರೆಯುವುದುಂಟು. ಈ ಪ್ರದೇಶದಲ್ಲಿ ಸೋಲಿಗ ಸಮುದಾಯದ ಕ್ಯಾತದೇವರ (ಕ್ಯಾತಪ್ಪ) ದೈವ ಇರುವ ಕಾರಣ ಈ ಹೆಸರು ಬಂದೆದೆ. ಸೋಲಿಗ ಸಮುದಾಯದವರು ವಾಸಿಸುತ್ತಿರುವ ಈ ಗುಡಿಯು ಸೋಲಿಗ ಗ್ರಾಮದೇವತೆಯಾಗಿದೆ. ಇಲ್ಲಿ ವಾಸಿಸುವಂತಹ ಸಮುದಾಯದವರು ಕೆ.ಗುಡಿ ಎಂದು ಕರೆದುಕೊಂಡಿರುವುದು ಗಮನಾರ್ಹವಾಗಿದೆ. ಕ್ಯಾತದೇವರು ಗುಡಿ ಎಂದು ಇದರ ಹೆಸರು ಪೂರ್ವ ಪದವು ವ್ಯಕ್ತಿ ಸೂಚಕ ದೈವ ಮೂಲವಾಗಿದ್ದು ಉತ್ತರ ಪದವು ಸಾಮಾನ್ಯ ವಾಚಕವಾಗಿ ಕಂಡುಬರುತ್ತದೆ.

**ಕನ್ನೇರ ಕಾಲೋನಿ**

ಕನ್ನೇರ + ಕಾಲೋನಿ ಇಲ್ಲಿ ಪೂರ್ವ ಪದವು ಕನ್ನೇಯರು > ಕನ್ನೇರು > ಕನ್ನೆ > ಕುಮಾರಿ > ಒಂದು ಬಗೆಯ ಸಸ್ಯ ಕನ್ನಾರಾಗಿ > ಕನ್ಯಾಮಾಸ ಎಂಬ ಅರ್ಥ ಕನ್ನೇರು ಕಾಲೋನಿ ಪರಿಷತ್ತಿನ ನಿಂಘಟಿನಲ್ಲಿ ಕಂಡುಬರುತ್ತದೆ. ಇಲ್ಲಿ ಸೋಲಿಗರ ಹೆಣ್ಣು ಮಕ್ಕಳು ಹರಿಯುವ ಹಳ್ಳದ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಸ್ನಾನ ಮಾಡಲು ಈ ಸ್ಥಳವನ್ನು ಗುರ್ತಿಸಲಾಗಿತ್ತು. ಆ ಸ್ಥಳದ

ಸ್ವಲ್ಪ ದೂರದಲ್ಲಿ ಈ ಸಮುದಾಯದವರು ವಾಸಿಸುತ್ತಿರುವುದು ಕಂಡುಬರುತ್ತದೆ. ಈ ಸ್ಥಳವನ್ನು ಕನ್ನೇರ ಕಾಲೋನಿ ಎಂದು ಕರೆದು ಕೊಂಡಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಉತ್ತರ ಪದವು ಕಾಲೋನಿ ಎಂದಾಗಿದ್ದು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೊಸದಾಗಿ ವಾಸ್ತವ್ಯ ಹೂಡಿದ ಸ್ಥಳಕ್ಕೆ ಕಾಲೋನಿ ಎಂದು ಕರೆಯಲಾಗಿದೆ. ಪೋಡಿಗೆ ಬದಲಾಗಿ ಕಾಲೋನಿ ಎಂದು ನಾಮ ನಿರ್ದೇಶನ ಮಾಡಿಕೊಳ್ಳಲಾಗಿದೆ.

**ಹೊಸಪೋಡು**

ಹೊಸ+ಪೋಡು ಪೂರ್ವ ಪದವು ಹೊಸ, ನವೀನ, ನೂತನ ಎಂಬ ಅರ್ಥವನ್ನು ನೀಡುತ್ತಿದ್ದು, ಗುಣವಾಚಿಯಾಗಿ ಬಳಕೆಯಾಗುತ್ತದೆ. ಸರ್ಕಾರವು ಅರಣ್ಯ ಸಂರಕ್ಷಿಸಲು ಅನೇಕ ಕಾರ್ಯಕ್ರಮಗಳನ್ನು ರೂಪಿಸಿದೆ. ದಟ್ಟವಾದ ಅರಣ್ಯದಲ್ಲಿ ನೆಲೆನಿಂತ ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸಲಾಗಿದೆ. ಹೀಗೆ ಒಕ್ಕಲೆಬ್ಬಿಸಿದ ಅರಣ್ಯವಾಸಿಗಳಿಗೆ ವಾಸಿಸಲು ಸರಕಾರ ನೂತನವಾಗಿ ವಾಸದ ಮನೆಗಳನ್ನು ನಿರ್ಮಿಸಲಾಗಿದೆ. ಕಾಡಿನಿಂದ ಹೊರಗೆ ಹೀಗೆ ನಿರ್ಮಿಸಿದ ಈ ವಾಸದ ನೆಲೆಗೆ ಸೋಲಿಗರು ಅವರದೇ ಭಾಷೆಯಲ್ಲಿ "ಹೊಸಪೋಡು" ಎಂದು ಕರೆಯಲಾಗಿದೆ.

**೩.೪. ಸಂಬಂಧವಾಚಕಗಳು**

ಮಾನವನ ಜೀವನದಲ್ಲಿ ಸಂಬಂಧಗಳು ಪ್ರಮುಖವಾದಂತಹ ಪ್ರಭಾವ ಬೀರುತ್ತದೆ. ಸಂಬಂಧಗಳು ಮನುಷ್ಯನಲ್ಲಿ ಒಂದು ಹೊಸ ಅನುಬಂಧಗಳ ಸೃಷ್ಟಿಯನ್ನು ಮಾಡುತ್ತಿರುತ್ತದೆ. ಮಾನವನು ಪ್ರಕೃತಿಯ ಒಂದು ಭಾಗ. ಪ್ರಕೃತಿಯಲ್ಲಿರುವ ಎಲ್ಲಾ ಜೀವಿಗಳಲ್ಲಿರುವಂತೆ ಮನುಷ್ಯನು ಕೂಡ ಒಂದು ಜೀವಿ. ಪ್ರಕೃತಿಯಲ್ಲಿನ ಪ್ರತಿಯೊಂದು ಜೀವಿಯು ತನ್ನದೇ ಆದ ಸಂಬಂಧಗಳು ಮತ್ತು ಬಾಂಧವ್ಯಗಳ ಬೆಸುಗೆಯಿಂದ ಜೀವಿಸುತ್ತಿರುತ್ತದೆ. ಹೀಗಾಗಿ ಸಂಘಜೀವಿಯಾಗಿರುತ್ತಾನೆ. ಸಮಾಜವಿಲ್ಲದೆ ಮಾನವ ಜೀವಿಸಲಾರ, ಸಮಾಜದಿಂದ ಮಾನವ ಸಂಪೂರ್ಣವಾಗಿ ಹೊರಗುಳಿಯಲು ಸಾಧ್ಯವೇ ಇಲ್ಲ. ಇಡೀ ಪ್ರಾಣಿ ಸಂಕುಲಗಳಲ್ಲಿ ರಕ್ತ ಸಂಬಂಧಕ್ಕೆ ವಿಶಿಷ್ಟ ಸ್ಥಾನವಿರುವುದು ಮನುಷ್ಯನಲ್ಲಿ ಮಾತ್ರ. ಮನುಷ್ಯನಿಗೆ ಇರುವ ಅನೇಕ ಬಗೆಯ ಸಂಬಂಧಗಳಲ್ಲಿ ಬಂಧುತ್ವವೂ ಒಂದು. ಅಪ್ಪ-ಅಮ್ಮ-ಮಕ್ಕಳು, ಕುಟುಂಬ ಸಮಾಜ ಮತ್ತು ಸಂಸ್ಕೃತಿಗಳು ವ್ಯಕ್ತಿಯಿಂದ ಪೂರ್ಣವಾಗಿ ಬೇರ್ಪಟ್ಟು ಸ್ವತಂತ್ರವಾದ ಅಸ್ತಿತ್ವವನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಭಾಷೆಯೂ ಒಂದು ಸಮಾಜ ಮತ್ತು ಸಂಸ್ಕೃತಿ ಇವು ಒಂದಕ್ಕೊಂದು ಪೂರಕವಾಗಿ ಕೆಲಸಮಾಡುತ್ತವೆ. ಮಾನವನ ಜೀವನದಲ್ಲಿ ಭಾಷೆಯೂ ಬಹು ಮುಖ್ಯ ಕಾರ್ಯನಿರ್ವಹಿಸುತ್ತದೆ. ಜನಾಂಗ-ಭಾಷೆ-ಸಮಾಜ-ಸಂಸ್ಕೃತಿ ಇವುಗಳಲ್ಲಿ ಒಂದಕ್ಕೊಂದು ಸಂಬಂಧವಿರುತ್ತದೆ. ಒಂದು ಸಮುದಾಯದ ಭಾಷೆ ಸಂಸ್ಕೃತಿಯನ್ನು ತಿಳಿಯಬೇಕೆಂದರೆ ಕಥೆ, ಗೀತೆ, ಒಗಟು, ಗಾದೆ, ಹೆಸರು ಮುಂತಾದ ಭಾಷಾ ಸಮುದಾಯದ ಮೂಲಕ ಆ ಸಮಾಜದ ಸಂಸ್ಕೃತಿಯನ್ನು ಅಭಿವ್ಯಕ್ತಗೊಳಿಸುತ್ತದೆ.

ಒಂದು ಸಮುದಾಯದ ಭಾಷಿಕರು ಹಲವು ಬಗೆಯ ಸಾಮಾಜಿಕ ಸಂಬಂಧಗಳಿಂದ ಬೆಸೆದುಕೊಂಡಿರುತ್ತಾರೆ. ಅಂತಹ ಸಾಮಾಜಿಕ ಸಂಬಂಧಗಳಲ್ಲಿ ಬಂಧುತ್ವವೂ ಒಂದು. ಇಂದು ಇಂಗ್ಲೀಷ್‌ನ 'Kinship' ಪದದಿಂದ ಬಳಕೆಯಾಗಿದೆ. ಕನ್ನಡದಲ್ಲಿರುವ "ಬಂಧುತ್ವ" ಪದವು ರಕ್ತಸಂಬಂಧಿ, ಕಳ್ಳು-ಬಳ್ಳಿ, ನೆಂಟರು ಇತ್ಯಾದಿ ಅರ್ಥಗಳನ್ನು ಹೊಂದಿದೆ. ಬಂಧುತ್ವವು ಹುಟ್ಟಿನಿಂದಲೇ ಬಂದಿರುವಂತಹದ್ದು. ಬಂಧುತ್ವವು ವಯಸ್ಸು, ಲಿಂಗ, ಜಾತಿ, ಹಾಗೂ ಸಾಮಾಜಿಕ ವರ್ಗಗಳನ್ನು ಅವಲಂಬಿಸಿರುತ್ತದೆ. ಇಂತಹ ಬಂಧುವಾಚಕ ಅಥವಾ ಸಂಬಂಧವಾಚಕಗಳ ಪರಿಕಲ್ಪನೆ ಮತ್ತು ಪರಿಭಾಷೆಗಳು ಭಿನ್ನ ಸಂಸ್ಕೃತಿಗಳಲ್ಲಿ ವೈವಿಧ್ಯಮಯವಾಗಿರುವ ಸಾಧ್ಯತೆಗಳಿವೆ. ವ್ಯಕ್ತಿಗೆ ತನ್ನದೇ ಆದ ಬಂಧು-ಬಳಗವಿರುತ್ತದೆ. ಹಾಗೆಯೇ ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟದಲ್ಲಿ ನೆಲೆಸಿರುವ ಸೋಲಿಗ ಸಮುದಾಯದಲ್ಲಿ ಬೆಳಕೆಯಾಗಿರುವಂತಹ ಸಂಬಂಧವಾಚಕಗಳ ಸ್ವರೂಪ ಹಾಗೂ ಬಳಕೆಯ ವಿಧಾನಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಕೌಟುಂಬಿಕ ವಲಯದ ಭಾಷಾ ಬಳಕೆಯನ್ನು ಅರಿಯಲು ಸಂಬಂಧವಾಚಕಗಳ ಅಧ್ಯಯನ ಅಗತ್ಯವಾಗಿದೆ. ಸೋಲಿಗರಲ್ಲಿ ಬಳಕೆಯಾಗುವ ಸಂಬಂಧವಾಚಕಗಳನ್ನು ರಾಚನಿಕವಾಗಿ ಎರಡು ರೀತಿಯಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ.

೧. ರಕ್ತ ಸಂಬಂಧದಿಂದ ಉಂಟಾಗುವ ಸಂಬಂಧವಾಚಕಗಳು.

೨. ವೈವಾಹಿಕ ಸಂಬಂಧದಿಂದ ಉಂಟಾಗುವ ಸಂಬಂಧವಾಚಕಗಳು ಹಾಗೂ ಇತರೆ ಸಂಬಂಧವಾಚಕಗಳು.

**೩.೪.೧. ರಕ್ತ ಸಂಬಂಧ ವಾಚಕಗಳು**

ರಕ್ತ ಸಂಬಂಧ ಅಂದರೆ ಕಳ್ಳು-ಬಳ್ಳಿ ಸಂಬಂಧ, ಹೆತ್ತ ತಂದೆ- ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ದೊಡ್ಡಪ್ಪ-ದೊಡ್ಡಮ್ಮ, ಚಿಕ್ಕಪ್ಪ-ಚಿಕ್ಕಮ್ಮ, ಅಜ್ಜ-ಅಜ್ಜಿ ಮುಂತಾದವರಿಂದ ಉಂಟಾದ ಸಂಬಂಧವನ್ನು ರಕ್ತಸಂಬಂಧ ಎಂದು ಕರೆಯುವರು. ಇವುಗಳಿಗೆ ಪ್ರಾಥಮಿಕ ಸಂಬಂಧವಾಚಕ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಸೋಲಿಗ ಸಮುದಾಯದ ಕೌಟುಂಬಿಕ ವಲಯದಲ್ಲಿ ರಕ್ತ ಸಂಬಂಧವಾಚಕದ ಬಳಕೆ ಈ ರೀತಿಯಾಗಿರುತ್ತದೆ.

| **ಬರಹದ ಕನ್ನಡ** | – | **ಸೋಲಿಗರ ಕನ್ನಡ** |
|---|---|---|
| ಅಪ್ಪ | – | ಅಪ್ಪಾ |
| ಅವ್ವ | – | ಅವ್ವೆ |
| ದೊಡ್ಡಪ್ಪ | – | ದೊಡ್ಡಪ್ಪ |
| ದೊಡ್ಡಮ್ಮ | – | ದೊಡ್ಡವ್ವೆ/ದೊಡ್ಡಮ್ಮ |
| ಚಿಕ್ಕಪ್ಪ | – | ಚಿಕ್ಕಪ್ಪ/ಸಿಕ್ಕಪ್ಪ |
| ಚಿಕ್ಕಮ್ಮ | – | ಚಿಕ್ಕಮ್ಮ/ಸಿಕ್ಕವ್ವೆ |

ಅಜ್ಜ – ಅಯ್ಯಾ/ಅಜ್ಜ

ಅಜ್ಜಿ – ಅಜ್ಜಿ/ಅಮ್ಮಾ

ಅಣ್ಣ – ಅಣ್ಣ

ತಮ್ಮ – ತಮ್ಮ

ಅಕ್ಕ – ಅಕ್ಕಾ/ತಾಯಿ

ತಂಗಿ – ತಂಗಿ/ತಂಗೆ/ತಾಯಿ

ಮಗ – ಕುನ್ನ

ಮಗಳು – ಕುನ್ನಿ

ಸೋಲಿಗ ಸಮುದಾಯದಲ್ಲಿ ಬಳಸುವ ರಕ್ತ ಸಂಬಂಧ ವಾಚಕಗಳನ್ನು ಎರಡು ರೀತಿಯಲ್ಲಿ ವಿಭಾಗ ಮಾಡಿಕೊಳ್ಳಬಹುದಾಗಿದೆ.

ತಾಯಿ ಮೂಲಕದ ರಕ್ತಸಂಬಂಧವಾಚಕಗಳು

ತಂದೆ ಮೂಲಕದ ರಕ್ತಸಂಬಂಧವಾಚಕಗಳು

**ತಾಯಿಯ ಮೂಲಕದ ರಕ್ತಸಂಬಂಧವಾಚಕಗಳು**

ತಾಯಿಯ ತಂದೆ– ಅಯ್ಯ/ಅಜ್ಜ

ತಾಯಿಯ ತಾಯಿ – ಅಮ್ಮ

ತಾಯಿಯ ಅಣ್ಣ – ಮಾವ

ತಾಯಿಯ ತಮ್ಮ – ಮಾವ

ತಾಯಿಯ ಅಕ್ಕ – ದೊಡ್ಡಮ್ಮ

ತಾಯಿಯ ತಂಗಿ – ಚಿಕ್ಕಮ್ಮ

**ತಂದೆಯ ಮೂಲಕದ ರಕ್ತಸಂಬಂಧವಾಚಕಗಳು**

ತಂದೆಯ ತಂದೆ – ಅಯ್ಯ

ತಂದೆಯ ತಾಯಿ – ಅಮ್ಮ

ತಂದೆಯ ಅಣ್ಣ – ದೊಡ್ಡಪ್ಪ

ತಂದೆಯ ತಮ್ಮ – ಸಿಕ್ಕಪ್ಪ

ತಂದೆಯ ಅಕ್ಕ – ದೊಡ್ಡವ್ವೆ

ತಂದೆಯ ತಂಗಿ – ಸಿಕ್ಕವ್ವೆ

ಸೋಲಿಗ ಸಮುದಾಯದಲ್ಲಿ ತಾಯಿ ಎಂಬ ಪದಕ್ಕೆ ಅವ್ವೆ ಎಂತಲೂ ತಂಗಿಗೆ ತಂಗೆ, ತಾಯಿ ಎಂತಲೂ ದೊಡ್ಡಮ್ಮಗೆ ದೊಡ್ಡವ್ವೆ ಎಂತಲೂ, ಚಿಕ್ಕಮ್ಮಗೆ ಸಿಕ್ಕಮ್ಮ ಎಂತಲೂ ಚಿಕ್ಕಪ್ಪಗೆ ಸಿಕ್ಕಪ್ಪ ಎಂತಲೂ ಬಳಕೆಯಾಗುತ್ತವೆ. ಇಲ್ಲಿ ಪದದಲ್ಲಿ 'ಚ'ಕಾರಕ್ಕೆ ಬದಲಾಗಿ 'ಸ'ಕಾರವಾಗಿ ಧ್ವನಿ ವ್ಯತ್ಯಾಸವಾಗುವುದನ್ನು ಗುರ್ತಿಸಬಹುದಾಗಿದೆ.

### ೩.೪.೨. ವೈವಾಹಿಕ ಸಂಬಂಧವಾಚಕಗಳು

ಅತ್ತೆ, ಮಾವ, ಬಾವ-ಮೈದುನ, ನಾದಿನಿ, ಅತ್ತಿಗೆ, ಅಳಿಯ, ಸೊಸೆ, ಇಂತಹ ಬಂದು ಸೂಚಕ ಪದಗಳು ವೈವಾಹಿಕ ಸಂಬಂಧವಾಚಕಗಳಾಗಿ ಕಂಡು ಬರುತ್ತದೆ. ಇವು ವಿವಾಹದಿಂದ ಸೃಷ್ಟಿಯಾದ ಸಂಬಂಧವಾಚಕಗಳು ಎಲ್ಲಾ ಭಾಷೆಗಳಲ್ಲೂ ಕಂಡುಬರುತ್ತದೆ. ಸುತ್ತ ಮುತ್ತಲಿನ ಪ್ರಾದೇಶಿಕ ಪರಿಸರದಲ್ಲಿನ ಎಲ್ಲಾ ಜಾತಿ ವರ್ಗ ಸಮುದಾಯಗಳಲ್ಲಿ ವೈವಾಹಿಕ ಸಂಬಂಧಗಳು ಕಂಡುಬರುತ್ತದೆ. ಈ ಸಂಬಂಧವಾಚಕಗಳು ಪರಿಸರಕ್ಕೆ ಅನುಗುಣವಾಗಿ ಬದಲಾವಣೆಗೊಳ್ಳುತ್ತಾ ಹೋಗುತ್ತದೆ. ಹಾಗೆಯೇ ಸೋಲಿಗ ಸಮುದಾಯದಲ್ಲಿ ಬರುವ ಸಂಬಂಧವಾಚಕಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ಗಂಡ – ಗಂಡ

ಹೆಂಡತಿ – ಎಂಡತಿ

ತಂದೆಯ ಸಹೋದರಿಯ ಗಂಡ – ಮಾವ

ತಾಯಿಯ ಸಹೋದರಿಯ ಗಂಡ– ಅತ್ತೆ

ಹೆಂಡತಿ / ಗಂಡನ ಹಿರಿಯ ಸಹೋದರ – ಬಾವ

ಹೆಂಡತಿ / ಗಂಡನ ಹಿರಿಯ ಸಹೋದರ – ಮೈದುನ / ಬಾಮೈದ

ಗಂಡನ / ಹೆಂಡತಿಯ ಹಿರಿಯ ಸಹೋದರಿ – ಅತ್ತಿಗೆ

ಹೆಂಡತಿ / ಹೆಂಡತಿಯ ಹಿರಿಯ ಸಹೋದರಿ – ನಾದಿನಿ

ಹೆಂಡತಿ / ಗಂಡನ ಸಹೋದರಿಯ / ಮಗ –ಅಳಿಯ / ಅನಿಯ

ಹೆಂಡತಿ / ಗಂಡನ ಸಹೋದರನ / ಮಗಳು – ಸೊಸೆ / ಚೊಚೆ

ಗಂಡನ / ಹೆಂಡತಿಯ ತಂದೆ – ಮಾವ

ಗಂಡನ / ಹೆಂಡತಿಯ ತಾಯಿ – ಅತ್ತೆ

ಗಂಡನ / ಅಣ್ಣನ ಹೆಂಡತಿ – ಒರಗಿತಿ / ಅಕ್ಕ

ಗಂಡನ / ತಮ್ಮನ ಹೆಂಡತಿ – ಒರಗಿತಿ / ತಂಗಿ

ಹೆಂಡತಿಯ ಅಕ್ಕ –ಅವ್ವ, ಅತ್ತೆ.

ಕುಟುಂಬದ ವೈವಾಹಿಕ ಸಂಬಂಧಗಳಲ್ಲಿ ಮಗನ ಹೆಂಡತಿ ಚೊಚೆ ಎಂದು ಮಗಳ ಗಂಡ ಅನಿಯ/ಮಗಳ ಗಂಡ ಅನಿಯ > ಅಳಿಯ ನಾಗುವನು. ಸಮುದಾಯದಲ್ಲಿ ಸೊಸೆ ಎಂಬುದನ್ನು ಚೊಚೆ ಎಂದು ಸಂಬೋಧನೆಯನ್ನು ಮಾಡುತ್ತಾರೆ ಇಲ್ಲಿ ' ಸ' ಕಾರಕ್ಕೆ ಬದಲಾಗಿ 'ಚ' ಕಾರ ಉಚ್ಚಾರಣೆಯಾಗುವುದನ್ನು ಕಾಣಬಹುದು. ಮಗಳ ಗಂಡನನ್ನು ಅನಿಯ ಎಂದು ಸಂಬೋಧನೆ ಮಾಡುತ್ತಾರೆ. ಅನಿಯ<ಅಳಿಯ ಪದಮಧ್ಯ ಪರಿಸರದಲ್ಲಿ 'ಳ' ಕಾರಕ್ಕೆ ಬದಲಾಗಿ 'ನ' ಕಾರ

ಉಚ್ಚಾರಣೆಯಲ್ಲಿ ಬರುತ್ತದೆ. ಸಂಬಂದವಾಚಕಗಳು ಪ್ರಾದೇಶಿಕ ಪರಿಸರದಲ್ಲೂ ಬಳಕೆಯಲ್ಲಿ ಕಂಡುಬರುತ್ತದೆ. ಆದರೆ ಸೊಸೆ ಮತ್ತು ಅಳಿಯ ಎಂದು ಸಂಬೋಧಿಸುತ್ತಾರೆ.

**೩.೪.೩. ಕುಟುಂಬದ ಅವಳಿ ಸಂಬಂಧವಾಚಕಗಳು**

ತಂದೆ–ತಾಯಿ, ಮಗ–ಮಗಳು, ಅತ್ತೆ–ಮಾವ, ಅಳಿಯ–ಸೊಸೆ, ಸಹೋದರ–ಸಹೋದರಿ, ಅಣ್ಣ–ತಮ್ಮ, ಅತ್ತಿಗೆ–ನಾದಿನಿ, ಭಾವ–ಮೈದುನ, ಗಂಡ–ಹೆಂಡತಿ, ಮೊಮ್ಮಗ–ಮೊಮ್ಮಗಳು ಇಂತಹ ಸಂಬಂಧಗಳು ಕುಟುಂಬದ ಅವಳಿ ಸಂಬಂಧವಾಚಕಗಳಾಗಿವೆ. ಸೋಲಿಗ ಸಮುದಾಯದಲ್ಲಿ ಈ ಸಂಬಂಧಗಳು ಬಳಕೆಯಿರುವುದನ್ನು ಕಾಣಬಹುದಾಗಿದೆ.

**ತಂದೆ–ತಾಯಿ**

ವ್ಯಕ್ತಿಯ ಹುಟ್ಟಿಗೆ ಕಾರಣರಾದಂತಹ ಹೆತ್ತವರನ್ನು ತಂದೆ–ತಾಯಿ ರೂಪಗಳಾಗಿ ಬಳಸುತ್ತಾರೆ. ಸಂಬೋಧಿಸುವ ಸಂದರ್ಭದಲ್ಲಿ ತಂದೆ–ತಾಯಿ ರೂಪಗಳು ಬಳಕೆಗೆ ಬರುವುದಿಲ್ಲ. ಸೋಲಿಗ ಸಮುದಾಯದಲ್ಲಿ ತಂದೆ–ತಾಯಿಯರನ್ನು ಸಂಬೋಧಿಸುವಾಗ ಅಪ್ಪ, ಅವ್ವ, ಎಂದು ಸಂಬೋಧಿಸುತ್ತಾರೆ. ಇನ್ನೊಬ್ಬರಿಗೆ ಪರಿಚಯವನ್ನು ಮಾಡಿಕೊಡುವಂತಹ ಸಂದರ್ಭದಲ್ಲಿ ನಮ್ಮ ತಂದೆಯವರು ತಾಯಿಯವರು ಎಂದು ಹೇಳುತ್ತಾರೆ.

ಉದಾ : ಅವ್ವೆ ಉದಕ ಮಾಡ್ರುಡು

: ಅಪ್ಪನಿಗೆ ನೀರ ಕುಡಿಸಳಾಸ ತಂದು ಕೊಟ್ಟದ್ದೆಯಾ

ಹಾಗೆಯೇ ತಂದೆ–ತಾಯಿಗಳು ತಮ್ಮ ಮಕ್ಕಳನ್ನು ಹೆಸರಿಡಿದು ಮಾತನಾಡಿಸುತ್ತಾರೆ.

**ಮಗ–ಮಗಳು**

ಸೋಲಿಗ ಸಮುದಾಯದಲ್ಲಿ ಬಹುತೇಕ ಮಕ್ಕಳನ್ನು ಹೆಸರಿಡಿದು ಕರೆಯುವುದನ್ನು ಕಾಣಬಹುದು. ಹಾಗೆಯೇ ಕೆಲವೊಂದು ಬಾರಿ ಮಗ–ಮಗಳು ಇವರನ್ನು ಸಂಬೋಧಿಸುವಾಗ ಕೂಚು, ಐಕ, ಅಮ್ಮಿ, ಕುನ್ನ, ಕುನ್ನಿ, ಕೂಸು, ಪುಟಿ, ಪಾಪ ಎನ್ನುವ ಸಂಬೋಧನೆಯು ಸೋಲಿಗರಲ್ಲಿ ಕೂಚು ಎಂದು ಸಂಬೋಧನೆಯಾಗುತ್ತದೆ. ಪ್ರಸ್ತತ ಸಂದರ್ಭದಲ್ಲಿ ಸೋಲಿಗರ ಮಾತಿನಲ್ಲಿ ಬಳಕೆಯಿರುವುವನ್ನು ಕಾಣಬಹುದಾಗಿದೆ. ಕೆಲವು ವಿದ್ಯಾವಂತರ ಯುವಕ–ಯುವತಿಯನ್ನು ಸಂಬೋಧಿಸುವಾಗ ಮಕ್ಕಳನ್ನು ಹೆಸರಿನಿಂದ ಕರೆಯುವುದನ್ನು ಕಾಣಬಹುದಾಗಿದೆ.

ಕುನ್ನ > ಮಗ

ಕನ್ನಿ > ಮಗಳು

**ಅತ್ತೆ–ಮಾವ–ಅಳಿಯ–ಸೊಸೆ**

ಸೋಲಿಗ ಸಮುದಾಯದಲ್ಲಿ ಅತ್ತೆ ಮಾವ, ಅಳಿಯ, ಸೊಸೆ, ಎನ್ನುವ ಪದಗಳು ಕಂಡುಬರುತ್ತದೆ. ಮಾವಂದಿರಿಗೆ ತನ್ನ ಹೆಸರಿನ ಜೊತೆಗೆ 'ಮಾವ' ಎಂಬ ಸಂಬೋಧನಾ

ರೂಪವನ್ನು ಹಚ್ಚಿ ಕರೆಯುವುದು ಸೋಲಿಗ ಸಮುದಾಯದಲ್ಲಿ ಕಂಡುಬರುತ್ತದೆ. 'ಅತ್ತೆ' ಎಂಬುದು ಗಂಡನ ತಾಯಿ ಮತ್ತು ಹೆಂಡತಿಯ ತಾಯಿಗೆ ಅನ್ವಯಿಸುತ್ತದೆ. ಮಗನ ಹೆಂಡತಿ ತಾಯಿಯ ಸಹೋದರನ ಮಗಳು ಅಥವಾ ತಂದೆಯ ಸಹೋದರಿಯ ಮಗಳನ್ನು ಚೊಚೆ>ಸೊಸೆ ಎಂದು ಸಂಬೋಧನೆ ಮಾಡುತ್ತಾರೆ.

ಗಂಡನ ತಾಯಿ – ಅತ್ತೆ

ಹೆಂಡತಿಯ ತಾಯಿ – ಅತ್ತೆ

ತಂದೆಯ ತಂಗಿ – ಅತ್ತೆ

ಮಗನ ಹೆಂಡತಿ – ಚೊಚೆ/ಸೊಸೆ

ಮಗಳ ಗಂಡ – ಅನಿಯ/ಅಳಿಯ

ತಾಯಿಯ ಸಹೋದರನ ಮಗಳು – ಚೊಚೆ

ತಂದೆಯ ಸಹೋದರಿಯ ಮಗಳನ್ನು – ಚೊಚೆ

ತಾಯಿಯ ಸಹೋದರನ ಮಗ – ಅನಿಯ–ಅಳಿಯ

ತಂದೆಯ ಸಹೋದರಿಯ ಮಗ – ಅಳಿಯ

**ಸಹೋದರ – ಸಹೋದರಿಯರು**

ಸಾಮಾನ್ಯವಾಗಿ ಒಡಹುಟ್ಟಿದವರಲ್ಲಿ ಹಿರಿಯರು ಅಂದರೆ ಅಕ್ಕ–ಇಲ್ಲವೆ "ಅಣ್ಣ" ನಾಗುತ್ತಾನೆ. ಕಿರಿಯವರು ತಮ್ಮ ಇಲ್ಲವೆ ತಂಗಿಯಾಗುತ್ತಾರೆ. ತಮ್ಮ ಇಲ್ಲವೆ ತಂಗಿ ಅಣ್ಣನನ್ನು ಸಂಬೋಧಿಸುವಾಗ ಪ್ರೀತಿಯಿಂದ ಗೌರವ ಭಾವನೆಯಿಂದಲೇ ಸಂಬೋಧಿಸುವುದನ್ನು ಕಾಣುತ್ತೇವೆ.

ಉದಾ :

ಅಣ್ಣ – ಅಣ್ಣಾ

ಅಕ್ಕ – ಅಕ್ಕಾ /ತಾಯಿ

ರಂಗ+ಅಣ್ಣ=ರಂಗಣ್ಣ

ಜಡೆ+ಅಣ್ಣ=ಜಡೆಯಣ್ಣ

ಕೇತ+ಅಣ್ಣ=ಕೇತಣ್ಣ

ಮಾವ+ಅಣ್ಣ=ಮಾದಣ್ಣ

ಈ ರೀತಿ ಕಿರಿಯರು ಅಣ್ಣನನ್ನು ಸಂಬೋಧಿಸುವಾಗ ಅವರವರ ಹೆಸರಿನ ಕೊನೆಯಲ್ಲಿ 'ಅಣ್ಣ' ಎಂಬ ಪದವನ್ನು ಸೇರಿಸಿ ಬಳಸುತ್ತಾರೆ. ತಮ್ಮ ಎಂಬ ಸಂಬಂಧ ಸೂಚಕ ಪದವನ್ನು ಬೇರೆಯವರೊಡನೆ ಪರಿಚಯಿಸುವಾಗ 'ತಮ್ಮ' ಎಂದೇ ಸಂಬೋಧಿಸುತ್ತಾರೆ. ಇದು ಎಲ್ಲಾ ಕಡೆ ಸಾಮಾನ್ಯವಾದಂತ ಬಳಕೆಯಲ್ಲೂ ಕಂಡುಬರುತ್ತದೆ.

ತಂಗಿಯನ್ನು ಹಿರಿಯರು ಸಂಬೋಧಿಸುವಾಗ 'ಅಮ್ಮಿ' ಎಂದು ಸಂಬೋಧಿಸುವುದು ಕಾಣುತ್ತೇವೆ.

ಈ ಸಹೋದರ ಸಹೋದರಿಯರ ನಡುವೆ ಗೌರವಯುತವಾಗಿ ಸಂಬೋಧಿಸುವುದನ್ನು ಕಾಣಬಹುದು. ಈ ಸೋಲಿಗ ಸಮುದಾಯದಲ್ಲಿ ಹಿರಿಯರ ನಿರ್ದಿಷ್ಟ ಹೆಸರಿನ ಜೊತೆಗೆ ಅಣ್ಣಾ, ಅಕ್ಕಾ ಎಂಬ ವಾರ್ಗಿಕ ಪದಗಳು ಗೌರವಯುತವಾಗಿ ಬರುವುದನ್ನು ಕಾಣುತ್ತೇವೆ. ಸಹೋದರಿ ಎಂದಾಗ ಒಡಹುಟ್ಟಿದ ಅಕ್ಕ-ತಂಗಿಯನ್ನು ಸಹೋದರಿ ಎಂದು ಕರೆಯಲಾಗಿದೆ. ಮನೆಯ ಹಿರಿಯ ಮಗಳು ಅಕ್ಕಳಾಗಿ ಕಿರಿಯ ಮಗಳು ತಂಗಿಯಾಗಿರುತ್ತಾಳೆ. ಇಲ್ಲಿ ಹಿರಿಯ ಸಹೋದರಿ ಇದ್ದಾಗ ಅಕ್ಕ ಸೇರಿಸಿ ಕರೆಯುವುದನ್ನು ಗಮನಿಸಬಹುದಾಗಿದೆ.

ಉದಾ :

**ಕೇತ+ಅಕ್ಕ=ಕೇತಕ್ಕ**

ರಂಗ+ಅಕ್ಕ=ರಂಗಕ್ಕ

ಮಾದ+ಅಕ್ಕ=ಮಾದಕ್ಕ

ಜಡೆ+ಅಕ್ಕ=ಜಡೆಕ್ಕ

ಇವರಲ್ಲಿ ಒಡಹುಟ್ಟಿದವರಲ್ಲಿ ಚಿಕ್ಕವಳು ಇರುವವರನ್ನು 'ತಂಗೆ' ಎಂದು ಕರೆಯುವುದು ರೂಢಿಯಲ್ಲಿರುವುದನ್ನು ಕಾಣಬಹುದು.

**ಮೊಮ್ಮಗ-ಮೊಮ್ಮಗಳು**

ಸೋಲಿಗರಲ್ಲಿ ಮೊಮ್ಮಗ - ಮೊಮ್ಮಗಳು ಎಂಬ ಎರಡು ಸಂಬಂಧವಾಚಕ ಪದಗಳಿಗೆ ಕ್ರಮವಾಗಿ ಮರಿಕುನ್ನ-ಮರಿಕುನ್ನಿ ಎಂದು ಬಳಕೆಯಾಗುವುದನ್ನು ಕಂಡುಬರುತ್ತದೆ.

ಮರಿಕುನ್ನ - ಮೊಮ್ಮಗ

ಮರಿಕುನ್ನಿ - ಮೊಮ್ಮಗಳು

ಮರಿಕುನ್ನಗ - ಮೊಮ್ಮಕ್ಕಳು

ಇಲ್ಲಿ ಮೊಮ್ಮಕ್ಕಳು ಎಂಬುದು ಬಹುವಚನದ ರೂಪ ಒಂದಕ್ಕಿಂತ ಹೆಚ್ಚು ಮಕ್ಕಳಿರುವುದನ್ನು ಮೊಮ್ಮಕ್ಕ ಎಂದು ಗುರುತಿಸುತ್ತೇವೆ ಇಲ್ಲಿ ಮೊಮ್ಮಕ್ಕಳನ್ನು ಸೋಲಿಗರ ಸಮುದಾಯದಲ್ಲಿ ಮರಿಕುನ್ನಗ ಎಂದು ಗುರುತಿಸಲಾಗಿದೆ.

ಸಾಮಾನ್ಯವಾಗಿ ಈ ಸಮುದಾಯದಲ್ಲಿ ಮಗನ ಮಕ್ಕಳು ಮಗಳ ಮಕ್ಕಳು ಮೊಮ್ಮಕ್ಕಳಾಗಿರುವುದನ್ನು ಕಾಣಬಹುದಾಗಿದೆ.

**೩.೫. ಸಂಬೋಧನಾ ರೂಪಗಳು**

ಭಾಷಾ ಸಮುದಾಯದಲ್ಲಿ ಸಾಂಸ್ಕೃತಿಕ ವಿನ್ಯಾಸಗಳನ್ನು ತಿಳಿದುಕೊಳ್ಳುವಲ್ಲಿ ಸಂಬೋಧನಾರೂಪಗಳು ಬಹಳ ಮಹತ್ವದ ಪಾತ್ರವಹಿಸುತ್ತವೆ. ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು

ಕೂಗುವ ಕರೆಯುವ ಹಾಗೂ ಆತನನ್ನು ಉದ್ದೇಶಿಸಿ ಮಾತಾನಾಡುವಾಗ ಬಳಸುವಂತಹ ಭಾಷಿಕ ರೂಪಗಳು ಸಂಬೋಧನಾ ರೂಪಗಳಾಗಿವೆ. ಯಾರು-ಯಾರನ್ನು ಕುರಿತು ಸಂಬೋಧನೆ ಮಾಡುತ್ತಾರೆ. ಸಂಬೋಧನಾ ರೂಪಗಳು ಯಾವ ರೀತಿಯಲ್ಲಿ ವಿಭಿನ್ನವಾಗಿ ಬಳಕೆಯಾಗುತ್ತವೆ. ಶಿಷ್ಟ ಕನ್ನಡಕ್ಕಿಂತ ಭಿನ್ನವಾಗಿದೆಯೇ ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಒಬ್ಬ ವ್ಯಕ್ತಿಯು, ಇನ್ನೊಬ್ಬ ವ್ಯಕ್ತಿಯನ್ನು ಸಂಬೋಧನೆ ಮಾಡುವಾಗ ಯಾವ ಭಾಷೆ ಅಲ್ಲಿ ಬಳಕೆಯಾಗುತ್ತದೆ ಎಂಬುದನ್ನು ನೋಡಬೇಕಾಗಿದೆ. ಭಾಷೆಯಲ್ಲಿನ ಸಂಬೋಧನಾ ರೂಪಗಳು ಸಾಮಾಜಿಕ ರಚನೆಯ ವಿನ್ಯಾಸವನ್ನು ಆಧರಿಸಿರುತ್ತದೆ. ಹಾಗೆಯೇ ಒಂದು ಭಾಷಾ ಸಮುದಾಯದಲ್ಲಿರುವ ಭಾಷಿಕರ ಜೀವನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಸಂಬೋದನಾ ರೂಪಗಳು ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ. ಆಯಾ ಭಾಷಿಕ ಪ್ರದೇಶ, ವರ್ಗ, ಲಿಂಗ, ಜಾತಿ, ವಯಸ್ಸುಗಳಿಗೆ ಅನುಗುಣವಾಗಿ ಬಳಕೆಯಲ್ಲಿ ಭಿನ್ನತೆಯನ್ನು ಹೊಂದಿರುತ್ತದೆ.

**೩.೫.೧. ಸಂಬೋಧಿಸುವ ಬಗೆ**

ಕೌಟುಂಬಿಕ ವಲಯದಲ್ಲಿ – ತಂದೆ/ತಾಯಿ

ತಂದೆಯನ್ನು ಸಂಬೋಧಿಸುವ ಬಗೆ – ಅಪ್ಪ

ತಾಯಿಯನ್ನು ಸಂಬೋಧಿಸುವ ಬಗೆ – ಅವ್ವ, ಅವ್ವೆ, ಅವ್ವೈ, ಅಮ್ಮ

ತಂದೆಯ ಹಿರಿಯ ಸಹೋದರ – ದೊಡ್ಡಪ್ಪ

ತಂದೆಯ ಕಿರಿಯ ಸಹೋದರ – ಚಿಕ್ಕಪ್ಪ, ಚಿಕ್ಕಯ್ಯ, ಸಿಕ್ಕಪ್ಪ

ತಂದೆಯ ಹಿರಿಯ ಸಹೋದರನ ಹೆಂಡತಿ – ದೊಡ್ಡಮ್ಮ, ದೊಡ್ಡವ್ವೆ

ತಂದೆಯ ಕಿರಿಯ ಸಹೋದರನ ಹೆಂಡತಿ – ಚಿಕ್ಕಮ್ಮ, ಸಿಕ್ಕವ್ವೆ, ಸಣ್ಣವ್ವ

ತಂದೆಯ ನಡುವಿನ ಸಹೋದರ ಚಿಕ್ಕಪ್ಪ

ತಂದೆಯ ನಡುವಿನ ಸಹೋದರನ ಹೆಂಡತಿ: ಚಿಕ್ಕವ್ವೆ

ತಂದೆಯ ಸಹೋದರಿಯ ಹಿರಿಯ ಮಗ – ಬಾವ, ಹೆಸರಿನಿಂದ

ತಂದೆಯ ಸಹೋದರಿಯ ಕಿರಿಯ ಮಗ – ಬಾವ, ಹೆಸರಿನಿಂದ

ತಂದೆಯ ಸಹೋದರಿಯ ಹಿರಿಯ ಮಗಳು – ಅತ್ತಿಗೆ, ಅತ್ಗೆ

ತಂದೆಯ ಸಹೋದರಿಯ ಕಿರಿಯ ಮಗಳು – ಅತ್ತಿಗೆ, ಅತ್ಗೆ

ತಂದೆಯ ಹಿರಿಯ ಸಹೋದರಿ – ಅತ್ತೆ, ಅತ್ತೆಮ್ಮ, ದೊಡ್ಡತ್ತೆ

ತಂದೆಯ ಕಿರಿಯ ಸಹೋದರಿ – ಅತ್ತೆ, ಸಣ್ಣತ್ತೆ

ತಂದೆಯ ಹಿರಿಯ ಸಹೋದರಿಯ ಗಂಡ – ಮಾವ, ದೊಡ್ಡಮಾವ

ತಂದೆಯ ಕಿರಿಯ ಸಹೋದರಿಯ ಗಂಡ – ಮಾವ, ಸಣ್ಣಮಾವ

ತಂದೆಯ ಹಿರಿಯ ಸಹೋದರನ ಹಿರಿಯ ಮಗ – ಅಣ್ಣ,

ತಂದೆಯ ಕಿರಿಯ ಸಹೋದರನ ಕಿರಿಯ ಮಗ – ಅಣ್ಣ,

ತಾಯಿಯ ಹಿರಿಯ ಸಹೋದರ – ಮಾಮ, ಮಾವ, ದೊಡ್ಡಮಾವ

ತಾಯಿಯ ಕಿರಿಯ ಸಹೋದರ – ಮಾಮ, ಮಾವ, ಚಿಕ್ಕಮಾವ

ತಾಯಿಯ ಹಿರಿಯ ಸಹೋದರನ ಹೆಂಡತಿ – ಅತ್ತೆ, ಅತ್ತೆವ್ವ

ತಾಯಿಯ ಕಿರಿಯ ಸಹೋದರನ ಹೆಂಡತಿ – ಅಕ್ಕ, ಅತ್ತೆ

ತಾಯಿಯ ಸಹೋದರನ ಹಿರಿಯ ಮಗ – ಬಾವ

ತಾಯಿಯ ಸಹೋದರನ ಕಿರಿಯ ಮಗ – ಬಾವ

ತಾಯಿಯ ಸಹೋದರನ ಹಿರಿಯ ಮಗಳು – ಅತ್ತಿಗೆ

ತಾಯಿಯ ಸಹೋದರನ ಕಿರಿಯ ಮಗಳು – ಅತ್ತಿಗೆ

ತಾಯಿಯ ಹಿರಿಯ ಸಹೋದರಿ – ದೊಡ್ಡವ್ವೆ ದೊಡ್ಡಮ್ಮ,

ತಾಯಿಯ ಕಿರಿಯ ಸಹೋದರಿ – ಸಣ್ಣಮ್ಮ, ಚಿಕ್ಕವ್ವೆ, ಚಿಕ್ಕಮ್ಮ

ತಾಯಿಯ ಹಿರಿಯ ಸಹೋದರಿಯ ಗಂಡ – ದೊಡ್ಡಪ್ಪ

ತಾಯಿಯ ಕಿರಿಯ ಸಹೋದರಿಯ ಗಂಡ – ಚಿಕ್ಕಪ್ಪ

ತಾಯಿಯ ಹಿರಿಯ ಸಹೋದರಿಯ ಮಗ – ಅಣ್ಣ

ತಾಯಿಯ ಕಿರಿಯ ಸಹೋದರಿಯ ಮಗ – ಅಣ್ಣ

ತಾಯಿಯ ಹಿರಿಯ ಸಹೋದರಿಯ ಮಗಳು – ಅಕ್ಕ

ತಾಯಿಯ ಕಿರಿಯ ಸಹೋದರಿಯ ಮಗಳು – ಅಕ್ಕ

ಸೋಲಿಗ ಸಮುದಾಯದಲ್ಲಿ ಸಂಬೋಧನಾ ರೂಪಗಳಲ್ಲಿ ತಂದೆಯನ್ನು ಅಪ್ಪ, ಅಯ್ಯ, ಎಂದು ತಾಯಿಯನ್ನು ಅವ್ವ, ಅವ್ವೆ, ಎಂದು ಸಂಬೋಧಿಸುವರು. ತಂದೆಯ ತಮ್ಮ ಹಾಗೂ ತಾಯಿಯ ಸಹೋದರಿಯ ಗಂಡನನ್ನು ಚಿಕ್ಕಪ್ಪ, ಸಿಕ್ಕಪ್ಪ, ಸಣ್ಣಯ್ಯ, ಎಂದು ಚಿಕ್ಕಮ್ಮನ ತಂದೆಯ ಸಹೋದರ ಹೆಂಡತಿ ಹಾಗೂ ತಾಯಿಯ ಸಹೋದರಿಯ ಹೆಂಡತಿಯನ್ನು ಚಿಕ್ಕಮ್ಮ, ಸಿಕ್ಕಮ್ಮ, ಚಿಕ್ಕಿ ಎಂತಲೂ ಸಂಬೋಧಿಸಲ್ಪಡುವರು. ತಾಯಿಯ ಸಹೋದರನ ಮಕ್ಕಳು ಸೋದರ ಮಾವನ ಮಕ್ಕಳಾಗುತ್ತಾರೆ. ತಂದೆಯ ಸಹೋದರಿಯ ಮಕ್ಕಳು ಸೋದರ ಅತ್ತೆಯ ಮಕ್ಕಳಾಗುತ್ತಾರೆ. ಸೋದರಮಾವ ಮತ್ತು ಸೋದರ ಅತ್ತೆಯ ಮಕ್ಕಳು ಬಾವ ಮೈದುನ, ಅತ್ತಿಗೆ, ನಾದಿನಿಯರಾಗುತ್ತಾರೆ. ಇವರು ಬಾವ ಅತ್ತಿಗೆ ಅಥವಾ ಕಿರಿಯವರಾಗಿದ್ದಲ್ಲಿ ಹೆಸರಿನಿಂದ ಸಂಬೋಧಿಸುವುದು ಕಂಡುಬರುತ್ತದೆ. ಉತ್ತರ ಕರ್ನಾಟಕ ಭಾಗದಲ್ಲಿ ಕಾಕಾ, ಕಾಕಿ ಎಂತಲೂ ಸಂಬೋಧಿಸುವುದನ್ನು ನೋಡಬಹುದು. ಪ್ರಸ್ತುತ ಹೊಸ ತಲೆಮಾರಿನ ಅಕ್ಷರಸ್ಥ ಯುವಕ ಮತ್ತು ಯುವತಿಯರು ಆಧುನಿಕ ಪ್ರಭಾವಕ್ಕೆ ಒಳಗಾಗಿದ್ದು, ಶಾಲಾ, ಕಾಲೇಜು, ಕಛೇರಿ, ಮಾರುಕಟ್ಟೆ ದೂರದರ್ಶನ, ಧಾರಾವಾಹಿಗಳ ಪ್ರಭಾವದಿಂದ ಪ್ರಸ್ತುತ ಸಂದರ್ಭದಲ್ಲಿ ಆಂಟಿ, ಅಂಕಲ್ ಎಂಬ ಆಧುನಿಕ ರೂಪಗಳು ಬಳಕೆಯಾಗುತ್ತಿರುವುದನ್ನು ನೋಡಬಹುದಾಗಿದೆ.

**೩.೫.೨. ಹಿರಿಯರು ಕಿರಿಯರಿಗೆ ಬಳಸುವ ಸಂಬೋಧನಾ ರೂಪಗಳು**

ಮಗನ ಮಗ - ಬಾಯ್ಯಾ, ಬಾರಯ್ಯಾ, ಕೂಚು ಹೆಸರಿನಿಂದ

ಮಗಳ ಮಗ - ಬಾಯ್ಯಾ, ಬಾರಯ್ಯಾ, ಕೂಚು ಹೆಸರಿನಿಂದ

ಮಗನ ಮಗಳು - ಕುನ್ನ, ಕೂಚು ಹೆಸರಿನಿಂದ,

ಮಗಳ ಮಗಳು - ಕುನ್ನ, ಕೂಚು, ಬಾಮ್ಮಿ ಹೆಸರಿನಿಂದ

ಮೊಮ್ಮಗನ ಮಗ - ಕೂಚು, ಪುಟ್ಟ,

ಮೊಮ್ಮಗಳ ಮಗಳು - ಕೂಚು, ಪುಟ್ಟು, ಕುನ್ನಿ, ಬಾಮ್ಮಿ ಹೆಸರಿನಿಂದ

ಹಿರಿಯರು ಕಿರಿಯರಾದ ತಮ್ಮ ಮಕ್ಕಳು ಮೊಮ್ಮಕ್ಕಳು, ಮಕ್ಕಳು ಮರಿ ಮಕ್ಕಳುಗಳ "ಇವಳು, ಇವನೆ, ಬಾಮ್ಮಿ 'ಓ' ನೋಡಲೇ ಕುನ್ನ, ಕುನ್ನಿ, ಕೂಚು, ಅವಾ, ಐಕ, ಎವನ ಈ ರೀತಿ ಸಂಬೋಧನೆ ಮಾಡುತ್ತಾರೆ.

**೩.೫.೩. ಕಿರಿಯರು ಹಿರಿಯರಿಗೆ ಬಳಸುವ ಸಂಬೋಧನಾ ರೂಪಗಳು**

ತಂದೆಯ ತಂದೆ - ಅಪ್ಪ, ತಾತಾ, ಅಯ್ಯಾ,

ತಂದೆಯ ತಾಯಿ - ಅವ್ವೆ, ಅಕ್ಕ, ಅಮ್ಮ,

ತಾಯಿಯ ತಂದೆ - ತಾತಾ, ಅಪ್ಪ,

ತಾಯಿಯ ತಾಯಿ - ಅವ್ವೆ, ಅವ್ವ, ಅಜ್ಜಿ,

ತಂದೆಯ ತಂದೆಯ ತಂದೆ- ಅಜ್ಜ

ತಂದೆಯ ತಾಯಿಯ ತಾಯಿ- ಅವ್ವ

ಹಿರಿಯ ಮಗ : ಅಣ್ಣಾ

ಕಿರಿಯ ಮಗ - ಅಣ್ಣಾ

ಹಿರಿಯ ಮಗಳು - ಅಕ್ಕಯ್ಯಾ

ಕಿರಿಯ ಮಗಳು -ಅಕ್ಕಯ್ಯಾ

ಮಗನ ಮಗ - ಕುನ್ನ/ ಕೂಚು

ಮಗನ ಮಗಳು- ಕುನ್ನಿ/ ಕೂಚು

ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಇಲ್ಲಿ ತಂದೆಯ ತಂದೆ ಮತ್ತು ತಾಯಿಯ ತಂದೆಗೆ ಒಂದೇ ಸಂಬೋಧನಾ ರೂಪವಿದೆ. ಅಪ್ಪ, ತಾತಾ, ಅಯ್ಯಾ, ಆದರೆ ತಾಯಿಯ ತಾಯಿ ಮತ್ತು ತಂದೆಯ ತಾಯಿಗೆ ಅವ್ವೆ, ಅಜ್ಜಿ, ಅಮ್ಮ, ಎಂತಲೂ ಕರೆಯುವುದನ್ನು ಗಮನಿಸಲಾಗಿದೆ. ಹಿರಿಯರು ಕಿರಿಯವರನ್ನು ತಮ್ಮ ಮಕ್ಕಳು ಮೊಮ್ಮಕ್ಕಳು ಮತ್ತು ಮರಿಮಕ್ಕಳು ಒಂದೇ ರೀತಿಯಲ್ಲಿ ಸಂಬೋಧಿಸಲಾಗುವುದನ್ನು ಕಾಣಬಹುದು.

೩.೫.೪ ವೈವಾಹಿಕ ಸಂಬಂಧಗಳಲ್ಲಿ ಸಂಬೋಧನಾ ರೂಪಗಳು

ಮಗನ ಹೆಂಡತಿ – ಹೆಸರಿನಿಂದ

ಮಗಳ ಗಂಡ – ಹೆಸರಿನಿಂದ

ಹೆಂಡತಿಯ ತಂದೆ – ಮಾವ

ಹೆಂಡತಿಯ ತಾಯಿ – ಅತ್ತೆ

ಗಂಡನ ತಂದೆ – ಮಾವ

ಗಂಡನ ತಾಯಿ – ಅತ್ತೆ

ಹೆಂಡತಿಯ ತಮ್ಮ – ಹೆಸರಿನಿಂದ

ಹೆಂಡತಿಯ ತಂಗಿ – ಹೆಸರಿನಿಂದ

ಹೆಂಡತಿಯ ಅಕ್ಕ – ಅತ್ತಿಗೆ

ಹೆಂಡತಿಯ ಅಣ್ಣ – ಬಾವ

ಗಂಡನ ಅಣ್ಣ – ಬಾವ

ಗಂಡನ ತಮ್ಮ – ಹೆಸರಿನಿಂದ

ಗಂಡನ ತಂಗಿ – ಅತ್ತಿಗೆ

ಗಂಡನ ಅಕ್ಕ – ಅತ್ತಿಗೆ

ಹೀಗೆ ಮೇಲಿನ ಸಂಬೋಧನಾ ರೂಪಗಳು ಸೋಲಿಗರಲ್ಲಿ ಬಳಕೆಯಲ್ಲಿವೆ. ಇಲ್ಲಿ ಮಗಳ ಗಂಡನನ್ನು ಪರಿಚಯಿಸುವಾಗ 'ಅಳಿಯ' ಎಂದು ಸಂಬೋಧಿಸುವಾಗ ಹೆಸರಿನಿಂದ ಕರೆಯುವ ವಾಡಿಕೆ ಇದೆ. ಹೆಂಡತಿಯ ತಂದೆ ಗಂಡನ ತಂದೆಯನ್ನು ಮಾವ ಎಂದು ತಾಯಿಯನ್ನು ಅತ್ತೆ ಎಂದು ಸಂಬೋಧಿಸುವರು. ಹೆಂಡತಿಯ ತಮ್ಮನನ್ನು ಮತ್ತು ತಂಗಿಯನ್ನು 'ಬಾವ' ಅಥವಾ ಹೆಸರಿನಿಂದ ಹಾಗೂ ತಂಗಿಯನ್ನು ಹೆಸರಿನಿಂದ ಸಂಬೋಧಿಸುವರು. ಗಂಡನ ಅಣ್ಣ ನನ್ನ ಬಾವ ಎಂದು ಕಿರಿಯ ವಯಸ್ಸಿನವರನ್ನು ಹೆಸರಿನಿಂದ ಸಂಬೋಧಿಸುವರು. ಗಂಡನ ಅಕ್ಕ ಮತ್ತು ತಂಗಿಯನ್ನು ಅತ್ತಿಗೆ, ಅತ್ಗೆ ಎಂತಲೂ ಸಂಬೋಧಿಸುತ್ತಾರೆ.

೩.೫.೫. ಕೌಟುಂಬಿಕ ಅವಳಿ ಸಂಬಂಧಗಳಲ್ಲಿ ಸಂಬೋಧನೆ

ತಂದೆ/ತಾಯಿ/ಮಗ/ಮಗಳು

ಸೋಲಿಗ ಸಮುದಾಯದಲ್ಲಿ ಸಾಮಾನ್ಯವಾಗಿ ಹೆತ್ತವರಿಗೆ ತಂದೆ–ತಾಯಿಯ ರೂಪಗಳು ಬಳಕೆಯಾಗುತ್ತಿದ್ದರೂ ಸಂಬೋಧಿಸುವಂತಹ ಸಂದರ್ಭದಲ್ಲಿ ತಂದೆ–ತಾಯಿ ರೂಪಗಳಿಗೆ ಬಳಕೆಯಾಗುವುದಿಲ್ಲ. ಸಮುದಾಯದಲ್ಲಿ ತಂದೆ–ತಾಯಿಯ ಸಂಬೋಧಿಸುವಾಗ ಅಪ್ಪ, ಅವ್ವ, ಯಪ್ಪ, ಯವ್ವ, ಅವ್ವೆ ಎಂದು ಸಂಬೋಧಿಸುತ್ತಾರೆ.

| ಸೋಲಿಗ ಕನ್ನಡ | ಬರಹದ ಕನ್ನಡ |
| --- | --- |
| ೧. ನನ್ನ ಅಪ್ಪ ಒಲ ಹೂಡವನೆ | ನಮ್ಮ ಅಪ್ಪ ಹೊಲ ಉಳುತ್ತಿದ್ದಾನೆ |
| ೨. ನನ್ನ ಅವ್ವೆ ಚಂತೆಕ ಹೊಗದಲೆ | ನಮ್ಮ ಅವ್ವ ಸಂತೆಗೆ ಹೋಗಿದ್ದಾಳೆ |
| ೩. ಯವೆ ಇಚುಕೂಲುಗೆ ಹೊಗ್ತೇನೆ | ಅವ್ವ ಶಾಲೆಗೆ ಹೋಗುತ್ತೇನೆ |

ಹೀಗೆ ಮಕ್ಕಳು ತಂದೆ ತಾಯಿಯನ್ನು ಸಂಬೋಧಿಸುವುದನ್ನು ಕಾಣಬಹುದು. ಈ ಮೇಲಿನ ಪದಗಳು ತಂದೆ-ತಾಯಿ ಪದಗಳಿಂತಲೂ ಹೆಚ್ಚು ಬದುಕಿಗೆ ಹತ್ತಿರವಾಗಿರುವುದನ್ನು ಕಾಣಬಹುದು. ಹಾಗೆಯೇ ಇಲ್ಲಿ 'ಅಮ್ಮ' ರೂಪವು ಇತ್ತೀಚಿನ ಹೊಸ ತಲೆಮಾರಿನ ವಿದ್ಯಾವಂತ ಯುವಕ ಯುವತಿಯರಲ್ಲಿ ಕಂಡುಬಂದಿದೆ. ಜೊತೆಗೆ ಆಂಗ್ಲ ಭಾಷೆಯ ಪ್ರಭಾವಕ್ಕೆ ಹಾಗೂ ದೂರದರ್ಶನದ ಒಳಗಾಗಿರುವ ಕೆಲವು ಇತ್ತೀಚಿನ ತಲೆಮಾರಿನ ವಿದ್ಯಾವಂತ ಮಕ್ಕಳು 'ಡ್ಯಾಡಿ ಮಮ್ಮಿ' ರೂಪ ಬಳಕೆ ಮಾಡುತ್ತಿದ್ದಾರೆ.

**ಮಗ-ಮಗಳು**

ಸೋಲಿಗ ಸಮುದಾಯದಲ್ಲಿ ಬಹುತೇಕ ತಮ್ಮ ತಮ್ಮ ಮಕ್ಕಳಿಗೆ ಹಿರಿಯರ ಹೆಸರನ್ನು ನಾಮಕರಣ ಮಾಡಿರುವುದನ್ನು ಕಾಣುತ್ತೇವೆ. ಸಮುದಾಯದಲ್ಲಿನ ಹೆಸರುಗಳು ಮತ್ತೆ ಮತ್ತೆ ಪುನರ್ ನಾಮಕರಣಗೊಂಡು ಹೊಸ ತಲೆಮಾರಿನ ವಿದ್ಯಾವಂತ ಕುಟುಂಬಗಳಲ್ಲಿ ಬದಲಾವಣೆಯಾಗಿವೆ. ಹಾಗೆಯೇ ಈ ಸಮುದಾಯದಲ್ಲಿ ಮಗ-ಮಗಳು ಇವೆರಡು ಸಂಬಂಧವಾಚಕಗಳಿಗೂ ಕುನ್ನ-ಮಗ ಮತ್ತು ಕುನ್ನಿ-ಮಗಳು ಎಂದು ಸಂಬೋಧಿಸುತ್ತಾರೆ. ಹೆಸರಿಡಿದು ಸಂಬೋಧನೆ ಮಾಡುತ್ತಾರೆ.

**ಉದಾ :** ಮಾದಿ ನೀರು ತೆಕ್ಕಂಡು ಬಾ

ಮಾದಿ ನೀರು ತೆಗೆದುಕೊಂಡು ಬಾ

ಜಡಯ ಇಚುಗೂಲಿಗೆ ಒಗು

ಜಡೆಯಾ ಶಾಲೆಗೆ ಹೋಗು

ಸಿದ್ದಿ ವಲಕ್ಕೆ ಆನೆಗ ಬಂದವಾ ಉಸಾರು

ಸಿದ್ದಿ ಹೊಲಕ್ಕೆ ಆನೆಗಳು ಬಂದವು ಹುಷಾರು

**ಗಂಡ ಹೆಂಡತಿ**

ಭಾಷಾ ಬಳಕೆಯಲ್ಲಿ ಗಂಡ ಹೆಂಡಿರು ಪರಸ್ಪರ ಮಾತಾನಾಡುವಾಗ ಹೆಂಡತಿ ಗಂಡನ ಹೆಸರನ್ನು ಕರೆಯುವುದಿಲ್ಲ. ಒಂದು ವೇಳೆ ತಮ್ಮ ಗಂಡನ ಹೆಸರಿಡಿದು ಕರೆದರೆ ಅವನಿಗೆ ಆಯುಷ್ಯ ಕಡಿಮೆಯಾಗುತ್ತದೆ ಎಂಬುದು ಸೋಲಿಗರ ನಂಬಿಕೆ ಇರುವುದನ್ನು ಕಾಣಬಹುದು. ಹೆಂಡತಿ ಗಂಡನನ್ನು ಸಂಬೋಧಿಸುವಾಗ ಬಹುವಚನದಲ್ಲಿ ಮಾತನಾಡಿಸುವುದನ್ನು ಕಾಣುತ್ತೇವೆ.

**ಉದಾ :** ಹೆಂಗಸರು, ನಮ್ಮವ್ರು, ನಮ್ಮಯಜನ್ರು ಎಂದು ಸಂಬೋಧಿಸುವುದನ್ನು ಕಾಣುತ್ತೇವೆ. ಹಾಗೆಯೇ ಹೆಂಡತಿಯನ್ನು ಗಂಡಸರು ಸಂಬೋಧಿಸುವಾಗ ಬಾಮ್ಮಿ, ಎನಲ್ಲಾ, ಇವಳು, ಓ, ನಮ್ಮೆಂಗಚ್ರು, ನನ್ನ ಎಂಡತಿ, ನಮ್ಮ ಹೆಂಗಚಲು, ಎನಲೇ, ಬಂದಾಳು, ಬಾರಲ್ಲಾ, ಎಂದು ಸಂಬೋಧನೆ ಮಾಡುತ್ತಾರೆ.

ಸೋ. ನನ್ನ ಎಂಗಚ್ರುಗೆ ಆರೋಗ್ಯ ಸರಿಯಿಲ್ಲ.

ಶಿ. ನನ್ನ ಹೆಂಡತಿಗೆ ಆರೋಗ್ಯ ಸರಿಯಿಲ್ಲ.

ಸೋ. ನಮ್ಮ ಮನೆವ್ರು ಮೈಚೂರುಗೆ ಹೋಗುವನೆ.

ಶಿ. ನಮ್ಮ ಗಂಡ ಮೈಸೂರಿಗೆ ಹೋಗುದ್ದಾರೆ.

ಸೋ. ಬಾಮ್ಮಿ ಉದಕ ಮಾಡಿಯಲ್ಲಾ.

ಶಿ. ಬಾರಮ್ಮ ಸಾಂಬರು ಮಾಡು.

**ಸಹೋದರ-ಸಹೋದರಿ**

ಒಡಹುಟ್ಟಿದವರಲ್ಲಿ ಹಿರಿಯರು ಅಂದರೆ ಅಕ್ಕ ಇಲ್ಲವೆ ಅಣ್ಣನಾಗುತ್ತಾರೆ. ಕಿರಿಯರು ತಂಗಿ ಇಲ್ಲವೆ ತಮ್ಮನಾಗುತ್ತಾರೆ. ತಮ್ಮ ಇಲ್ಲವೆ ತಂಗಿ ಅಣ್ಣವನ್ನು ಸಂಬೋಧಿಸುವಾಗ ಪ್ರೀತಿಯಿಂದ ಸಂಬೋಧಿಸುವುದನ್ನು ಕಾಣುತ್ತೇವೆ. ಕಿರಿಯವರು ಹಿರಿಯರನ್ನು ಸಂಬೋಧಿಸುವಾಗ ಹೆಸರಿನ ಕೊನೆಯಲ್ಲಿ ಗೌರವ ರೂಪಕವಾಗಿ ಅಣ್ಣ ಎಂಬ ಪದವನ್ನು ಸೇರಿಸಿ ಬಳಸುತ್ತಾರೆ.

ಉದಾ :

ಜಡೇಯಣ್ಣ = ಜಡೇಯ+ಅಣ್ಣ

ಕೇತಣ್ಣ=ಕೇತ+ಅಣ್ಣ

ಮಾದೇಶಣ್ಣ=ಮಾದೇಶ+ಅಣ್ಣ

ಇಲ್ಲಿ ತಮ್ಮ ಸಂಬಂಧಸೂಚಕ ಪದವನ್ನು ಬೇರೆಯವರಿಗೆ ಪರಿಚಯಿಸುವಾಗ 'ತಮ್ಮ' ಎಂದೇ ಸಂಬೋಧಿಸುತ್ತಾರೆ. ಇದರಲ್ಲಿ ಯಾವುದೇ ತರಹದ ಬದಲಾವಣೆಯಿಲ್ಲ, ಸಾಮಾನ್ಯವಾಗಿ ತಮ್ಮಂದಿರನ್ನು ಹೆಸರಿಡಿದು ಕರೆಯಲಾಗುತ್ತದೆ. ಹಾಗೆಯೇ ಸಹೋದರಿ ಎಂದಾಗ ಒಡಹುಟ್ಟಿದ ಅಕ್ಕ-ತಂಗಿಯನ್ನು ಸಹೋದರಿ ಎಂದು ಕರೆಯಲಾಗಿದೆ. ಮನೆಯ ಹಿರಿಯ ಮಗಳನ್ನು ತಮ್ಮಂದಿರಾಗಲಿ ತಂಗಿಯಾರಾಗಲಿ ಅಕ್ಕ ಎಂದು ಸಂಬೋಧಿಸುತ್ತಾರೆ. ಗೌರವ ಪೂರ್ವಕವಾಗಿ ಪರಿಚಯಿಸುವಾಗ ಅವರ ಹೆಸರಿನ ಮುಂದೆ ಅಕ್ಕ ಎಂತಲೂ ಸಂಬೋಧಿಸುವುದನ್ನು ಕಾಣುತ್ತೇವೆ.

ಉದಾ :

ಪುಟ್ಟ+ಅಕ್ಕ=ಪುಟ್ಟಕ್ಕ

ದೇಯಿತ+ಅಕ್ಕ=ದೇಯಿತಕ್ಕ

ಜಡೆಯ+ಅಕ್ಕ=ಜಡೆಯಕ್ಕ

ಇದರಲ್ಲಿ ತಂಗಿಯನ್ನು ಹಿರಿಯರು ಸಂಬೋಧಿಸುವಾಗ ಏಕವಚನದಲ್ಲಿ ಸಂಬೋಧಿಸುವುದನ್ನು ಕಾಣುತ್ತೇವೆ. ತಂಗಿ ಎನ್ನುವಂತಹ ಪದವನ್ನು ಉಚ್ಚಾರಣೆಯಲ್ಲಿ ತಂಗೆ ಎಂದು ಸಂಬೋಧಿಸುತ್ತಾರೆ.

**ಅತ್ತಿಗೆ-ನಾದಿನಿ**

ಸೋಲಿಗ ಸಮುದಾಯದಲ್ಲಿ ಅತ್ತಿಗೆ ಎಂದರೆ ಕುಟುಂಬದಲ್ಲಿ ಹಿರಿಯಣ್ಣ, ಅಣ್ಣನ ಹೆಂಡತಿ ಅತ್ತಿಗೆ ಎಂದರ್ಥವಾಗುತ್ತದೆ.

ಉದಾ : ಅಣ್ಣನ ಹೆಂಡತಿ - ಅತ್ತಿಗೆ

ಹೆಂಡತಿಯ ಅಕ್ಕ - ಅತ್ತಿಗೆ

ಹೆಂಡತಿಯ ತಂಗಿ - ನಾದಿನಿ, ನಾದನಿ

ಗಂಡನ ತಂಗಿ - ನಾದಿನಿ, ನಾದನಿ

ಪ್ರಯೋಗ:

ಅತ್ತಿಗೆ ಎಲ್ಲಿ ಹೊಗಿದಡ

ಅತ್ತಿಗೆ ಎಲ್ಲಿ ಗೋಗಿದೀರಾ

ಅತ್ತಿಗೆ ಅಣ್ಣಾ ಎಲ್ಲಿಗೋಗಿದಡ

ಅತ್ಗ ಅಣ್ಣ ಎಲ್ಲಿಗೋಗಿದ್ದಾರೆ?

ಈ ರೀತಿ ಬಳಕೆಯಾಗುವುದನ್ನು ಕಾಣಬಹುದು. ಇಲ್ಲಿ ತಾಯಿಯ ಸಹೋದರನ ಕಿರಿಯ ಮಗಳು ನಾದಿನಿ ಹಾಗೂ ಹೆಂಡತಿಯ ತಂಗಿ, ಗಂಡನ ತಂಗಿ, ನಾದಿನಿಯರಾಗುತ್ತಾರೆ. ನಾದಿನಿ ಎನ್ನುವುದನ್ನು ನಾದನಿ ಎಂಬುವುದಾಗಿ ಬಳಕೆ ಮಾಡುತ್ತಾರೆ. ಆದರೆ ಇವರು ಸಂಬೋಧಿಸುವಾಗ ನಾದಿನಿ ಎಂದು ಸಂಬೋಧಿಸುವುದಿಲ್ಲ. ಅವರ ಹೆಸರಿನಿಂದ ಸಂಬೋಧಿಸುವುದನ್ನು ಕಾಣಬಹುದಾಗಿದೆ.

**ಬಾವ-ಮೈದುನ**

ಸೋಲಿಗ ಪರಿಸರದಲ್ಲಿ ಅಕ್ಕನ ಗಂಡ, ಗಂಡನ ಅಣ್ಣ, ಅಕ್ಕನ ಗಂಡನ ಸಹೋದರರು, ತಂದೆಯ ಸಹೋದರಿಯ ಮಗ, ವಯಸ್ಸಿನಲ್ಲಿ ಹಿರಿಯವನು ತಾಯಿಯ ಸಹೋದರನ ಮಗ ವಯಸ್ಸಿನಲ್ಲಿ ಹಿರಿಯವನು 'ಬಾವ' ಎನಿಸಿಕೊಳ್ಳುವನು. ಆತನನ್ನು ಬಾವ್ವ ಎಂದು ಸಂಬೋಧಿಸುವರು.

ಉದಾ : ಇವ್ರು ನನ್ನ ಬಾವ

ಇವರು ನನ್ನ ಬಾವ

"ಬಿಳಿಕಲ್ ಬೆಟ್ಟದ ರಂಗಪ್ಪ ಅಂದ್ರೆ ಸೋಲುಗ್ರಗೆ ಬಾವ ಅಗ್ಬೇಕು

ನಮ್ಮರ್ ಜೊತೆ ಮೈದುನರು ಕಾಡ್ಗೆ ಓಂಟೂರು"

ಅಕ್ಕನ ಗಂಡ. ಗಂಡನ ಅಣ್ಣಂದಿರನ್ನು ಭಾವ-ಬಾವ ಎಂಬ ಪದದಿಂದ ಸಂಬೋಧಿಸಲಾಗುತ್ತದೆ. ಹಾಗೆಯೇ ಒಡಹುಟ್ಟಿದವಳು ತಂಗಿಯ ಗಂಡ, ಗಂಡನ ತಮ್ಮ ಮೈದುನನಾಗಿರುತ್ತಾನೆ. ಬೇರೆಯವರಿಗೆ ಪರಿಚಯ ಮಾಡುವಾಗ ಸಂಬೋಧಿಸುತ್ತಾರೆ.

**ಅಜ್ಜ-ಅಜ್ಜಿ**

ಸಾಮಾನ್ಯವಾಗಿ ತಂದೆ-ತಾಯಿಯ, ಅಪ್ಪ-ಅವ್ವಂದಿರನ್ನು ಅಜ್ಜ-ಅಜ್ಜಿ ಎಂದು ಸಂಬೋಧಿಸಲಾಗುತ್ತದೆ. ಸೋಲಿಗ ಸಮುದಾಯದಲ್ಲಿ ತಂದೆಯ ತಂದೆ ಮತ್ತು ತಾಯಿಗೆ - ಅಜ್ಜ-ಅಜ್ಜಿ ಎಂದು ಅಯ್ಯಾ, ಅಮ್ಮ ಎಂದು ಸಂಬೋಧಿಸುತ್ತಾರೆ.

ತಂದೆಯ ತಂದೆ - ಅಯ್ಯಾ/ಅಜ್ಜಾ

ತಾಯಿಯ ತಂದೆ - ಅಯ್ಯಾ/ ಅಜ್ಜಾ

ತಂದೆಯ ತಾಯಿ - ಅಮ್ಮ/ಅಜ್ಜಿ

ತಾಯಿಯ ತಾಯಿ - ಅಮ್ಮ/ಅಜ್ಜಿ

ಇಲ್ಲಿ ಅಜ್ಜನನ್ನು ಸಂಬೋಧಿಸುವಾಗ ಅಜ್ಜಾ ಅಥವಾ ಅಂಯ್ಯಾ ಎಂದು ಸಂಬೋಧಿಸುವುದುಂಟು. ಹಾಗೆಯೇ ಹೆಸರಿನ ಮುಂದೆ ಅಜ್ಜಾ ತಾತಾ ಎಂಬುದನ್ನು ಸೇರಿಸಿಕೊಂಡು ಗೌರವ ಭಾವನೆಯಿಂದಲೇ ಕರೆಯುವುದುಂಟು. ಅಜ್ಜಿಯರನ್ನು ಸಂಬೋಧಿಸುವಾಗ ಹೆಸರಿನ ಮುಂದೆ ಅಜ್ಜಿ ಎಂದು ಮತ್ತೆ ಅಮ್ಮ ಎಂದು ಸೇರಿಸಿಕೊಂಡು ಸಂಬೋಧಿಸುವುದುಂಟು.

ಉದಾ : ಈತಲ್ಜ - ಮಾದಮ್ಮ - ರತ್ನಮ್ಮ ಈ ರೀತಿ ಹೆಸರಿನ ಮುಂದೆ ಸೇರಿಸಿಕೊಂಡು ಸಂಬೋಧಿಸುವುದುಂಟು. ಆಧುನಿಕತೆಯ ಪ್ರಭಾವದಿಂದಾಗಿ ಹಾಗೂ ನಗರೀಕರಣದ ಸಂಸ್ಕೃತಿಯ ಪ್ರಭಾವದಿಂದಾಗಿ ತಾತಾ ಮತ್ತು ಅಮ್ಮ ಪದವು ಆಕ್ರಮಿಸಿಕೊಂಡಿದೆ.

**೩.೬ ವ್ಯಕ್ತಿನಾಮಗಳ ಬಳಕೆ ಪರಂಪರೆ ಮತ್ತು ಆಧುನಿಕ ಸಂದರ್ಭ**

ಮಾನವ ಮೊಟ್ಟ ಮೊದಲಿಗೆ ಭೂಮಿಯ ಮೇಲೆ ತನ್ನ ಅಸ್ತಿತ್ವವನ್ನು ಹೊಂದಿದಾಗ ಅವನನ್ನು ಹೆಸರಿನಿಂದ ಕರೆಯುವಂತಹ ಪದ್ದತಿ ಇರಲಿಲ್ಲ. ಇವನಿಗೆ ಬೇಟೆ, ಆಹಾರ, ನಿದ್ರೆ, ಮೈಥುನಗಳಲ್ಲಿ ತನ್ನ ಜೀವನವನ್ನು ಕಳೆದುಕೊಂಡು, ನಂತರದಲ್ಲಿ ಆ ವ್ಯಕ್ತಿಯು ಚಿಕ್ಕ ಗಾತ್ರದ ಕುಟುಂಬವನ್ನು ಕಟ್ಟಿಕೊಂಡು ಒಂದು ಕಡೆ ನೆಲೆಯೂರಲು ಅನಿವಾರ್ಯವಾದಾಗ, ಬೇರೆ ಕುಟುಂಬಗಳೂ ಸೇರಿ ಗ್ರಾಮವಾಯಿತು. ಆ ವ್ಯಕ್ತಿಗಳನ್ನು ಗುರುತಿಸುವುದು ಕಷ್ಟವಾಗಿ, ಆ ಕಷ್ಟದ ಪರಿಹಾರಕ್ಕಾಗಿ ವ್ಯಕ್ತಿಗೆ ಹೆಸರಿಟ್ಟು ಕರೆಯುವುದು ಪ್ರಾರಂಭವಾಗಿರಬೇಕು ಹಾಗೂ ಈ ನಾಮ ನಿರ್ದೇಶನ ಪದ್ಧತಿ ಕೃಷಿ ಸಂಸ್ಕೃತಿ ಅಸ್ಥಿತ್ವಕ್ಕೆ ಬಂದುದರ ಪರಿಣಾಮವಾಗಿರಬಹುದು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೫]

ವ್ಯಕ್ತಿನಾಮವು ವ್ಯಕ್ತಿಯನ್ನು ಗುರುತಿಸುವಂತಹ ಸಾಧನಗಳಲ್ಲಿ ಪ್ರಮುಖವಾಗಿದೆ. ಜಗತ್ತಿನ ಎಲ್ಲಾ ಭಾಷೆಗಳಲ್ಲಿ ವ್ಯಕ್ತಿನಾಮಗಳಿವೆ. ಇವುಗಳ ಮೂಲಕ ಜನಾಂಗದ ಅಧ್ಯಯನಕ್ಕೆ ಆಕರ ಸಾಮಗ್ರಿಯಾಗಿ ಭಾಷಿಕ ಹಾಗೂ ಸಾಮಾಜಿಕ ಸ್ತರಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಈ ವ್ಯಕ್ತಿನಾಮಗಳಿಂದ ಲಭ್ಯವಾಗುತ್ತದೆ. ಪರಸ್ಪರರನ್ನು ಗುರುತಿಸಿಕೊಳ್ಳುವುದು ಅತಿಮುಖ್ಯ ಎನ್ನುವುದರ ಅರಿವು ಮೂಡಿತು. ಹೀಗಾಗಿ ಪ್ರತಿಯೊಬ್ಬ ವ್ಯಕ್ತಿಯನ್ನು ಪ್ರತ್ಯೇಕವಾಗಿ ನಿರ್ದೇಶಿಸಲು ಹೆಸರುಗಳನ್ನು

ಇಡಲಾರಂಭಿಸಿದರು. ಪ್ರತಿಯೊಂದು ಸಮಾಜದಲ್ಲೂ ವ್ಯಕ್ತಿನಾಮಕ್ಕೊಂದು ಚರಿತ್ರೆಯಿದೆ. ಜನರು ವಾಸಿಸುವ ಭೌಗೋಳಿಕ ಪರಿಸರ ಆಯಾ ಭಾಷಾ ಸಮುದಾಯಗಳ ನಂಬಿಕೆ, ಸಂಪ್ರದಾಯ, ಆಚರಣೆ ಮೊದಲಾದ ಅಂಶಗಳಿಂದ ಅವರ ಹೆಸರುಗಳು ನಿರ್ಧಾರಿತವಾಗುತ್ತವೆ. ವ್ಯಕ್ತಿನಾಮದ ಭಾಷಿಕ, ಚಾರಿತ್ರಿಕ ವಿಶ್ಲೇಷಣೆಯಿಂದ ಅಲ್ಲಿನ ಸಾಂಸ್ಕೃತಿಕ ಪರಿಸರವನ್ನು ಅನಾವರಣಗೊಳಿಸಲು ಸಾಧ್ಯ. ಈ ಹಿನ್ನೆಲೆಯಲ್ಲಿ ಬಿಳಿಗಿರಿರಂಗನ ಬೆಟ್ಟದಲ್ಲಿ ಕಂಡುಬರುವ ಸೋಲಿಗರ ವ್ಯಕ್ತಿನಾಮಗಳನ್ನು ಗುರುತಿಸಿ ಭಾಷಿಕವಾಗಿ ಅವುಗಳ ಸ್ವರೂಪ ಮತ್ತು ಕಾರಣಗಳನ್ನು ವಿಶ್ಲೇಷಿಸಲಾಗಿದೆ.

ವ್ಯಕ್ತಿನಾಮಗಳು ಹಲವಾರು ರೀತಿಯಲ್ಲಿ ಇರುವುದನ್ನು ಸೋಲಿಗ ಸಮುದಾಯದ ಹೆಸರುಗಳನ್ನು ನೋಡಿದರೆ ಗೊತ್ತಾಗುತ್ತದೆ. ಪ್ರಾದೇಶಿಕವಾಗಿ ಮತ್ತು ಸಾಮಾಜಿಕವಾಗಿ ವ್ಯಕ್ತಿನಾಮಗಳು ಬದಲಾಗುತ್ತಾ ಹೋಗುವುದನ್ನು ಕಾಣಬಹುದಾಗಿದೆ. ದೈವ, ಪುರಾಣ, ಚರಿತ್ರೆ, ನಿಸರ್ಗ, ಇತರೆ ಆಕರಗಳಿಂದ ನೋಡಬಹುದಾಗಿದೆ. ಚರಿತ್ರೆಯಿಂದಲೂ ವ್ಯಕ್ತಿಯ ಹೆಸರನ್ನು ಆಯ್ಕೆಮಾಡಿ ನಾಮಕರಣ ಮಾಡುವುದು ಸಹಜ ಪ್ರಕ್ರಿಯೆಯಾಗಿದೆ. ಧೀರ, ಶೂರ, ಬುದ್ಧಿವಂತನ ಹೆಸರನ್ನು ನಾಮಕರಣ ಮಾಡುವುದು ನೋಡುತ್ತೇವೆ.

ಮಾನವ ತನ್ನ ಆರಾಧ್ಯ ದೇವರುಗಳ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಟ್ಟಿರುವ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಒಬ್ಬ ವ್ಯಕ್ತಿ ತನ್ನ ಆರಾಧ್ಯದೇವರ ಹೆಸರನ್ನು ತನ್ನ ಮಕ್ಕಳಿಗೆ ಇಡುವುದರಿಂದ ಯಾವುದೇ ತೊಂದರೆ ಬಾರದಿರಲಿ ಎಂಬ ನಂಬಿಕೆ. ನಂಬಿಕೆ ಎನ್ನುವುದು ಮನುಷ್ಯನಿಗೆ ತನ್ನ ಜೀವಿತಕಾಲವಧಿ ಉದ್ದಕ್ಕೂ ಬಂದಿರುವಂತಹದ್ದು ಹಾಗೂ ದೇವರು ನಮ್ಮನ್ನು ಕಾಪಾಡಲಿ ಎಂಬ ನಂಬಿಕೆಯ ಮೂಲಕ ಹೆಸರಿಡುವುದು ಕಂಡುಬರುತ್ತದೆ. ಸಮುದಾಯದಲ್ಲಿ ಪದೇ ಪದೇ ಅನಾರೋಗ್ಯದಿಂದ ಬಳಲುತ್ತಿದ್ದರೆ ಅಥವಾ ಸಾಯುತ್ತಿದ್ದರೆ ಯಾವುದೇ ಆಕಸ್ಮಿಕ ತೊಂದರೆಗಳಿಗೆ ಸಿಕ್ಕಿದರೆ, ಅದನ್ನು ಪರಿಹರಿಸಿಕೊಳ್ಳುವ ಸಲುವಾಗಿ ದೇವರ ಮೊರೆ ಹೋಗುವುದು ಸೋಲಿಗ ಸಮುದಾಯದಲ್ಲಿ ಕಂಡುಬರುತ್ತದೆ. ಸೋಲಿಗ ಸಮುದಾಯದಲ್ಲಿ ಕೇತದೇವರು, ಜಡೆದೇವರು, ಮಾದೇಶ್ವರ, ಬಿಳಿಗಿರಿರಂಗ ಆರಾಧ್ಯ ದೈವಗಳಾಗಿವೆ.

ಈ ಸಮುದಾಯ ಮೂಲತಃ ಕಾಡನ್ನೆ ಆಶ್ರಯಿಸಿ ಬೆಳೆದಿರುವುದು ಇವರು ಸಮುದಾಯದ ದೇವರುಗಳ ಮೇಲೆ ಬಹಳ ನಂಬಿಕೆ ಇಟ್ಟಿರುವುದು ಕಂಡುಬರುತ್ತದೆ. ಸಮುದಾಯದ ವ್ಯಕ್ತಿಗಳು ತಮ್ಮ ಮಕ್ಕಳಿಗೆ ಹೆಸರಿಡುವ ಸಂದರ್ಭದಲ್ಲಿ ತಮ್ಮ ದೇವರುಗಳ ಹೆಸರುಗಳನ್ನು ಇಟ್ಟಿರುವುದನ್ನು ಕಾಣುತ್ತೇವೆ. ಅದರ ಜೊತೆಗೆಯೇ "ಗೌಡ" ಎಂಬ ವಾರ್ಗಿಕ ಪದವು ಕೂಡ ಬರುವುದನ್ನು ಕಾಣಬಹುದು. ನಾವು ಮೇಲ್ನೋಟಕ್ಕೆ ನೋಡಿದಾಗ ಗೌಡ ಎಂಬ ಪದವು ಈ ಸೋಲಿಗ ಸಮುದಾಯದಲ್ಲಿ ಹೆಚ್ಚು ವಾರ್ಗಿಕ ಪದವಾಗಿ ಬಳಕೆಯಾಗುತ್ತದೆ. ಗೌಡ ಎಂಬುದು ಒಂದು ಹುದ್ದೆಯನ್ನು ಸೂಚಿಸುವಂತಹದ್ದು. ಗ್ರಾಮದ ಮುಖಂಡನಿಗೆ ಹಿಂದೆ ಈ ಹೆಸರಿನಿಂದಲೆ ಕರೆಯಲಾಗುತ್ತಿತ್ತು. ಈ ಅಧಿಕಾರವನ್ನು ಹೊಂದಿರುವ ವ್ಯಕ್ತಿ ಇತರರಿಗಿಂತ ಭಿನ್ನವೆಂದು

ಸೂಚಿಸಿಕೊಳ್ಳಲು ತಮ್ಮ ಹೆಸರಿನ ಮುಂದೆ ತಮ್ಮ ಹುದ್ದೆಯ ಹೆಸರನ್ನು ಬರೆಸಿಕೊಳ್ಳುವಂತಹದ್ದು. ಇದೊಂದು ಸಾಮಾನ್ಯ ಪ್ರಕ್ರಿಯೆಯಾಗಿದ್ದು ಹೀಗೆ ಬಳಕೆಗೆ ಬಂದ ಹೆಸರು ವ್ಯಕ್ತಿನಾಮದ ಭಾಗವಾಗಿ ಬಳಕೆಯಾಗಿರುವುದನ್ನು ಕಾಣಬಹುದು. ಪ್ರಾಚೀನ ಕಾಲದಲ್ಲಿ 'ಗೌಡ' ಎಂಬ ಪದವು ಗಾವುಂಡ ಎಂದು ಬಳಕೆಯಲ್ಲಿದ್ದುದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ.

ಉದಾ: ವಿಕ್ರಮಗಾವುಂಡ
ವಲ್ಲಭಗಾವುಂಡ

ಹೈದ್ರಾಬಾದ್-ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಈ ಗೌಡ ವಾರ್ಗಿಕ ಪದವನ್ನು ಹೆಚ್ಚು ಮೇಲ್ವರ್ಗದ ಜನರು ತಮ್ಮ ಹೆಸರಿಡುವುದನ್ನು ಕಾಣಬಹುದು. ಉದಾ : ಲಿಂಗಾಯಿತ(ಸಾದರ) ಎಂಬ ಉಪಜಾತಿಯು ತಾವು ಹೆಸರನ್ನು ಇಡುವಾಗ ತಮ್ಮ ನಿರ್ದಿಷ್ಟ ಹೆಸರಿನ ಜೊತೆ ವಾರ್ಗಿಕ ರೂಪವಾದ ಗೌಡ ಪದವನ್ನು ಹೆಚ್ಚು ಬಳಕೆ ಮಾಡುತ್ತಾರೆ.

ಉದಾ: ವೀರಣ್ಣಗೌಡ
ಶಿವಾನಂದಗೌಡ
ಸುಂಕನಗೌಡ
ಚೆನ್ನಪ್ಪಗೌಡ
ಸಂದೇಶ್‌ಗೌಡ
ಸೋಮಶೇಖರಗೌಡ
ಶಂಕರಗೌಡ

ಹೈದ್ರಾಬಾದ್-ಕರ್ನಾಟಕದ ಕುರುಬ ಸಮುದಾಯದಲ್ಲಿ ಬೀರಲಿಂಗೇಶ್ವರ ದೇವರ ಪೂಜೆಯನ್ನು ಮಾಡುವ ಪೂಜಾರಿಗಳು ಕೂಡ "ಗೌಡ" ವಾರ್ಗಿಕ ಪದವನ್ನು ಹಚ್ಚಿ ಹೆಸರಿಡುವುದು ಕಂಡುಬರುತ್ತದೆ.

ಉದಾ: ಬೀರಲಿಂಗೇಗೌಡ
ಹುಚ್ಚಪ್ಪಗೌಡ
ಮಲ್ಲಿಕಾರ್ಜುನಗೌಡ
ಲಕ್ಕಪ್ಪಗೌಡ
ಪ್ರಕಾಶ್‌ಗೌಡ

ಹಾಗೆಯೇ ದಕ್ಷಿಣ ಕರ್ನಾಟಕದ ಕಡೆಗೆ ಒಕ್ಕಲಿಗ ಸಮುದಾಯದ ಎಲ್ಲಾ ಉಪಜಾತಿಗಳ ಜನರು ತಮ್ಮ ನಿರ್ದಿಷ್ಟ ಹೆಸರಿನ ಜೊತೆಗೆ ವಾರ್ಗಿಕ ರೂಪವಾದ "ಗೌಡ" ಪದವನ್ನು ಸೇರಿಸಿ ಹೆಸರಿಡುವುದು ಕಾಣಬಹುದು.

ಉದಾ: ರಂಗೇಗೌಡ
ಮಲ್ಲೇಗೌಡ
ಬಸವೇಗೌಡ

ಕರೀಗೌಡ

ಶಿವರಾಮೇಗೌಡ

ಜಲ್ಲೇಗೌಡ

ನಂಜೇಗೌಡ

ಅದರಂತೆಯೇ ಈ ಸೋಲಿಗ ಸಮುದಾಯವು ಕೂಡ ನಿರ್ದಿಷ್ಟ ಹೆಸರಿನ ಜೊತೆ ಗೌಡ ಎಂಬ ವಾರ್ಗಿಕ ರೂಪವನ್ನು ಸೇರಿಸಿ ಹೆಸರಿಡುವುದನ್ನು ಗಮನಿಸಬಹುದು. ಆದರೆ ಗೌಡ ಎಂಬ ವಾರ್ಗಿಕ ಪದದ ಅರ್ಥ ಊರಿನ ಯಜಮಾನ, ಗ್ರಾಮ ವೃದ್ಧ ಎಂದು ಕನ್ನಡದ ನಿಘಂಟುವಿನಲ್ಲಿ ಅರ್ಥೈಸಿದ್ದಾರೆ. ನಾವು ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಹೈದ್ರಾಬಾದ್-ಕರ್ನಾಟಕದ ಭಾಗದಲ್ಲಿ ಲಿಂಗಾಯಿತ(ಸಾದರ) ಸಮುದಾಯವು ತಮ್ಮ ನಿರ್ದಿಷ್ಟ ಹೆಸರುಗಳನ್ನು ಗಮನಿಸಿದಾಗ ಅವು ಅವರ ಆರಾಧ್ಯ ದೇವರುಗಳ ಹೆಸರುಗಳೇ ಆಗಿವೆ. ಆದರೆ ಅವು ಸೋಲಿಗ ಸಮುದಾಯದ ದೈವಗಳ ಹೆಸರುಗಳಲ್ಲಿ ಈ ಅಂಶ ನಮಗೆ ಮುಖ್ಯವಾಗುತ್ತದೆ.

ಉದಾ : ಲಿಂಗಾಯಿತ(ಸಾದರ) ಸಮುದಾಯದ ವ್ಯಕ್ತಿಯ ಹೆಸರು ಮರುಳಸಿದ್ದನಗೌಡ ಇಲ್ಲಿ ಮರುಳಸಿದ್ದೇಶ್ವರ ಈ ಸಮುದಾಯದ ಆರಾಧ್ಯ ದೈವ. ಮರುಳಸಿದ್ದೇಶ್ವರ ಎಂಬುವುದು ದೈವ ನಾಮವಾಗಿದೆ. ಹಾಗೆಯೇ ಕುರುಬ ಸಮುದಾಯದ ವ್ಯಕ್ತಿನಾಮವನ್ನು ಗಮನಿಸಿದಾಗ ಬೀರಪ್ಪಗೌಡ ಎಂದಿದೆ. ಇಲ್ಲಿ ಬೀರಪ್ಪ ಎನ್ನುವುದು ಕುರುಬ ಸಮುದಾಯದ ಆರಾಧ್ಯ ದೈವವಾಗಿದೆ. ಈ ಹಿನ್ನೆಲೆಯಲ್ಲಿ ಹೆಸರನ್ನು ಗಮನಿಸಬಹುದಾಗಿದೆ. ಹಾಗೆಯೇ ದಕ್ಷಿಣ ಕರ್ನಾಟಕದ ಒಕ್ಕಲಿಗ ಸಮುದಾಯದಲ್ಲಿ ಭೈರೇಗೌಡ ಎಂಬುವುದು ಕಂಡುಬರುತ್ತದೆ. ಇಲ್ಲಿ ಭೈರವೇಶ್ವರ ಅವರ ಮನೆಯ ಆರಾಧ್ಯ ದೈವವಾಗಿದೆ. ಈ ಹಿನ್ನೆಲೆಯಲ್ಲಿ ಹೆಸರಗಳನ್ನು ಗಮನಿಸಬಹುದಾಗಿದೆ.

ಸೋಲಿಗ ಸಮುದಾಯದಲ್ಲೂ ತಮ್ಮ ಕುಲದೇವತೆಗಳ ಜೊತೆಗೆ ಗೌಡ ವಾರ್ಗಿಕ ರೂಪವನ್ನು ಬಳಸುವುದನ್ನು ನಾವು ಕಾಣಬಹುದು. ಆದರೆ ಮುಖ್ಯವಾಗಿ ನಾವು ವ್ಯಕ್ತಿನಾಮಗಳಲ್ಲಿ ಗಮನಿಸಿಬಹುದಾದ ಅಂಶವೆಂದರೆ ವಾರ್ಗಿಕ ಪದವಾದ ಗೌಡ ರೂಪ ಕೆಲವು ಸಮುದಾಯದಲ್ಲಿ ಬಳಕೆಯಾಗುವುದನ್ನು ಕಾಣಬಹುದು. ಏಕೆಂದರೆ ಗೌಡ ಎನ್ನುವುದು ಊರಿನ ಯಜಮಾನ, ಮುಖ್ಯವ್ಯಕ್ತಿ, ಗ್ರಾಮ ವೃದ್ಧ ಎನ್ನುವ ಕಾರಣಕ್ಕಾಗಿ ಈ ವಾರ್ಗಿಕ ರೂಪವನ್ನು ಇಡುತ್ತಾರೆ. ಆದರೆ ನಿರ್ದಿಷ್ಟ ಪದವು ಸಮುದಾಯದ ಆರಾಧ್ಯ ದೈವದ ಹೆಸರುಗಳಾಗಿವೆ. ಅಂದರೆ ಒಕ್ಕಲಿಗ ಸಮುದಾಯದವರು ಸೋಲಿಗ ಸಮುದಾಯದ ದೈವಗಳ ಹೆಸರುಗಳನ್ನು ಕಟ್ಟಿಲ್ಲ, ಅದೇ ದೈವಗಳ ಹೆಸರುಗಳನ್ನು ಕಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಸೋಲಿಗ ವ್ಯಕ್ತಿನಾಮಗಳು ವಿಶಿಷ್ಟವಾದವುಗಳಾಗಿವೆ.

ಬಿಳಿಗಿರಿರಂಗನ ಬೆಟ್ಟದಲ್ಲಿ ಬಹುಪಾಲು ಸೋಲಿಗರೆ ನೆಲೆಸಿರುವುದರಿಂದ ಅವರ ವ್ಯಕ್ತಿನಾಮಗಳಲ್ಲಿ ವಾರ್ಗಿಕ ನಾಮವಾಗಿ ಗೌಡ ಸೇರುತ್ತದೆ. ಸೋಲಿಗರ ವ್ಯಕ್ತಿನಾಮಗಳು ಅವರ

ಸಂಸ್ಕೃತಿಗೆ ಅನುಗುಣವಾಗಿ ಹೆಸರುಗಳನ್ನು ಕಟ್ಟಿರುವುದನ್ನು ಕಾಣಬಹುದಾಗಿದೆ. ಮಾದೇಶ್ವರ ಅಥವಾ ಮಾದಪ್ಪ ಇವರ ಆರಾಧ್ಯ ದೈವ ಇದರ ಜೊತೆಗೆ ಕೇತದೇವರು, ಬಿಳಿಗಿರಿರಂಗಪ್ಪ, ಜಡೆದೇವರು, ಇವರು ಆರಾಧಿಸುವ ದೇವರುಗಳು. ಉದಾ: ಕೇತಗೌಡ, ಕೇತದೇವರು ಇವರ ಆರಾಧ್ಯ ದೈವ ಆ ದೇವರ ಹೆಸರಿನಿಂದ ಜೊತೆಗೆ ವಾರ್ಗಿಕ ಪದವಾದ ಗೌಡ ಪದರೂಪ ಸೇರುತ್ತದೆ. ಗೌಡ ಎಂದರೆ ನಿಘಂಟುವಿನಲ್ಲಿ ಹಳ್ಳಿಯ ಮುಖಂಡ, ಬಂಗಾಲದ ಒಂದು ಜಾತಿ, ಮಜ್ಜಿಗೆ ಎಂಬ ಅರ್ಥಗಳನ್ನು ಕೊಡುತ್ತದೆ. ಇಲ್ಲಿ ಸೋಲಿಗರಲ್ಲಿ ಈ ವಾರ್ಗಿಕ ಪದವಾದ ಗೌಡ ಪೋಡಿನ ಮುಖಂಡ ಎಂಬ ಅರ್ಥಗ್ರಹಿತವಾಗುತ್ತದೆ. ಈ ಉದ್ದೇಶದಿಂದ ಸೋಲಿಗರ ನಿರ್ದಿಷ್ಟ ಪದದ ಜೊತೆಗೆ ವಾರ್ಗಿಕ ಪದವನ್ನು ಸೇರಿಸಿ ಕಟ್ಟುವುದು ಕಂಡುಬರುತ್ತದೆ. ಸೋಲಿಗರಲ್ಲಿ ಗೌಡ ಪದವು ವಿಶೇಷವಾಗಿ ಬಳಕೆಯಾಗುತ್ತದೆ. ಕಾರಣ ಇವರಲ್ಲಿ ಐದು ಕುಲಗಳಿವೆ. ಒಂದೊಂದು ಕುಲಕ್ಕೂ ಒಬ್ಬೊಬ್ಬ ಗೌಡನನ್ನು ನೇಮಿಸುತ್ತಾರೆ.

ಈ ಹಿನ್ನೆಲೆಯಲ್ಲಿ ತಮ್ಮ ಮಕ್ಕಳಿಗೂ ಕೂಡ ಗೌರವ ಸೂಚಕವಾಗಿ ಗೌಡ ಪದವನ್ನು ಸೇರಿಸಿ ಕಟ್ಟುವುದು ಕಂಡುಬರುತ್ತದೆ. ಗೌಡ ಎಂಬುದು (ಗ್ರಾಮ ವೃದ್ಧ) ಗ್ರಾಮದ ಹಿರಿಯ ಯಜಮಾನ ಎಂಬುದಾಗಿದೆ ಕಂಡುಬರುತ್ತದೆ. ಜಡೆ, ರಂಗ, ನಂಜ, ಪಂದ, ಸವ, ಬೊಮ್ಮ, ಮಲ್ಲ, ಕೇತ, ಸಿದ್ದ ಈ ಎಲ್ಲಾ ದೇವರುಗಳು ಸೋಲಿಗ ಸಮುದಾಯದ ದೇವರುಗಳಾಗಿವೆ. ಈ ದೇವರುಗಳ ಹೆಸರಿನ ಮುಂದೆ ಗೌಡ ಎನ್ನುವ ವಾರ್ಗಿಕ ಪದವನ್ನು ಸೇರಿಸಿ ಹೆಸರನ್ನು ಕಟ್ಟುತ್ತಾರೆ. ಇಲ್ಲಿ ಅಪ್ಪ-ಅಣ್ಣ ಎಂಬ ವಾರ್ಗಿಕ ಪದವು ಎಲ್ಲೂ ಕೂಡ ಬಳಕೆಯಾಗುವುದಿಲ್ಲ. ಇದು ಸೋಲಿಗರ ವ್ಯಕ್ತಿನಾಮಗಳಲ್ಲಿ ವಿಶೇಷವಾಗಿದೆ ಸೋಲಿಗ ಸಮುದಾಯೇತರ ವ್ಯಕ್ತಿನಾಮಗಳಲ್ಲಿ ವಾರ್ಗಿಕ ಪದಗಳಾಗಿ ಅಪ್ಪ, ಅಣ್ಣ, ಅಯ್ಯಾ ಇತ್ಯಾದಿ ವಾರ್ಗಿಕ ಪದಗಳು ಸೇರುವುದು ಕಂಡುಬರುತ್ತದೆ.

ಸೋಲಿಗರ ಪರಿಸರದಲ್ಲಿನ ಬಳಕೆಯಲ್ಲಿರುವ ವ್ಯಕ್ತಿನಾಮಗಳನ್ನು ಗಮನಿಸಲಾಗಿ ಅವುಗಳನ್ನು ರಾಚನಿಕವಾಗಿ ವಿಶ್ಲೇಷಣೆ ಮಾಡಲಾಗಿದೆ. ಈ ವಿಶ್ಲೇಷಣೆಯ ಮೂಲಕ ಹಲವು ಅಂಶಗಳನ್ನು ಗುರುತಿಸಿಕೊಳ್ಳಲಾಗಿದೆ.

ಅಯ್ಯ ಬಂದು ವಾಚಿ ಲೋಪವಾಗಿ ಏ ದೀರ್ಘಸ್ವರ ಪಡೆದುಕೊಳ್ಳುತ್ತದೆ.

ಉದಾ:ಮಾದ+ಅಯ್ಯ+ಗೌಡ = ಮಾದೇಗೌಡ

ಜಡೆ+ಅಯ್ಯ+ಗೌಡ = ಜಡೇಗೌಡ

ರಂಗ+ಅಯ್ಯ+ಗೌಡ = ರಂಗೇಗೌಡ

ಕೇತ+ಅಯ್ಯ+ಗೌಡ = ಕೇತೇಗೌಡ

ಸಿದ್ದ+ಅಯ್ಯ+ಗೌಡ =ಸಿದ್ದೇಗೌಡ

ಮುತ್ತನ+ಅಯ್ಯ+ಗೌಡ = ಮುತ್ತನಗೌಡ

ಮಾದ+ಅಯ್ಯ+ಗೌಡ=    ಮಾದೆಗೌಡ

ಕೊಲ್ಲ +ಅಯ್ಯ+ಗೌಡ = ಕೊಲ್ಲೆಗೌಡ

ಬೊಮ್ಮ +ಅಯ್ಯ+ಗೌಡ= ಬೊಮ್ಮೆಗೌಡ

ಲಕುಮ +ಅಯ್ಯ+ಗೌಡ= ಲಕುಮಗೌಡ

ಜಡೆಮಾದ +ಅಯ್ಯ +ಗೌಡ=ಜಡೆಮಾದೇಗೌಡ

ಈ ಮೇಲಿನ ಸೋಲಿಗರ ವ್ಯಕ್ತಿನಾಮಗಳ ರಚನೆಯಲ್ಲಿ ಒಂದು ನಿರ್ದಿಷ್ಟ ಘಟಕಕ್ಕೆ ಎರಡು ವಾರ್ಗಿಕಗಳು ಸೇರಿ, ರಾಚನಿಕ ಸ್ವರೂಪವನ್ನು ಪಡೆದುಕೊಂಡಿರುವುದನ್ನು ಗಮನಿಸಬಹುದಾಗಿದೆ.

ಹೀಗೆ ವ್ಯಕ್ತಿನಾಮಗಳ ನಿರ್ದಿಷ್ಟ ಮತ್ತು ವಾರ್ಗಿಕ ಪದಗಳು ಈ ರೀತಿ ಕಂಡುಬರುತ್ತದೆ. ಪುರುಷ ವ್ಯಕ್ತಿನಾಮಗಳು ಬಹುಪಾಲು ದೈವದ ಮೂಲದ ಹೆಸರುಗಳೇ ಆಗಿವೆ. ಇವು ಸುಮಾರು ಒಂದನೆ ತಲೆಮಾರಿನ ೭೫ ರಿಂದ ೫೬ ವರ್ಷ ಒಳಗಿನವರಲ್ಲಿ ಹೆಚ್ಚು ಕಂಡುಬರುತ್ತದೆ.

ಉದಾ: ಪುರುಷವಾಚಿ

ಕಾರನಕೇತೆಗೌಡ

ಜಡೇಮಾದೇಗೌಡ

ಲಕುಮಗೌಡ

ಕೊಲ್ಲೆಗೌಡ

ಕ್ಯಾತೆಗೌಡ

ಸಾರಿ ಮಾದೇಗೌಡ

ಬಹುಪಾಲು ವ್ಯಕ್ತಿನಾಮಗಳು ಒಂದೇ ರೀತಿಯಾಗಿದ್ದು, ಪುನಃ ಪುನಃ ಅವುಗಳನ್ನು ಕರೆದು ಕೊಳ್ಳುತ್ತಾರೆ. ಸೋಲಿಗರು ಹಳೆಯ ತಲೆಮಾರಿನಿಂದಲೂ ಹೆಸರುಗಳು ಪಾರಂಪರಿಕವಾಗಿ ಬಳಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಎರಡನೆ ತಲೆಮಾರು ೩೬ ರಿಂದ ೫೫ ವರ್ಷದ ಒಳಗಿನವರಲ್ಲಿ ಕಂಡುಬರುತ್ತದೆ.

ಉದಾ: ಈರೇಗೌಡ

ಬಸವೇಗೌಡ

ರಂಗೇಗೌಡ

ದಾಸೇಗೌಡ

ನಂಜೇಗೌಡ

ದಾಸೇಗೌಡ

ಬೊಮ್ಮೆಗೌಡ

ಸಿದ್ದೇಗೌಡ

ದೊಡೇಗೌಡ

ಮಾದ

ಬಸವರಾಜು

ಮಾದೇವ

ಬಸವ

ಬೋರ

**ವೃತ್ತಿ ಸೂಚಕ ವಿಶೇಷಣವುಳ್ಳ ವ್ಯಕ್ತಿನಾಮಗಳು**

ಸೋಲಿಗರು ಕಟ್ಟೆಮನೆ ಕೆಲಸವನ್ನು ನಿರ್ಮಿಸಿಕೊಳ್ಳುವುದಕ್ಕೆ ಅವರ ಕುಲಗಳಲ್ಲಿಯೇ ಒಂದೊಂದು ಕುಲ, ಒಂದೊಂದು ಕೆಲಸವನ್ನು ನಿರ್ವಹಿಸಬೇಕು, ತೆನೇರುಕುಲದವರು ಪಟ್ಟೇಗಾರ ಹಾಲ್ರ ಕುಲದವರು ಮಣೆಗಾರ, ಸೂಳ್ರಕುಲದವರು ಛಲವಾದಿ, ಚಳಕ್ರು ಕುಲದವರು ಯಜಮಾನ, ಬೆಳ್ರಕುಲದವರು ಕೊಲ್ಕಾರ. ಈ ಐದು ಕುಲಗಳಿಗೂ ಒಂದೊಂದು ಕೆಲಸವನ್ನು ನಿರ್ವಹಿಸುತ್ತಾರೆ. ಇವರು ಹೇಳಿದ ವಿಷಯಗಳ ಸುದ್ದಿ ಮುಟ್ಟಿಸುವವನು ಕೋಲುಕಾರ ಎಂದು ನೇಮಿಸಿರುತ್ತಾರೆ. ಈ ವೃತ್ತಿ ಕೆಲಸವನ್ನು ನಿರ್ವಹಿಸುವ ಮನೆತನಗಳು ತಮ್ಮ ಹೆಸರುಗಳು ಕಟ್ಟುವ ಸಮಯದಲ್ಲಿ ಹೆಸರಿನ ಜೊತೆ ವ್ಯಕ್ತಿನಾಮಗಳನ್ನು ಕಟ್ಟಿಕೊಳ್ಳುವುದು ಕಂಡುಬರುತ್ತದೆ.

ಸೋಲಿಗರ ಸಮುದಾಯದಲ್ಲಿ ಅವರದೇ ಆದಂತಹ ಕುಲಗಳಿವೆ. ಆ ಕುಲಗಳಿಗೆ ತಕ್ಕಂತೆ ಐದು ಜನರು ಮುಖಂಡರು ಇರುತ್ತಾರೆ. ಕುಲಗಳು ನಂತರ ಅವರ ಹೆಸರು ಬರುವುದನ್ನು ಕಾಣಬಹುದು

ಉದಾ: ಯಜಮಾನ ರಂಗೇಗೌಡ,

ಕೋಲುಕಾರ ಮಾದೇಗೌಡ,

ಪಟ್ಟೆಗಾರ ಜಡೇಗೌಡ,

ಮಣೆಗಾರ ಕೇತೇಗೌಡ

ಹೀಗೆ ಅವರ ಸಮುದಾಯದಲ್ಲಿ ಐದು ಕುಲಗಳಿಗೂ ಒಬ್ಬೊಬ್ಬ ಮುಖ್ಯ ವ್ಯಕ್ತಿಯನ್ನಾಗಿ ಮಾಡಿರುವುದು ಕಂಡುಬರುತ್ತದೆ. ಇಲ್ಲಿ ಇವೆಲ್ಲವೂ ಅವರು ನಿರ್ವಹಿಸುವಂತಹ ವೃತ್ತಿ ಆಧಾರದ ಮೇಲೆ ಅವರ ಹೆಸರುಗಳು ರಚಿತವಾಗಿರುವಂತಹುಗಳಾಗಿವೆ.

ಉದಾ : ಪಟ್ಟೇಗಾರ

ಮಣೆಗಾರ,

ಕೋಲುಕಾರ,

ಯಜಮಾನ

ಮೇಲಿನ ವೃತ್ತಿಗಳಿಗೆ ಸಂಬಂಧಿಸಿದಂತೆ ಸೋಲಿಗರಲ್ಲಿ ಪಂಚಾಯಿತಿ ಅಥವಾ ಸಮುದಾಯದ ಕಟ್ಟೆಮನೆಗೆ ಇವರೆಲ್ಲರು ಮುಖ್ಯವ್ಯಕ್ತಿಗಳಾಗಿರುತ್ತಾರೆ. ಪಟ್ಟೆಗಾರ ಜಡೇಗೌಡ,

ಎನ್ನುವುದು ವ್ಯಕ್ತಿಯ ನಾಮವಾಗಿರುತ್ತದೆ. ಪಟ್ಟೆ ಎಂದರೆ ರೇಷ್ಮೆ ಮಾಡುವವ/ ವಸ್ತ್ರಮಾಡುವವ ಎಂದಾಗುತ್ತದೆ. ಗಾರ ಎನ್ನುವುದು-ಒಂದು ಪ್ರತ್ಯಯದ ರೂಪ ಸೋಲಿಗರಲ್ಲಿ ಸಮುದಾಯಕ್ಕೆ ರಕ್ಷಣೆ ಕೊಡುವ ಜವಾಬ್ದಾರಿಯನ್ನು ಹೊಂದಿರುತ್ತಾನೆ.

ಮಣೆಗಾರ ಮಣೆ/ಆಸನ ಪೀಠ ಎಂದಾಗುತ್ತದೆ. ಸೋಲಿಗ ಸಮುದಾಯದಲ್ಲಿ ವ್ಯಕ್ತಿಯು ಸಮುದಾಯಕ್ಕೆ ವಿರುದ್ಧವಾದ ಕೆಲಸ ಮಾಡಿದರೆ ಅಂತಹ ವಿಷಯವನ್ನು ಆ ಒಂದು ಪೀಠದಲ್ಲಿ ನಿಂತು ಅವರಿಗೆ ವಿಷಯವನ್ನು ತಿಳಿಸುವುದಾಗಿದೆ. ಗಾರ ಎನ್ನುವುದು ಪ್ರತ್ಯಯ ರೂಪವಾಗಿದೆ. ಅವರು ಮಾಡುವ ಕೆಲಸಗಳಿಗೆ ಮತ್ತು ವೃತ್ತಿಗಳಿಗೆ ತಕ್ಕಂತೆ ಈ ಪದವನ್ನು ಬಳಸುವುದು ಕಂಡುಬರುತ್ತದೆ.

ಉದಾ: ಬಳೆಗಾರ
ಜೊತೆಗಾರ
ಸಾಲಗಾರ
ಮಾಟಗಾರ
ಆಟಗಾರ

ಇದೇ ರೀತಿ ವ್ಯಕ್ತಿನಾಮಗಳ ಉತ್ತರ ಪದದಲ್ಲಿ ಕೆಲವು ವೃತ್ತಿಗಳನ್ನು ಸೂಚಿಸುವ ಪದಗಳಿವೆ. ವ್ಯಕ್ತಿನಾಮಗಳು ಹುಟ್ಟಿಕೊಂಡಾಗಿನಿಂದಲೂ ವೃತ್ತಿವಾಚಿಗಳನ್ನು ಗುರುತಿಸಿಕೊಂಡಿರುವುದು ಕಂಡುಬರುವುದು ಗಮನಿಸಲಾಗಿದೆ.

ಉದಾಹರಣೆ: ಕೋಲುಕಾರ ರಾಮೇಗೌಡ
ಕೋಲುಕಾರ ಸಿದ್ದೇಗೌಡ
ಛಲವಾದಿ ರಂಗೇಗೌಡ
ಛಲವಾದಿ ಕೇತೆಗೌಡ
ಯಜಮಾನ್ ಜಡೇಗೌಡ
ತಮ್ಮಡಿ ರಂಗೇಗೌಡ

ಹೀಗೆ ವ್ಯಕ್ತಿನಾಮಗಳು ಮುಂದುವರಿಯುತ್ತಾ ಹೋಗುತ್ತದೆ. ಸೋಲಿಗರ ವೃತ್ತಿಗಳು ಪಾರಂಪರಿಕವಾಗಿ ತನ್ನ ಪಂಚಾಯಿತಿಯ ವ್ಯವಸ್ಥೆಯಲ್ಲಿ ಕಂಡುಬಂದಿರುವುದನ್ನು ನೋಡಬಹುದಾಗಿದೆ.

ಸಮುದಾಯದಲ್ಲಿ, ಕುಲದಲ್ಲಿ ನಡೆದಿದೆ ಎಂಬ ತಪ್ಪನ್ನೂ ತಪ್ಪು ಮಾಡಿರುವವನ ವಿವರಗಳನ್ನು ಸಾರುವವನು ಸಾರುವಯ್ಯ ಅಥವಾ ಉದ್ದರಿ. ಈತನನ್ನು ಕೋಲುಕಾರ ಎಂದು ಕರೆಯುತ್ತಾರೆ. ಓಲೆಕಾರ, ಸಿಪಾಯಿ ಎಂದು ಕನ್ನಡ ಸಂಕ್ಷಿಪ್ತ ನಿಘಂಟಿನಲ್ಲಿದೆ. ಒಲೆಕಾರ ಎಂದರೆ ಸೈನಿಕ ಉಳಿಗದವ, ವಾಲಿಕಾರ ಪತ್ರಗಳನ್ನು ಮುಟ್ಟಿಸುವವ, ಸಿಪಾಯ ಎಂದರೆ ಸೈನಿಕ ಎಂಬ

ಅರ್ಥಬರುತ್ತದೆ. ಸೋಲಿಗರು ಕಟ್ಟೆಮನೆಯ ಅಥವಾ ಪಂಚಾಯಿತಿಯ ಸಂದರ್ಭದಲ್ಲಿ ಯಜಮಾನ ಹೇಳಿದ ವಿಷಯವನ್ನು ತಮ್ಮ ಸಮುದಾಯದವರೆಲ್ಲರಿಗೂ ತಿಳಿಸಬೇಕು. ಇವನಿಗೆ ಕುಲದ ಕಟ್ಟು ಕಟ್ಟಳೆಗಳ ಬಗೆಗೆ ಅರಿವಿರಬೇಕು. ಅವರ ಕುಲಕ್ಕೆ ಸಂಬಂಧಿಸಿದ ವಿಚಾರಗಳ ಪರಿಶೀಲನೆಯ ಶಕ್ತಿ ಆತನಿಗಿರುತ್ತದೆ. ಇಲ್ಲಿ ಕುಲಪಂಚಾಯಿತಿಯ ಮುಖ್ಯಸ್ಥ ಗೌಡ ಅಥವಾ ಯಜಮಾನನ ಆಜ್ಞೆಗಳನ್ನು ಪಾಲಿಸಬೇಕಾಗುತ್ತದೆ. ನ್ಯಾಯ ತೀರ್ಮಾನದ ನಂತರ ಕಾರ್ಯರೂಪಕ್ಕೆ ತರುವವನು ಕೋಲುಕಾರ ಶಿಕ್ಷಿಸುವನು ಸಹ ಆಗಿರುತ್ತಾನೆ. ಕೆಲವೊಂದು ಬುಡಕಟ್ಟು ಸಮುದಾಯದ ಕುಲಪಂಚಾಯಿತಿಯ ವ್ಯವಸ್ಥೆಯಲ್ಲಿ ಈ ಕೋಲುಕಾರನ ಪಾತ್ರ ಪ್ರಮುಖವಾಗಿ ಕಂಡುಬರುತ್ತದೆ. ಈ ಉದ್ದೇಶದಿಂದಾಗಿ ಕೋಲುಕಾರ ಎಂಬ ಹೆಸರು ಬಂದಿರಬಹುದು.

ಉದಾಹರಣೆಗೆ :

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟಪದ | ವಾರ್ಗಿಕಪದ |
|---|---|---|---|
| ಕೋಲುಕಾರ ರಾಮೇಗೌಡ | ಕೋಲುಕಾರ | ರಾಮೇ | ಗೌಡ |
| ಕೋಲುಕಾರ ಮಾದೇಗೌಡ | ಕೋಲುಕಾರ | ಮಾದೇ | ಗೌಡ |
| ಕೋಲುಕಾರ ಬೇದೆಗೌಡ | ಕೋಲುಕಾರ | ಬೇದೆ | ಗೌಡ |
| ಕೋಲುಕಾರ ರಂಗೇಗೌಡ | ಕೋಲುಕಾರ | ರಂಗೇ | ಗೌಡ |

ಹಾಗೆಯೇ ಚಲವಾದಿ ಅಂದರೆ ಹೊಲೆಯರ ಜಾತಿ ಎಂಬುದಾಗಿ ಕನ್ನಡ ಸಂಕ್ಷಿಪ್ತ ನಿಘಂಟುವಿನಲ್ಲಿ ತಿಳಿಸಿದ್ದಾರೆ. ಇವರು ಹೊಲೆಯದರಲ್ಲಿ ಒಂದು ಪಂಗಡ ನಿಜ ಕನ್ನಡದ ಬೇರೆ ಬೇರೆ ಪ್ರಾಂತೀಯ ನೆಲೆಗಳಲ್ಲಿ ಹೊಲೆಯ ಎಂಬ ಸಮುದಾಯ ಚಲವಾದಿ ಎಂದು ಕರೆದುಕೊಳ್ಳುತ್ತಿರುವುದನ್ನು ನಾವು ಕಾಣುತ್ತೇವೆ. ಸೋಲಿಗ ಸಮುದಾಯದಲ್ಲಿ ವಿರುದ್ಧವಾಗಿ ಕೆಲಸ ಮಾಡಿದರೆ ಅಂತಹವರಿಗೆ ಶಿಕ್ಷೆಯನ್ನು ಕೊಡುವ ವೃತ್ತಿಯನ್ನು ನಿರ್ವಹಿಸುತ್ತಾರೆ. ಈ ಉದ್ದೇಶದಿಂದ ಅವರು ಚಲವಾದಿ ಜೊತೆಗೆ ಅವರ ಹೆಸರಿನ್ನು ಇಟ್ಟುಕೊಂಡಿರುವುದನ್ನು ಕಾಣಬಹುದು.

ಉದಾಹರಣೆ :

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟಪದ | ವಾರ್ಗಿಕಪದ |
|---|---|---|---|
| ಚಲವಾದಿ ಜಡೇಗೌಡ | ಚಲವಾದಿ | ಜಡೇ | ಗೌಡ |
| ಚಲವಾದಿ ಮಾದೇಗೌಡ | ಚಲವಾದಿ | ಮಾದೇ | ಗೌಡ |
| ಚಲವಾದಿ ಕೇತೇಗೌಡ | ಚಲವಾದಿ | ಕೇತೇ | ಗೌಡ |
| ಚಲವಾದಿ ರಂಗೇಗೌಡ | ಚಲವಾದಿ | ರಂಗೇ | ಗೌಡ |
| ಚಲವಾದಿ ದಾಸೇಗೌಡ | ಚಲವಾದಿ | ದಾಸೇ | ಗೌಡ |
| ಚಲವಾದಿ ವೀರೆಗೌಡ | ಚಲವಾದಿ | ವೀರೆ | ಗೌಡ |

ಮಣೆಗಾರ ಎಂದರೆ ಸೋಲಿಗರ ಸಮುದಾಯದಲ್ಲಿ ಸಮುದಾಯದ ವ್ಯಕ್ತಿ ಸಮಾಜಕ್ಕೆ ವಿರುದ್ಧವಾದ ಕೆಲಸವನ್ನು ಮಾಡಿದರೆ. ಅಂತಹ ವಿಷಯವನ್ನು ಕಟ್ಟೆಮನೆಯವರಿಗೆ ಅಥವಾ ಪಂಚಾಯಿತಿಗೆ ತಿಳಿಸುವುದಾಗಿದೆ. ಇವನಿಗೂ ಸಮುದಾಯದಲ್ಲಿ ಪ್ರಮುಖವಾದ ಸ್ಥಾನ ದೊರೆತಿದ್ದು ಕಾಣಬಹುದು. ಈ ಉದ್ದೇಶದಿಂದ ಇವನು ನಿರ್ವಹಿಸುವ ವೃತ್ತಿಯ ಜೊತೆಗೆ ಕಟ್ಟಿರುವುದನ್ನು ಕಾಣಬಹುದಾಗಿದೆ.

ಉದಾಹರಣೆ :

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟಪದ | ವಾರ್ಗಿಕಪದ |
|---|---|---|---|
| ಮಣೆಗಾರ ದಾಸೇಗೌಡ | ಮಣೆಗಾರ | ದಾಸೇ | ಗೌಡ |
| ಮಣೆಗಾರ ಮಾದೇಗೌಡ | ಮಣೆಗಾರ | ಮಾದೇ | ಗೌಡ |
| ಮಣೆಗಾರ ಅಚ್ಚೆಗೌಡ | ಮಣೆಗಾರ | ಅಚ್ಚೆ | ಗೌಡ |
| ಮಣೆಗಾರ ಕೇತೇಗೌಡ | ಮಣೆಗಾರ | ಕೇತೇ | ಗೌಡ |

ಪಟ್ಟೇಗಾರ ಎಂದರೆ ರೇಷ್ಮೆ ಮಾಡುವವ, ವಸ್ತ್ರ ಮಾಡುವವ ಎಂದು ಕನ್ನಡದ ಸಂಕ್ಷಿಪ್ತ ನಿಘಂಟುವಿನಲ್ಲಿದೆ. ಆದರೆ ಈ ಸಮುದಾಯದಲ್ಲಿ ಪಟ್ಟೇಗಾರನ ಕೆಲಸವೆಂದರೆ ಸಮುದಾಯದ ರಕ್ಷಣೆಯನ್ನು ಕೊಡುವ ಕೆಲಸವಾಗಿದೆ. ಇವರಿಗೂ ಕೂಡ ಸಮುದಾಯದಲ್ಲಿ ಪ್ರಮುಖವಾದ ಸ್ಥಾನ ದೊರೆತ್ತಿದ್ದು ಕಾಣಬಹುದು. ಈ ಉದ್ದೇಶದಿಂದ ಇವರು ನಿರ್ವಹಿಸುವ ವೃತ್ತಿಯ ಜೊತೆ ಹೆಸರು ಕಟ್ಟಿರುವುದನ್ನು ಕಾಣಬಹುದು.

ಉದಾರಹಣೆ:

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟ ಪದ | ವಾರ್ಗಿಕ ಪದ |
|---|---|---|---|
| ಪಟ್ಟೇಗಾರ ಹನುಮೇಗೌಡ | ಪಟ್ಟೇಗಾರ | ಹನುಮೇ | ಗೌಡ |
| ಪಟ್ಟೇಗಾರ ಜಡೇಗೌಡ | ಪಟ್ಟೇಗಾರ | ಜಡೇ | ಗೌಡ |
| ಪಟ್ಟೇಗಾರ ಶಿವನೇಗೌಡ | ಪಟ್ಟೇಗಾರ | ಶಿವನೇ | ಗೌಡ |
| ಪಟ್ಟೇಗಾರ ಸಿದ್ದೇಗೌಡ | ಪಟ್ಟೇಗಾರ | ಸಿದ್ದೇ | ಗೌಡ |

ಯಜಮಾನ ಎಂದರೆ ಒಡೆಯ, ಯಜ್ಞ, ದೀಕ್ಷಿತ, ಮನೆಯ ಹಿರಿಯ ಜಾತಿಯ ಹಿರಿಯ ಎಂಬರ್ಥಗಳನ್ನು ಕನ್ನಡ ಸಂಕ್ಷಿಪ್ತ ನಿಘಂಟುವಿನಲ್ಲಿ ತಿಳಿಸಿದ್ದಾರೆ. ಅಂದರೆ ಸಮುದಾಯದ ಹಿರಿಯ ಎಲ್ಲಾ ಕೆಲಸಗಳಿಗೂ ಮಾರ್ಗದರ್ಶನ ಮಾಡುವವ ಎಂಬರ್ಥ ಕೊಡುತ್ತದೆ. ಕಟ್ಟೆಮನೆ ಎಂದರೆ ನ್ಯಾಯದ ಮನೆ ಎಂದರ್ಥ. ಇಲ್ಲಿ ಸೋಲಿಗ ಸಮುದಾಯದಲ್ಲಿ ಕಟ್ಟು-ಕಟ್ಟಳೆಗಳನ್ನು ಮಾಡುವ ಮನೆ. ಕುಲದ ಕಟ್ಟಳೆಗಳನ್ನು ಮೀರಿ ನಡೆಯುವವರಿಗೆ ಅಡ್ಡಗಟ್ಟೆ ಹಾಕಿ ನ್ಯಾಯಮಾರ್ಗದಲ್ಲಿ

ಕೆಟ್ಟತನವನ್ನು ಬಿಟ್ಟು ಪರಿಶುದ್ಧರಾಗಿ ಜೀವನ ನಿರ್ವಹಣೆ ಮಾಡುವಂತೆ ತಿಳುವಳಿಕೆಯನ್ನು ನೀಡುವ ಒಂದು ತಾಣವಾಗಿದೆ. ಕುಲದ ಅಥವಾ ಪೋಡಿನ ಸಮಸ್ಯೆಯು ಬಗೆ ಹರಿಯದೇ ಇದ್ದಾಗ ಕಟ್ಟೆಮನೆಗೆ ದೂರನ್ನು ತೆಗೆದುಕೊಂಡು ಹೋಗುತ್ತಾರೆ . ಇದು ಸಮುದಾಯದಲ್ಲಿ ಪ್ರಚಲಿತದಲ್ಲಿರುವುದನ್ನು ನೋಡಬಹುದಾಗಿದೆ. ಈ ಸಮುದಾಯದಲ್ಲಿಯೂ ಕೂಡ ಕಟ್ಟೆಮನೆ ಪಂಚಾಯಿತಿಗೆ ಯಜಮಾನನ್ನು ನೇಮಿಸುತ್ತಾರೆ. ಯಾವುದೇ ಕೆಲಸ ಕಾರ್ಯಗಳು ಈ ಯಜಮಾನನ ಸಮ್ಮುಖದಲ್ಲಿ ನಡೆಯಬೇಕು. ಈ ಹಿನ್ನೆಲೆಯಲ್ಲಿ ಯಜಮಾನಿಕೆ ವೃತ್ತಿಯನ್ನು ಮಾಡುವ ಕುಲದವರು ತಮ್ಮ ಹೆಸರಿನ ಜೊತೆ ಈ ವೃತ್ತಿ ಪದವನ್ನು ಸೇರಿಸಿಕೊಂಡಿರುವುದು ಕಂಡುಬರುತ್ತದೆ.

ಉದಾಹರಣೆ :

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟ ಪದ | ವಾರ್ಗಿಕ ಪದ |
|---|---|---|---|
| ಯಜಮಾನ್ ರಂಗೇಗೌಡ | ಯಜಮಾನ್ | ರಂಗೇ | ಗೌಡ |
| ಯಜಮಾನ್ ಬೇದೇಗೌಡ | ಯಜಮಾನ್ | ಬೇದೇ | ಗೌಡ |
| ಯಜಮಾನ್ ಪಂದೇಗೌಡ | ಯಜಮಾನ್ | ಪಂದೇ | ಗೌಡ |
| ಯಜಮಾನ್ ದಾಸೇಗೌಡ | ಯಜಮಾನ್ | ದಾಸೇ | ಗೌಡ |
| ಯಜಮಾನ್ ಮಲ್ಲೇಗೌಡ | ಯಜಮಾನ್ | ಮಲ್ಲೇ | ಗೌಡ |

ಹಾಗೆಯೇ ತಮ್ಮಡಿ ಎಂದರೆ ಮೂರ್ತಿಯ ಪೂಜಾರಿ, ದೇವಸ್ಥಾನದ ಸೇವಕ ಎಂದು ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿದೆ. ಪ್ರತಿಕಾಲದವರೆಗೂ ತಮ್ಮಡಿಯನ್ನು ನೇಮಕ ಮಾಡಿಕೊಂಡಿರುತ್ತಾರೆ. ಇಲ್ಲಿ ಕೂಡ ಸೋಲಿಗರ ದೈವಗಳಿಗೆ ಪೂಜಾರಿಗಳಿಗೆ ನೇಮಕ ಮಾಡಿರುತ್ತಾರೆ. ಇವರಿಗೂ ಕೂಡ ಕುಲದಲ್ಲಿ ವಿಶೇಷವಾದ ಗೌರವವಿದೆ. ಈ ಮನೆತನದವರು ಕೂಡ ತಮ್ಮ ಹೆಸರಿನ ಜೊತೆ ತಾವು ನಿರ್ವಹಿಸುವ ವೃತ್ತಿ ಪದದ ಜೊತೆ ಹೆಸರು ಕಟ್ಟುವುದನ್ನು ಕಾಣಬಹುದು.

ಉದಾಹರಣೆ

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟ ಪದ | ವಾರ್ಗಿಕ ಪದ |
|---|---|---|---|
| ತಮ್ಮಡಿ ಜಡೇಗೌಡ | ತಮ್ಮಡಿ | ಜಡೇ | ಗೌಡ |
| ತಮ್ಮಡಿ ಬಸವೇಗೌಡ | ತಮ್ಮಡಿ | ಬಸವೇ | ಗೌಡ |
| ತಮ್ಮಡಿ ನಂಜೇಗೌಡ | ತಮ್ಮಡಿ | ನಂಜೇ | ಗೌಡ |
| ತಮ್ಮಡಿ ಕಾರೇಗೌಡ | ತಮ್ಮಡಿ | ಕಾರೇ | ಗೌಡ |

ಈ ರೀತಿಯಲ್ಲಿ ವೃತ್ತಿಸೂಚಕ ಪದಗಳನ್ನು ಕಾಣಬಹುದಾಗಿದೆ. ಕಾಡುವಾಸಿಗಳಾದ ಸೋಲಿಗರು ಸ್ವಚ್ಛಂದವಾಗಿ ಬದುಕಲು ಇಷ್ಟಪಡುತ್ತಾರೆ. ಇವರು ಹಿಂದೆ ಪ್ರತಿಯೊಂದು

ಪೋಡುಗಳಲ್ಲಿ ಕನಿಷ್ಟ ೧೦ ರಿಂದ ೧೫ ಕುಟುಂಬಗಳು ವಾಸ ಮಾಡುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಅರಣ್ಯ ಇಲಾಖೆಯ ಕಟ್ಟುನಿಟ್ಟಿನ ಕ್ರಮದಿಂದಾಗಿ ಕಾಡಿನಲ್ಲಿರುವ ಸೋಲಿಗರನ್ನು ನಗರದ ಹತ್ತಿರಕ್ಕೆ ಸ್ಥಳಾಂತರಿಸಿದ್ದಾರೆ. ಇದರ ಹಿನ್ನಲೆಯಲ್ಲಿ ಸೋಲಿಗರ ವಲಸೆ ಬಂದ ಹಾಗೂ ಅವರು ಮೊದಲಿಗೆ ಪೋಡುಗಳನ್ನು ಗುರುತಿಸಿಕೊಳ್ಳುವ ಸಲುವಾಗಿ ಆ ಜಾಗಗಳ ಹೆಸರನ್ನು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪರಿಪಾಠವನ್ನು ಬೆಳೆಸಿಕೊಂಡಿದ್ದಾರೆ.

ಉದಾಹರಣೆ :

| ವ್ಯಕ್ತಿನಾಮಗಳು | ಸ್ಥಳ | ನಿರ್ದಿಷ್ಟ ಪದ | ವಾರ್ಗಿಕ ಪದ |
|---|---|---|---|
| ಗುಡಿಯಟ್ಟಿ ಜಡೇಗೌಡ | ಗುಡಿಯಟ್ಟಿ | ಜಡೇ | ಗೌಡ |
| ನಿಂಬೆ ಬಾವಿ ರಂಗೇಗೌಡ | ನಿಂಬೆ ಬಾವಿ | ರಂಗೇ | ಗೌಡ |
| ಬಂಗ್ಲೇ ರಂಗೇಗೌಡ | ಬಂಗ್ಲೇ ಪೊಡು | ರಂಗೇ | ಗೌಡ |
| ಪುರಾಣಿ ಕೇತೇಗೌಡ | ಪುರಾಣಿ | ಕೇತೇ | ಗೌಡ |
| ಗುಣಹಳ್ಳಿರಂಗೇಗೌಡ | ಗುಣಹಳ್ಳಿ | ರಂಗೇ | ಗೌಡ |

**ದೈಹಿಕ ನ್ಯೂನತೆ ಮತ್ತಿತರ ವೈಶಿಷ್ಟ್ಯಗಳ ಮೂಲದ ವ್ಯಕ್ತಿನಾಮಗಳು**

ಸೋಲಿಗರು ಮೂಲತಃ ಕಾಡುವಾಸಿ ಜನಗಳು ದೈಹಿಕ ಲಕ್ಷಣಗಳೇ ವಿಶಿಷ್ಟವಾಗಿದ್ದು, ಗುಂಗುರು ಕೂದಲು, ಚಪ್ಪಟ್ಟೆ ಮೂಗು, ಕಡಿಮೆ ಎತ್ತರವುಳ್ಳವರಾಗಿದ್ದಾರೆ. ಈ ಹಿನ್ನೆಲೆಯಲ್ಲಿಯೂ ಅವರನ್ನು ಗುರುತಿಸಬಹುದು. ಹಾಗೆಯೇ ಸೋಲಿಗರ ಮುಖ್ಯವಾದ ಕಸುಬು ಜೇನು ಎಳೆಯುವುದು ಒಂದಾಗಿದೆ. ದೊಡ್ಡ ದೊಡ್ಡ ಮರಗಳಲ್ಲಿರುವ ಜೇನನ್ನು ಎಳೆಯುವ ಸಂದರ್ಭದಲ್ಲಿ ಆಯಾ ತಪ್ಪಿ ಮರದಿಂದ ಬಿದ್ದ ಎಷ್ಟೋ ಸಂದರ್ಭಗಳು ಸೋಲಿಗರಲ್ಲಿವೆ. ಅಂತಹ ಸಂದರ್ಭದಲ್ಲಿ ಸೋಲಿಗರಿಗೆ ಕೈಕಾಲು, ದೇಹದ ಭಾಗಗಳು ಊನವಾಗಿರುತ್ತವೆ. ಇವುಗಳನ್ನೇ ಇಟ್ಟುಕೊಂಡು ಹೆಸರನ್ನು ಸೂಚಿಸುವುದನ್ನು ಕಾಣಬಹುದು.

ಉದಾಹರಣೆ

| ವ್ಯಕ್ತಿನಾಮಗಳು | ಲಕ್ಷಣ | ನಿರ್ದಿಷ್ಟ | ವಾರ್ಗಿಕ |
|---|---|---|---|
| ಕುಂಟ ದಾಸೇಗೌಡ | ಕುಂಟ | ದಾಸೇ | ಗೌಡ |
| ಗಿಡ್ಡ ಸಿದ್ದೇಗೌಡ | ಗಿಡ್ಡ | ಸಿದ್ದೇ | ಗೌಡ |
| ಕರಿ ಮಾದೇಗೌಡ | ಕರಿ | ಮಾದೇ | ಗೌಡ |
| ಸೊಟ್ಟ ನಿಂಗೇಗೌಡ | ಸೊಟ್ಟ | ನಿಂಗೇ | ಗೌಡ |
| ಎಡಚನಮಾದೇಗೌಡ | ಎಡಚ | ಮಾದೇ | ಗೌಡ |

| | | | |
|---|---|---|---|
| ಕುಳ್ಳದಕೇತೆಗೌಡ | ಕುಳ್ಳದ | ಕೇತೆ | ಗೌಡ |
| ಕೆಂಪಿಜಡೇಗೌಡ | ಕೆಂಪಿ | ಜಡೇ | ಗೌಡ |
| ಸಣ್ಣಿ ರಂಗೇಗೌಡ | ಸಣ್ಣ | ರಂಗೇ | ಗೌಡ |
| ಹೊಟ್ಟೆಸಿದ್ದೇಗೌಡ | ಹೊಟ್ಟೆ | ಸಿದ್ದೇ | ಗೌಡ |
| ಕುರುಡದಾಸೇಗೌಡ | ಕುರುಡ | ದಾಸೇ | ಗೌಡ |

ಹಾಗೆಯೇ ಸೋಲಿಗರ ಹೆಸರುಗಳಲ್ಲಿ ಪ್ರಾಣಿ ಪಕ್ಷಿಗಳ ಹೆಸರಿನ ಮೇಲೆ ಹೆಸರುಗಳು ಇರುವುದನ್ನು ಕಾಣಬಹುದು. ಇವರು ಕಾಡಿನಲ್ಲಿರುವ ಪೋಡುಗಳಿಗೆ ಆನೆಗಳು ಅಥವಾ ಯಾವುದೇ ಕ್ರೂರ ಪ್ರಾಣಿಗಳು ನುಗ್ಗಿದ ಸಂದರ್ಭದಲ್ಲಿ ಅವುಗಳನ್ನು ಚದುರಿಸುವ ನಿಪುಣರಾಗಿದ್ದರು. ಈ ಉದ್ದೇಶದಿಂದಾಗಿ ಆಯಾ ಪ್ರಾಣಿ ಪಕ್ಷಿಗಳ ಕೂಗನ್ನು ಕೂಡ ಅನುಕರಣೆ ಮಾಡುತ್ತಿದ್ದರು. ಈ ಉದ್ದೇಶದಿಂದಾಗಿ ಆಯಾ ಪ್ರಾಣಿಗಳ ಹೆಸರಿನ ಮೂಲಕವೇ ಅವರ ಹೆಸರುಗಳು ಇರುವುದನ್ನು ಕಾಣುತ್ತೇವೆ.

ಉದಾಹರಣೆ ;

| ವ್ಯಕ್ತಿನಾಮಗಳು | ಪ್ರಾಣಿ/ಪಕ್ಷಿ | ನಿರ್ದಿಷ್ಟ ಪದ | ವಾರ್ಗಿಕ ಪದ |
|---|---|---|---|
| ಆನೆ ಬೋಮ್ಮೆಗೌಡ | ಆನೆ | ಬೋಮ್ಮೆ | ಗೌಡ |
| ಕಪಿ ನಂಜೇಗೌಡ | ಕಪಿ | ನಂಜೇ | ಗೌಡ |
| ಹಾವು ಹನುಮೇಗೌಡ | ಹಾವು | ಹನುಮೇ | ಗೌಡ |
| ಗೂಬೆ ರಂಗೇಗೌಡ | ಗೂಬೆ | ರಂಗೇ | ಗೌಡ |
| ಕಾಡನ ಸಿದ್ದೇಗೌಡ | ಕಾಡನ | ಸಿದ್ದೇ | ಗೌಡ |

ಹೀಗೆ ಸೋಲಿಗರು ತಮ್ಮ ಹೆಸರುಗಳ ಜೊತೆಯಲ್ಲಿ ಪ್ರಾಣಿ ಪಕ್ಷಿಗಳ ಹೆಸರುಗಳನ್ನು ಇಟ್ಟುಕೊಂಡಿರುವುದು ವಿಶೇಷ.

ಸೋಲಿಗ ಸಮುದಾಯದ ಸ್ತ್ರೀಯರ ಹೆಸರುಗಳನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ಸೋಲಿಗ ದೇವತೆಗಳ ಹೆಸರುಗಳನ್ನು ಇಟ್ಟು ನಾಮಕರಣ ಮಾಡಿರುವುದು ಕಾಣಬಹುದು. ಆದರೆ ಪುರುಷರಿಗೆ ನಾಮಕರಣ ಮಾಡುವ ಹಾಗೆ ಅಂದರೆ "ಗೌಡ" ಅಥವಾ ಪ್ರಾಣಿ ಲಕ್ಷಣ ಈ ತರಹದ ರೀತಿಯಲ್ಲಿ ಸ್ತ್ರೀಯರಿಗೆ ನಾಮಕರಣ ಮಾಡಿಲ್ಲ. ಏಕೆಂದರೆ ಈ ಪದಗಳು ನಿರ್ದಿಷ್ಟವಾದ ಕೆಲಸವನ್ನು ಗುರುತಿಸುವಂತಹವುಗಳಾಗಿವೆ. ಮೇಲಿನ ವಾರ್ಗಿಕ ಪದಗಳು ಪುರುಷನಿಗೆ ಮಾತ್ರ ಮೀಸಲಾಗಿದೆ. ಈ ದೃಷ್ಟಿಯಿಂದ ಮಹಿಳೆಯರಿಗೆ ಎಲ್ಲೂ ಕೂಡ ವಾರ್ಗಿಕ ಪದವನ್ನು ಇಟ್ಟು ನಾಮಕರಣ ಮಾಡಿಲ್ಲ ಎಂದು ಹೇಳಬಹುದು. ಕೆಳಗಿನ ಎಲ್ಲವೂ ಕೂಡ ಸೋಲಿಗ ದೇವರುಗಳು ಆಗಿವೆ. ಈ ಹಿನ್ನೆಲೆಯಲ್ಲಿ ಸ್ತ್ರೀಯರನ್ನು ಸೋಲಿಗ ಸಮುದಾಯದವರೆಂದು ಗುರುತಿಸಬಹುದಾಗಿದೆ.

ಉದಾಹರಣೆ :

ಕೇತಮ್ಮ

ಸಿದ್ದಮ್ಮ,

ಜಡೇಮಾದಿ,

ನಂಜಮ್ಮ,

ಚನ್ನಂಜಮ್ಮ,

ಪಂದಮ್ಮ,

ರಂಗಮ್ಮ,

ಬಸಮ್ಮ

ಬೇದಮ್ಮ,

ಮಸಣಮ್ಮ,

ದ್ಯೆತಮ್ಮ,

ವಿದಿಯಮ್ಮ,

ಆಲುಮಲೆ,

ನಾಗಮಲೆ

ಹೀಗೆ ದೈವದ ಹೆಸರುಗಳನ್ನು ಇಟ್ಟುಕೊಂಡಿರುವುದು ಕಂಡುಬರುತ್ತದೆ. ಸೋಲಿಗ ಸಮುದಾಯದಲ್ಲಿ ಮೊದಲ ತಲೆಮಾರಿನಲ್ಲಿ ಮಹಿಳೆಯರ ಹೆಸರುಗಳು ಉಲ್ಲೇಖವಾಗಿರುವುದು ಕಾಣಬಹುದು ನಂತರದಲ್ಲಿ ಈ ಹೆಸರುಗಳು ಕೆಲವರ ಮಟ್ಟಿಗೆ ಬದಲಾವಣೆಯಾಗುತ್ತಿರುವುದನ್ನು ಕಂಡುಬರುತ್ತದೆ.

ಸಮುದಾಯದಲ್ಲಿನ ಹೆಸರುಗಳಿಗಿಂತ ವಿಭಿನ್ನವಾಗಿ ಇಟ್ಟು ಕೊಳ್ಳುತ್ತಿರುವುದು ಕಂಡುಬರುತ್ತದೆ. ತಲೆಮಾರಿನಿಂದ ತಲೆಮಾರಿಗೆ ವ್ಯಕ್ತಿನಾಮಗಳು ಬದಲಾವಣೆ ಹೊಂದುತ್ತಿರುವುದನ್ನು ನಾವು ಇಲ್ಲಿ ಕಾಣಬಹುದಾಗಿದೆ.

**ಆಧುನಿಕ ಸಂದರ್ಭ**

ಪ್ರಸ್ತುತ ಸಂದರ್ಭದಲ್ಲಿ ಇಂದು ಅನೇಕ ಕಾರಣಗಳಿಂದ ವ್ಯಕ್ತಿನಾಮಗಳು ಬದಲಾವಣೆಗೆ ಒಳಗಾಗುತ್ತಿವೆ. ಅದು ಕೂಡ ಅವಶ್ಯಕವಾಗಿರುತ್ತದೆ. ವ್ಯಕ್ತಿಯು ವಾಸಿಸುವ ಸಮುದಾಯ ಆಧುನಿಕರಣಗೊಂಡಂತೆ ವ್ಯಕ್ತಿನಾಮಗಳು ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತದೆ.

ಒಟ್ಟಾರೆ ವ್ಯಕ್ತಿನಾಮಗಳ ಚಾರಿತ್ರೆಯನ್ನು ಅಧ್ಯಯನ ಮಾಡಿದಾಗ ಕಂಡುಬರುವ ಅಂಶವೆಂದರೆ ಹೇಗೆ ತಲೆಮಾರಿನಿಂದ ತಲೆಮಾರಿಗೆ ವ್ಯಕ್ತಿನಾಮಗಳು ಬದಲಾವಣೆಯನ್ನು ಹೊಂದುತ್ತಿವೆ. ಎಂಬುದನ್ನು ಸೋಲಿಗ ಸಮುದಾಯದಲ್ಲಿ ನೋಡಬಹುದು.

| ಮೊದಲನೆ ತಲೆಮಾರು | ಎರಡನೇ ತಲೆಮಾರು | ಮೂರನೇ ತಲೆಮಾರು |
|---|---|---|
| ಕೇತೆಗೌಡ | ಜಡೇಯ | ದರ್ಶನ್ |
| ಮಾದೇಗೌಡ | ಬಸವರಾಜು | ಭಗತ್ |
| ರಂಗೇಗೌಡ | ವಿಜಯ್ ಕುಮಾರ | ಲೋಕೇಶ |
| ಬಿಳಿಗಿರಿನಂಜೇಗೌಡ | ನಂಜೇಗೌಡ | ನಂಜುಂಡ |
| ಜೋಗಿರಂಗೇಗೌಡ | ರಂಗೇಗೌಡ | ರಂಗಸ್ವಾಮಿ |
| ಕಾಡನಜಡೇಗೌಡ | ಸಿದ್ದರಾಜು | ಸಂದೇಶ್ |
| ದೆಡಿಯನಮಾದೇಗೌಡ | ಮಾದೇಶ | ಮಾದವ |
| ಕವಾಡಿರಂಗೇಗೌಡ | ದೊಡ್ಡರಂಗ | ರಘು |
| ಚಾರಿಕೇತೆಗೌಡ | ಮಾದೇವ | ಚಂದ್ರು |
| ಮೆಟ್ಟಣ್ಣೆ ಜಡೇಗೌಡ | ಬೋರ | ಕೇಶವ |
| ಕಾನ್ ಕಾಯಿ ರಂಗೇಗೌಡ | ವೀರಗೌಡ | ಮೋಹನ್ |
| ಕಲ್ಲಿಮುತ್ತೇಗೌಡ | ರಾಮೇಗೌಡ | ಮಹೇಶ್ |
| ಮರಿಯನಕೇತೆಗೌಡ | ಬಸವ | ಶಿವರಾಜ್ |
| ಕಾನ್ ರಂಗೇಗೌಡ | ಬೇದೆಗೌಡ | ಗೋವಿಂದ |
| ಜಲ್ಲೆ ಮಂದೇಗೌಡ | ಚಿಕ್ಕದಾಸೇಗೌಡ | ದರ್ಶನ್ |
| ರಾಮಿಮಾದೇಗೌಡ | ಸಿದ್ದೇಗೌಡ | ಸತೀಶ್ |
| ತಮ್ಮಡಿ ಜಡೇಗೌಡ | ಜಡೇಯ | ಕುಮಾರ್ |
| ಕೇತಮ್ಮ | ರಂಗಮ್ಮ | ಸುಷ್ಮ |
| ದೇತಮ್ಮ | ಮಾದಮ್ಮ | ನಂದಿನಿ |
| ಪಂದಮ್ಮ | ಈರಮ್ಮ | ಜ್ಯೋತಿ |
| ವೀರಮ್ಮ | ಗಾಯಿತ್ರಿ | ಶಿಲ್ಪ |
| ಮಾಸ್ತಮ್ಮ | ಲಕ್ಷಮ್ಮ | ಲಕ್ಷ್ಮಿ |
| ಮಸಣಮ್ಮ | ನಾಗಮ್ಮ | ಅನಿತ |
| ಸಿದ್ದಮ್ಮ | ಪುಟ್ಟಮ್ಮ | ಶೃತಿ |
| ಹಲಗಮ್ಮ | ಭಾಗ್ಯ | ಭುವನ |
| ಬಸಮ್ಮ | ರಾಜಮ್ಮ | ಶ್ಯಾಮಿನಿ |

| | | |
|---|---|---|
| ಶಿವನಮ್ಮ | ಶಿವಮ್ಮ | ರಜನಿ |
| ರಂಗಮ್ಮ | ಶಾಂತಿ | ಶೋಭಾ |
| ಜಡೆಮಾದಮ್ಮ | ಮಾದೇವಿ | ಮಧು |
| ಜಡೆಮಾದಿ | ಪುಟ್ಟಿ | ಸ್ವಾತಿ |
| ದಯತಮ್ಮ | ಹಾಲಮ್ಮ | ಅರ್ಪಿತ |
| ನಂಜಮ್ಮ | ಮಹಾದೇವಮ್ಮ | ಮಂಜುಳ |

**ವೃತ್ತಿವಾಚಿಗಳು**

ಸೋಲಿಗ ಸಮುದಾಯದ ಕುಲದಲ್ಲಿ ಮಾಡುವ ವೃತ್ತಿ ಒಂದು ಕಡೆಯಾದರೆ. ಮತ್ತೆ ಅವರು ಜೀವನ ನಿರ್ವಹಣೆಗಾಗಿ ಮಾಡುವ ವೃತ್ತಿಗೆ ಅನುಗುಣವಾಗಿ ಪುರುಷ ನಾಮಗಳನ್ನು ಸೋಲಿಗ ಸಮುದಾಯದಲ್ಲಿ ನೋಡಬಹುದಾಗಿದೆ.

| ವ್ಯಕ್ತಿನಾಮಗಳು | ವೃತ್ತಿ | ನಿರ್ದಿಷ್ಟ ಪದ | ವಾರ್ಗಿಕ ಪದ |
|---|---|---|---|
| ಟೈಲರ್ ಜಡೆಯಪ್ಪ | ಟೈಲರ್ | ಜಡೇ | ಅಪ್ಪ |
| ಬೇಕರಿ | ಬೇಕರಿ | ನಂಜೇಗೌಡ | ನಂಜೇಗೌಡ |
| ಬಳೇ ಜಡೇಗೌಡ | ಬಳೇ | ಜಡೇ | ಗೌಡ |
| ಸೋಸೈಟಿ ಜಡೇಗೌಡ | ಸೊಸೈಟಿ | ಜಡೇ | ಗೌಡ |
| ಟೈಲರ್ ಜಡೇಗೌಡ | ಟೈಲರ್ | ಜಡೇ | ಗೌಡ |

ಈ ರೀತಿಯಾಗಿ ವೃತ್ತಿಸೂಚಕ ಪದಗಳನ್ನು ನಾವು ಸೋಲಿಗರಲ್ಲಿ ಮೊದಲನೇ ತಲೆಮಾರಿನಲ್ಲಿ ಕಡಿಮೆ ಇದ್ದು. ಎರಡನೇ ತಲೆಮಾರು ೫೫ ರಿಂದ ೩೬ ವರ್ಷದ ಯಶಸ್ಸಿನಲ್ಲಿ ಈ ರೀತಿ ವೃತ್ತಿಸೂಚಕಗಳನ್ನು ನೋಡಬಹುದಾಗಿದೆ.

ಸೋಲಿಗರಲ್ಲಿ ಕೆಲವರು ಅಜ್ಜ, ಅಜ್ಜಿಯರ ಹೆಸರುಗಳನ್ನು ಎರಡನೇ ತಲೆಮಾರಿನಲ್ಲಿ ಪುನಾರವರ್ತನೆಯಾಗುತ್ತಿತ್ತು ಅದರ ಜೊತೆಗೆ ಸೋಲಿಗರು ಹಿಂದೆಲ್ಲ ಕಟ್ಟುತ್ತಿದ್ದ ಬಹುಪಾಲು ಹೆಸರುಗಳು ದೈವ ಮೂಲದವೇ ಆಗಿರುತ್ತಿದ್ದವು. ಆದ್ದರಿಂದ ಮತ್ತೆ ಅದೇ ದೈವದ ಹೆಸರುಗಳನ್ನು ಮುಂದಿನ ಪೀಳಿಗೆಯ ಮಕ್ಕಳಿಗೂ ಇಡುವುದರ ಮೂಲಕ ಪುನಸ್ಮರಣೆ ಮಾಡುವ ಸಂಪ್ರದಾಯ ಭಾರತೀಯರಲ್ಲಿದೆ. ಹೀಗೆ ಮನುಷ್ಯನ ಅವಿಭಾಜ್ಯ ಅಂಗವಾಗಿರುವ ವ್ಯಕ್ತಿನಾಮಗಳು ಬದಲಾವಣೆಯಾಗಿರುವುದು ಕಂಡುಬರುತ್ತದೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರಗಳಿಂದ ಸೋಲಿಗರು ಮೂರನೇ ತಲೆಮಾರಿನಲ್ಲಿ ಪಾರಂಪರಿಕ ಹೆಸರುಗಳಿಂದ ಭಿನ್ನವಾದ ಹೊಸ ಹೆಸರುಗಳತ್ತಾ ಸ್ತ್ರೀ ಪುರುಷ ವ್ಯಕ್ತಿನಾಮಗಳನ್ನು ಇಟ್ಟುಕೊಳ್ಳುತ್ತಿರುವುದು ಕಂಡುಬರುತ್ತದೆ.

ನವ ನವೀನ ಹೆಸರುಗಳನ್ನು ಇತ್ತೀಚಿನ ಪುರುಷ ಮತ್ತು ಸ್ತ್ರೀ ವಿದ್ಯಾವಂತ ಸಮುದಾಯದಲ್ಲಿ ಕಾಣುತ್ತೇವೆ. ಹಾಗೆಯೇ ಇತ್ತೀಚಿನ ವಯೋಮಾನದವರಲ್ಲಿ ಅಂದರೆ ನಗರ ಹಾಗೂ ಪಟ್ಟಣ ಪ್ರದೇಶಗಳಿಗೆ ಹೋದಂತಹ ಸೋಲಿಗ ಸಮುದಾಯ ಬದಲಾವಣೆಗೊಳ್ಳುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಕೆಲವು ಪೋಡುಗಳಲ್ಲಿನ ಸೋಲಿಗ ಸಮುದಾಯದ ಇತ್ತೀಚಿನ ದಿನಗಳಲ್ಲಿ ತನ್ನ ಹಳೆಯ ತಲೆಮಾರಿನ ಸಾಂಪ್ರದಾಯಿಕತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಸ್ತ್ರೀ ಮತ್ತು ಪುರುಷ ವ್ಯಕ್ತಿನಾಮಗಳು ಮತ್ತೆ ಬದಲಾವಣೆ ಆಗುತ್ತಿರುವುದನ್ನು ಕಾಣುತ್ತೇವೆ.

ಸ್ತ್ರೀ ಲಿಂಗವನ್ನು ಸೂಚಿಸುವ ವ್ಯಕ್ತಿನಾಮಗಳು ಸ್ತ್ರೀನಾಮಗಳಾಗುತ್ತಿವೆ. ಸೋಲಿಗರ ಸ್ತ್ರೀನಾಮಗಳು ವಿಭಿನ್ನ ತಲೆಮಾರುಗಳನ್ನು ಭಿನ್ನವಾಗಿರುವುದು ಕಂಡುಬರುತ್ತದೆ. ಮೊದಲನೆಯ ತಲೆಮಾರಿನಲ್ಲಿ ಅಂದರೆ ಸುಮಾರು ೫೫ ವರ್ಷಗಳಿಂದ ೭೫ ವರ್ಷ ವಯಸ್ಸಿನ ಸ್ತ್ರೀಯರಲ್ಲಿ ಈ ರೀತಿಯ ಹೆಸರುಗಳನ್ನು ಕಾಣಬಹುದಾಗಿದೆ.

ಉದಾ:

ಕೇತಮ್ಮ,
ಸಿದ್ದಮ್ಮ,
ಜಡೇಮಾದಿ,
ಜಡೇಮಾದಮ್ಮ,
ರಂಗಮ್ಮ, ನಂಜಮ್ಮ,
ಚನ್ನಂಜಮ್ಮ,
ಚಾರಿಬಸಮ್ಮ,
ವಿದಿಯಮ್ಮ,
ಅಲುಮಲೆ,
ನಾಗಮಲೆ.
ಪಂದಮ್ಮ,
ಬೇದಮ್ಮ,
ತೊಳಸಮ್ಮ,
ಮುತ್ತಮ್ಮ,
ಮಾರಮ್ಮ,
ಮಸಣಮ್ಮ,
ಚಾರಿಬಸಮ್ಮ,
ಮುತ್ತಮಾಸ್ತಮ್ಮ,

ಈ ರೀತಿ ಸ್ತ್ರೀನಾಮಗಳು ತಲೆಮಾರಿಗಳಲ್ಲಿ ಕಂಡುಬರುತ್ತದೆ. ಹಾಗೆಯೇ ಸುಮಾರು ೩೫ ರಿಂದ ೫೪ ವಯಸ್ಸಿನ ಎರಡನೇಯ ತಲೆಮಾರಿನ ಸ್ತ್ರೀ ನಾಮಗಳಲ್ಲಿ ಸ್ವಲ್ಪ ಬದಲಾವಣೆ ಕಂಡರೂ ನಾಗರೀಕತೆಯ ಸ್ಪಷ್ಟತೆಯಿಂದ ಭಾಷಾ ಸ್ವರೂಪವು ಬದಲಾವಣೆಗೊಂಡಂತೆ ನಾಮಗಳಲ್ಲಿ ಬದಲಾವಣೆಗೊಂಡಿದೆ.

ಮಾಸ್ತಮ್ಮ,
ತಾಯಮ್ಮ,
ರುದ್ರಮ್ಮ,
ವಿಜಯಮ್ಮ,
ಜಯಮ್ಮ,
ಮಾದೇವಿ,
ಮಾದೇಮ್ಮ,
ಭಾಗ್ಯ,
ಮಾದೇವಿ
ಪಾರ್ವತಿ,
ಪುಟ್ಟಮ್ಮ ಇತ್ಯಾದಿ.

ಆಧುನಿಕತೆಯ ಪ್ರಭಾವ ಸೋಲಿಗ ಸಮುದಾಯದ ಮೇಲಾಗಿ ಅದರ ಪರಿಣಾಮ ಇವರ ವ್ಯಕ್ತಿನಾಮಗಳ ಮೇಲೂ ಉಂಟಾಗಿರುವುದನ್ನು ಗುರ್ತಿಸಬಹುದು. ಅಂದರೆ ಆಧುನಿಕತೆಯ ಪ್ರಭಾವದಿಂದ ಇಂದಿನ ವ್ಯಕ್ತಿನಾಮಗಳ ಬಹುಪಾಲು ಭಾವನಾಮಗಳಿಂದ ಕೂಡಿದ್ದು, ಈ ವ್ಯಕ್ತಿನಾಮಗಳಿಗೆ ಯಾವುದೇ ದೈವದ ಪ್ರಭಾವವಾಗಲಿ, ಯಾವುದೇ ವೃತ್ತಿ, ಜಾತಿಯ ಪ್ರಭಾವವಾಗಲೀ ಅಥವಾ ಯಾವ ಹಿರಿಯರ ಪ್ರಭಾವವಾಗಲಿ ಕಾರಣವಾಗಿರುವುದಿಲ್ಲ. ಇಂದಿನ ಬಹುಪಾಲು ಹೆಸರುಗಳಲ್ಲಿ ವಾರ್ಗಿಕಗಳು ಮರೆಯಾಗುವುದರ ಜೊತೆಗೆ ಯಾವುದೇ ವಿಶೇಷಣಗಳು ಕಂಡುಬರುವುದಿಲ್ಲ. ಬದಲಾಗಿ ಕೇವಲ ಭಾವನೆಗಳ ಪ್ರತಿನಿಧಿಯಾಗಿರುವುದನು ತಿಳಿಯಬಹುದಾಗಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ. ಹೊಸ ತಲೆಮಾರಿನ ಸೋಲಿಗ ಸಮುದಾಯದಲ್ಲಿ ಅಕ್ಷರಸ್ಥರಾಗುತ್ತಿರುವುದು ಮತ್ತು ನಗರ ಜೀವನದ ಕಡೆ ಹೊಂದಿಕೊಳ್ಳುತ್ತಿರುವುದು. ಆಧುನಿಕರಣದ ಪ್ರಭಾವ ಮತ್ತು ಸಂವಹನ ಮಾಧ್ಯಮಗಳ ಬಳಕೆಯ ಪ್ರಭಾವದಿಂದ ಸ್ಥಳೀಯರೊಡನೆ ಸಂಪರ್ಕಗೊಂಡಿರುವುದರಿಂದ ಸೋಲಿಗ ಸಮುದಾಯದಲ್ಲಿ ಭಾವನಾಮ ವ್ಯಕ್ತಿನಾಮಗಳು ಕಿವಿಗೆ ಕೇಳಲು ಹಿತವಾಗಿರಬೇಕು ಹಾಗೂ ಸುಂದರವಾಗಿರಬೇಕು ಕೇಳುಗರಿಗೆ ಆಕರ್ಷಿತವಾಗಿರಬೇಕು ಎನ್ನುವ ದೃಷ್ಟಿಯಿಂದ ಬದಲಾವಣೆಗೊಳಗಾಗುತ್ತಿರುವುದನ್ನು ಕಾಣಬಹುದಾಗಿದೆ.

ದರ್ಶನ್
ಭಾಗ್ಯ
ಶ್ರಾವಣಿ
ಶೃತಿ
ಅಮೃತ
ಸುಲೋಚನ
ಕಮಲ
ಜ್ಯೋತಿ
ರಾಧ
ಪೃಥ್ವಿ
ಗಣೇಶ್
ಮಣಿಕಂಠ
ರಮೇಶ್
ಕುಮಾರ್
ರಾಜೇಶ್
ರುಕ್ಮಿಣಿ
ಪದ್ಮ
ಲಾವಣ್ಯ
ನಾಗರಾಜ್
ಕಾವ್ಯ
ಸುಕನ್ಯ
ಜಗದೀಶ
ರಾಘವೇಂದ್ರ
ಭರತ
ಭಾಗ್ಯ
ಚಂದನ
ರಾಧ

ಇನ್ನೂ ಮುಂತಾದ ಹೆಸರುಗಳನ್ನು ಹೊಸ ತಲೆಮಾರಿನವರಲ್ಲಿ ಕಾಣಬಹುದಾಗಿದೆ. ಸೋಲಿಗ ಸಮುದಾಯದಲ್ಲಿ ವ್ಯಕ್ತಿನಾಮಗಳ ಸ್ವರೂಪವನ್ನು ಗಮನಿಸಿದಾಗ ಮೊದಲನೇ ತಲೆಮಾರಿನಲ್ಲಿ ಸೋಲಿಗ ಸಮುದಾಯವನ್ನು ಪ್ರತಿನಿಧೀಕರಿಸುವ ವ್ಯಕ್ತಿನಾಮಗಳು ಕಂಡುಬಂದರೂ ಎರಡನೇ ತಲೆಮಾರಿನಲ್ಲಿಯೂ ಸಹ ಕಂಡುಬರುತ್ತದೆ. ಆದರೆ ಮೂರನೇ ತಲೆಮಾರಿನಲ್ಲಿ ಆಧುನಿಕರಣ ಮತ್ತು ನಗರೀಕರಣದ ಪ್ರಭಾವದಿಂದಾಗಿ ಬದಲಾವಣೆ ಕಂಡುಬಂದಿದೆ.

## ಕೊನೆಟಿಪ್ಪಣಿಗಳು

೧. ಶೇಖರಾಚಾರಿ. ಕೆ ೨೦೧೩, ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ, ಪುಟ ೮೦

೨ ಅದೇ ಪುಟ ೮೧

೩. ಅದೇ ಪುಟ ೯೬

೪ ನಂಜಯ್ಯ ಹೊಂಗನೂರು೨೦೦೯ ಸ್ಥಳನಾಮಗಳು ಪುಟ ಸಂಖ್ಯೆ ೪

೫ ಸಿ.ಪಿ. ಲಾವಣ್ಯ ೨೦೧೫, ಗೌಡಕನ್ನಡ ಭಾಷಿಕ ನೆಲೆಗಳು ಪುಟ ೬೫

೬ ಅದೇ ಪುಟ ೧೪೪

# ಅಧ್ಯಾಯ–ನಾಲ್ಕು

# ಆಚರಣೆ ಮತ್ತು ಸಂಪ್ರದಾಯಗಳು

4.1 ಜನನ

4.2. ನಾಮಕರಣ

4.3. ಋತುಮತಿ

4.4. ವಿವಾಹ
- 4.4.1. ಅಪಹರಣ ವಿವಾಹ
- 4.4.2. ವಿಧವಾ ವಿವಾಹ
- 4.4.3. ಹಿರಿಯರು ನಿಶ್ಚಯಿಸಿದ ವಿವಾಹ
- 4.4.4. ವಿವಾಹ ವಿಚ್ಛೇಧನ

4.5. ಶವಸಂಸ್ಕಾರ

4.6. ಹಬ್ಬಗಳು
- 4.6.1. ಹೊಸರಾಗಿ ಹಬ್ಬ
- 4.6.2. ರೊಟ್ಟಿ ಹಬ್ಬ
- 4.6.3. ಮಾರಿ ಹಬ್ಬ
- 4.6.4. ಸುಂಕಮ್ಮನ ಹಬ್ಬ

4.7. ಜಾತ್ರೆ

4.8. ನಂಬಿಕೆಗಳು

4.9. ದೈವಗಳು

# ಅಧ್ಯಾಯ-ನಾಲ್ಕು

## ಆಚರಣೆ ಮತ್ತು ಸಂಪ್ರದಾಯಗಳು

ಪ್ರತಿಯೊಂದು ಸಮುದಾಯವು ತಾನು ವಾಸಿಸುತ್ತಿರುವ ಪರಿಸರಕ್ಕೆ ಹೊಂದಿಕೊಂಡಿರುತ್ತದೆ. ಅಲ್ಲದೆ ಹುಟ್ಟಿನಿಂದ ಸಾಯುವ ತನಕ ತನ್ನ ಪರಿಸರದಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ಬದುಕುತ್ತಾ ತನ್ನ ಜೀವನವನ್ನು ಹೊಂದಣಿಕೆ ಮಾಡಿಕೊಂಡು ಬದುಕನ್ನು ಸಾಗಿಸುತ್ತಿರುತ್ತಾನೆ. ತನ್ನ ಜೀವನದ ದಿನನಿತ್ಯದ ಬದುಕಿನಲ್ಲಿ ಹೊಸ ಹೊಸ ಮಾರ್ಪಾಡುಗಳನ್ನು ಮಾಡಿಕೊಂಡು ಪರಿಸರಕ್ಕೆ ತಕ್ಕಂತೆ ಹೊಂದಾಣಿಕೆಯ ಬದುಕನ್ನು ಕಟ್ಟಿಕೊಂಡಿರುವನು. ತಮ್ಮ ಜೀವನದ ಬದುಕಿನಲ್ಲಿ ಉತ್ತಮ ಶಾಂತಿ ಸಮೃದ್ಧಿಯನ್ನು ಪಡೆಯುವುದಕ್ಕಾಗಿ. ನೈಸರ್ಗಿಕ ಶಕ್ತಿಯನ್ನು ವೃದ್ಧಿಗೊಳಿಸುವ ಸಲುವಾಗಿ ಅನೇಕ ವಿಧವಾದ ಮಾರ್ಪಾಡು ಮಾಡಿಕೊಂಡಿರುತ್ತಾನೆ. ನಿಸರ್ಗದೊಡನೆ ಗೆಳೆತನ ಬೆಳೆಸುವ ಉದ್ದೇಶದಿಂದ ಪೂಜೆ, ಆರಾಧನೆ, ಅರ್ಪಣೆ ಮುಂತಾದವುಗಳನ್ನು ಆಚರಿಸುತ್ತಾ ಬಂದಿದ್ದಾರೆ. ಹಾಗೆಯೇ ಮನುಷ್ಯನ ಜೀವನದ ಹಂತಗಳಾದ ಜನನ, ಮರಣ, ಜವುಳ, ಮುಂಜಿ, ವಸಗೆ, ಮದುವೆ ಸೀಮಂತ ಹಾಗೂ ಸಂಸ್ಕಾರ ಇವುಗಳನ್ನು ಮನುಷ್ಯನು ಬದುಕುತ್ತಿರುವ ಬದುಕಿನ ತೀರಾ ಹತ್ತಿರಕ್ಕೆ ಬಂದು ಅವಲೋಕಿಸಿದರೆ ಒಂದು ಸಮುದಾಯದ ಜೀವನ ಪ್ರಮಾಣ ಮತ್ತೊಂದು ಸಮುದಾಯದ ಜೀವನಕ್ರಮಕ್ಕೂ ವ್ಯತ್ಯಾಸವಿರುವುದು ಕಂಡುಬರುತ್ತದೆ. ಅಂದರೆ ಮನುಷ್ಯನು ಆಚರಿಸುವ ಆಚರಣೆಗಳು ಆ ಸಮುದಾಯದ ಒಂದು ಕಟ್ಟು ಪಾಡುಗಳಿಗೆ ಅವಲಂಬಿಸಿರುತ್ತದೆ. ಒಂದು ಸಮುದಾಯದ ಆಚರಣೆಯು ಆ ಸಮುದಾಯದ ಚಾರಿತ್ರಿಕ ಅಂಶಗಳನ್ನು ಬಿಂಬಿಸುತ್ತಿರುತ್ತವೆ. ಪ್ರಮುಖವಾಗಿ ಬುಡಕಟ್ಟುಗಳಲ್ಲಿ ಆಚರಣೆಗಳು ತಮ್ಮ ಅನುಭವದ ಒಕ್ಕಣೆಯಾಗಿರುತ್ತವೆ. ಪ್ರತಿಯೊಂದು ಬುಡಕಟ್ಟುಗಳು ಆಚರಣೆಯು ಮೇಲುನೋಟಕ್ಕೆ ಸಂಪ್ರದಾಯ ಮತ್ತು ಸಂಸ್ಕೃತಿಯಂತೆ ಕಂಡುಬಂದರು. ಅವುಗಳ ಆಳದಲ್ಲಿ ವೈಜ್ಞಾನಿಕ ಮತ್ತು ಜೀವನದ ಸಂರಕ್ಷಣೆಯ ತಂತ್ರಗಳಿರುತ್ತವೆ.

ಸಂಪ್ರದಾಯ ಕುರಿತಂತೆ Standard dictionary of folklore ಕೃತಿಯಲ್ಲಿ ಈ ರೀತಿಯ ವಿವರಗಳು ದೊರೆಯುತ್ತವೆ. Traditional pattern of human action accepted by a group Individual habit is not included Costom is What folk do;belief is why they think they do it" ಸಂಪ್ರದಾಯವೆಂಬುದು ವೈಯಕ್ತಿಕವಾದುದಲ್ಲ; ಸಾಮೂಹಿಕವಾದದು. ಜನರು ಏನು ಮಾಡುತ್ತಾರೆಂಬುದನ್ನು ತಿಳಿಸುವುದೇ ಸಂಪ್ರದಾಯ ಅದನ್ನು ಏಕೆ ಅನುಷ್ಠಾನಕ್ಕೆ ತರಬೇಕೆಂದು ತಿಳಿದಿದ್ದಾರೋ ಅದೇ ನಂಬಿಕೆ.[1]

ಸೋಲಿಗರು ಧಾರ್ಮಿಕವಾಗಿ ಉತ್ತಮ ಮನೋಭಾವದವರಾಗಿದ್ದು. ದೇವರು ಎಂಬ ನಂಬಿಕೆಯನ್ನು ಹೊಂದಿದ್ದವರಾಗಿದ್ದಾರೆ. ಶೈವ ಮತ್ತು ವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾಗಿ ಎರಡು ಧರ್ಮದ ಸಮನ್ವಯತೆಯನ್ನು ಕಾಪಾಡಿಕೊಂಡಿದ್ದಾರೆ. ಇವರು ಪ್ರಕೃತಿಯ ಆರಾಧಕರಾಗಿದ್ದಾರೆ "ಹಡಗಿನ ದೇವರು" ಇವರ ಕುಲದೇವರಾಗಿ ಅನೇಕ ಆಚರಣೆಗಳನ್ನು ಮಾಡುತ್ತಾರೆ. ಆಚರಣೆಗಳು ಆಯಾ ಜನಾಂಗದ ಜೀವನ ವಿಧಾನದ ಮೂಲಕ ರೂಪುಗೊಳ್ಳುತ್ತವೆ. ಏಕೆಂದರೆ ಒಬ್ಬ ಮನುಷ್ಯನ ಬದುಕಿನಲ್ಲಿ ಅನೇಕ ರೀತಿಯ ಸಂಕ್ರಮಣಗಳು ನಡೆಯುತ್ತಿವೆ. ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ಬದಲಾವಣೆಯಾಗುವುದು ಸಂಕ್ರಮಣದ ಲಕ್ಷಣ. ಇದೊಂದು ಮಹತ್ವವಾದ ಬದಲಾವಣೆಯಾದ್ದರಿಂದ ಇವು ಸುಸೂತ್ರವಾಗಿ ಜರುಗಬೇಕು ಎನ್ನುವುದಾಗಿದೆ. ಬದುಕಿನಲ್ಲಿ ಯಾವುದೇ ರೀತಿ ದುರಂತ ಸಂಭವಿಸಬಾರದೆಂದು ನೆಮ್ಮದಿ ಬದುಕನ್ನು ಕಟ್ಟುವ ಕಡೆಗೆ ಹೆಚ್ಚು ಹಾತೊರೆಯುತ್ತಿರುತ್ತಾನೆ. ಈ ಕಾಳಜಿಯೇ ಆಚರಣೆಗಳ ಹುಟ್ಟುವಿಕೆಗೆ ಕಾರಣವಾಗಿದೆ.

ಒಂದು ಸಮುದಾಯದ ಸಾಮಾಜಿಕ ಅನನ್ಯತೆ ಆದು ನಂಬಿದ ಮೌಲ್ಯ ಆಚರಿಸುವ ಆಚರಣೆ ನಂಬಿಕೆ ಹಾಗೂ ಬದುಕಿನ ರೀತಿ ನೀತಿಗಳಲ್ಲಿ ವ್ಯಕ್ತವಾಗುತ್ತವೆ. ಸೋಲಿಗ ಸಮುದಾಯವು ಮೂಲತಹಃ ಆದಿವಾಸಿಗಳಾಗಿದ್ದು ಇವರು ತಮ್ಮ ಪಾರಂಪರಿಕ ನಿಯಮ ಪಾಲನೆ, ಆಚರಣೆಗಳನ್ನು ಇವರು ಕಾಡಿನ ಪರಿಸರದಲ್ಲಿ ಕಟ್ಟುನಿಟ್ಟಿನ ಜೀವನ ಕ್ರಮವನ್ನು ನಡೆಸುತ್ತಿರುವ ಸಲುವಾಗಿ ನಿರ್ದಿಷ್ಟ ಆಚರಣೆ ನಂಬಿಕೆ ನಿಷೇಧಗಳನ್ನು ಪಾಲಿಸಲೇ ಬೇಕಾಗಿರುತ್ತದೆ. ವ್ಯತ್ಯಾಸವಾದಲ್ಲಿ ನಮಗೆ ತೊಂದರೆಯಾಗುತ್ತವೆ ಎಂಬ ನಂಬಿಕೆ ಇವರಿಗಿದೆ. ಈ ಸಮುದಾಯಗಳು ದೈನಂದಿನ ಚಟುವಟಿಕೆ ಪ್ರಾರಂಭವಾಗುವುದೇ ಆಹಾರವನ್ನು ಸಂಗ್ರಹಿಸುವ ಮೂಲಕ ಕಾಡುಪ್ರಾಣಿಗಳಿಂದ ರಕ್ಷಣೆ, ಕಾಡಿನಲ್ಲಿ, ಜೇನುಸಂಗ್ರಹಣೆ, ಕೃಷಿ ಚಟುವಟಿಕೆ ಮುಂತಾದ ಮಾನವನ ಸಂಸ್ಕೃತಿ ವಿಕಾಸದ ವಿವಿಧ ಹಂತಗಳಲ್ಲಿ ಹಲವು ಆಚರಣೆಗಳು ಹುಟ್ಟಿಕೊಂಡಿವೆ. ವ್ಯಕ್ತಿಯನ್ನಷ್ಟೇ ಅಲ್ಲದೆ ದೇವರು ಸಸ್ಯ, ಪ್ರಾಣಿ, ಕಲ್ಲು ನೀರು ಇತ್ಯಾದಿಗಳನ್ನು ಕುರಿತಂತೆ ಸಹ ವಿವಿಧ ಬಗೆಯ ಆಚರಣೆಗಳನ್ನು ತನ್ನಲ್ಲಿ ಅಂತರ್ಗತಿಸಿಕೊಂಡಿದೆ. ಸಮುದಾಯವೊಂದರ ಅವಿಭಾಜ್ಯ ಅಂಗವಾದ ವ್ಯಕ್ತಿಯು ಸಮಾಜಕ್ಕೆ ಅದರ ಕಟ್ಟು ಕಟ್ಟಳೆಗೆ ಬದ್ಧನಾಗಿ ನಡೆದುಕೊಳ್ಳಲೇ ಬೇಕಾಗಿರುವುದರಿಂದ ಆಚರಣೆಗಳಿಂದ

ಹೊರತಾಗಲು ಸಾಧ್ಯವೇ ಇಲ್ಲದಂತಾಗಿದೆ. ಜನನ ಕಾಲದಿಂದ ಪ್ರಾರಂಭವಾಗಿ ಬದುಕಿನ ಮರಣ ಕಾಲದವರೆಗೆ ಕೆಲವು ವಿಧಿ ಸಂಪ್ರದಾಯ ಸಂಸ್ಕಾರಗಳು ಆಚರಿಸುವ ಪರಂಪರೆ ಎಲ್ಲ ಕುಲ ಸಮುದಾಯಗಳಲ್ಲೂ ಕಂಡುಬರುತ್ತದೆ. ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕುಲದಿಂದ ಕುಲಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಈ ಬಗೆಯ ಆಚರಣೆಗಳು ಭಿನ್ನವಾಗಿರುವುದು ಗೋಚರಿಸುತ್ತದೆ.

ಬುಡಕಟ್ಟುಗಳಲ್ಲಿ ಒಂದಾದ ಸೋಲಿಗ ಸಮುದಾಯದ ಸಂಸ್ಕೃತಿ ವಿಶಿಷ್ಟವಾದುದು. ಸಂಸ್ಕೃತಿಯ ವಿಕಾಸ ಕ್ರಮದಲ್ಲಿ ಆಹಾರ ಸಂಗ್ರಹಣೆಯ ಹಂತವನ್ನು ದಾಟಿ, ಬೇಟೆಯಾಡುವ ಹಂತಕ್ಕೆ ಬಂದ ಸೋಲಿಗರ ಆಚರಣೆಗಳು ಆದಿಮ ಸಂಸ್ಕೃತಿಯ ಹಲವು ವಿವರಗಳನ್ನು ತಿಳಿಯಪಡಿಸುತ್ತದೆ. ಕಾಡಿನ ಸಂಸ್ಕೃತಿಯ ಸೋಲಿಗರಲ್ಲಿ ವಿಶಿಷ್ಟವಾದ ನಂಬಿಕೆ, ಸಂಪ್ರದಾಯ ಹಾಗೂ ಆಚರಣಾ ಕ್ರಮಗಳಿವೆ. ಕಾಡಿನಲ್ಲಿ ತಮ್ಮದೆ ಆದ ಸಮುದಾಯದ ಜನಗಳೊಂದಿಗೆ ಕೂಡಿಕೊಂಡು ಜೀವನ ಸಾಗಿಸುವ ಇವರು ತಮ್ಮದೆನ್ನುವ ಸಾಂಸ್ಕೃತಿಕ ಚಹರೆಯನ್ನು ಪಾಲಿಸಿಕೊಂಡು ಬಂದಿದ್ದಾರೆ. ಆದರೆ ಕೆಲವೊಂದು ಸೋಲಿಗರ ಪೋಡುಗಳಲ್ಲಿ ಅಂದರೆ ನಗರ ಪ್ರದೇಶಕ್ಕೆ ಹೆಚ್ಚಿನ ಸಂಪರ್ಕ ಹೊಂದಿರುವ, ಪಟ್ಟಣಕ್ಕೆ ಹತ್ತಿರವಿರುವ ಕೆಲವು ಪೋಡಿನ ಸೋಲಿಗರು ಆಧುನಿಕತೆಗೆ ಒಳಗಾಗಿದ್ದಾರೆ. ಮೂರನೇ ತಲೆಮಾರಿನ ಯಾವ ಮನಸ್ಸುಗಳಲ್ಲಿ ಸಾಂಸ್ಕೃತಿಕವಾದ ಕೆಲವೊಂದು ಅಂಶಗಳಲ್ಲಿ ಬದಲಾವಣೆ ಕಂಡುಬರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಲೆಮಾರುಗಳ ಹಿನ್ನಲೆಯಲ್ಲಿ ಆಚರಣಾತ್ಮಕ ವಿಷಯಗಳ ಬಗೆಗೆ ಮಾಹಿತಿಯನ್ನು ಪಡೆಯುವಾಗ ಕೆಲವೊಂದು ಬಲಾವಣೆ ಕಂಡುಬಂದಿದೆ. ಈ ನಿಟ್ಟಿನಲ್ಲಿ ಸೋಲಿಗ ಸಮುದಾಯದ ಸಂಪ್ರದಾಯ, ಧಾರ್ಮಿಕ ಆಚರಣೆಗಳು ಮತ್ತು ನಂಬಿಕೆಗಳನ್ನು ಹಾಗೂ ಹಬ್ಬಹರಿದಿನಗಳನ್ನು ಕುರಿತಂತೆ ಈ ಅಧ್ಯಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**೪.೧ ಅಚರಣೆ**

**೧. ಜನನ**

ಸೋಲಿಗರಲ್ಲಿ ಹುಟ್ಟಿನ ಸಂದರ್ಭದಲ್ಲಿ ನಡೆಸುವ ಆಚರಣೆ ತೀರಾ ವಿಶಿಷ್ಟವಾಗಿದ್ದು, ಅವುಗಳು ಸಾಂಪ್ರದಾಯಿಕತೆಯಿಂದ ಕೂಡಿದೆ. ಗರ್ಭಿಣಿ ಮಹಿಳೆಗೆ ಮಾಡುವ ಆಚರಣೆಯನ್ನು ಇವರು ವಿಶೇಷವಾಗಿ ಮಾಡುವರು ಇತ್ತೀಚಿನ ದಿನಗಳಲ್ಲೂ ಸಹ ಸಮುದಾಯಗಳಲ್ಲಿ ಜನನ ಕುರಿತಾದ ನಂಬಿಕೆಗಳು ಆಚರಣೆಗಳು ಒಂದೇ ಒಂದು ಮಾದರಿಯಲ್ಲಿಲ್ಲ ಅವುಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿದೆ. ಗರ್ಭಿಣಿಯರಿಗೆ ಶವ ಸಂಸ್ಕಾರ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಬಿಡುವುದಿಲ್ಲ. ಗರ್ಭಿಣಿಯ ಗಂಡನು ಕಾಡಿನಲ್ಲಿ ತಿರುಗಾಡುವಂತಿಲ್ಲ. ಹೀಗೆ ಇನ್ನೂ ಹಲವು ಮಾದರಿ ನಿಯಮಗಳು ಸೋಲಿಗರಲ್ಲಿವೆ. ಹೆರಿಗೆ

ಸಮಯ ಹತ್ತಿರ ಸಮೀಪಿಸುತ್ತಿರುವಾಗ ಆಕೆಗೆ ಪ್ರತ್ಯೇಕವಾದ ಗುಡಿಸಲನ್ನು ಮನೆಯ ಹೊರಗೆ ನಿರ್ಮಿಸುವರು. ಈ ಒಂದು ಗುಡಿಸಲಿಗೆ ಹೆರಿಗ್ಗುಡಸ್ಲು ಎನ್ನುವರು. ಅಲ್ಲಿ ಅವರಿಗೆ ನೋಡಿಕೊಳ್ಳಲು ವಯಸ್ಸಾದಂತಹ ಹಿರಿಯ ಮಹಿಳೆಯರನ್ನು ನೇಮಿಸುತ್ತಾರೆ. ಇವರು ಗರ್ಭಿಣಿಯ ಯೋಗಕ್ಷೇಮವನ್ನು ನೋಡಿಕೊಳ್ಳುವ ಜವಬ್ದಾರಿಯನ್ನು ಹೊಂದಿರುತ್ತಾರೆ. ಹೆರಿಗೆಯ ದಿನದಂದು ಆ ಒಂದು ಪೋಡಿನಲ್ಲಿರುವ ಹಿರಿಯ ಸ್ತ್ರೀ ಅಥವಾ ಸೂಲಗಿತ್ತಿಯನ್ನು ಕರೆತಂದು ಹೆರಿಗೆಯನ್ನು ಮಾಡಿಸುವರು. ಮಗುವಿನ ಮತ್ತು ಬಾಣಂತಿಗೆ ಆರೈಕೆಯು ಆ ಕುಟುಂಬದ ಸದಸ್ಯರದ್ದಾಗಿರುತ್ತದೆ. ಕೆಂಪುಶೀತದ ಪದಾರ್ಥಗಳನ್ನು ಬಾಣಂತಿಗೆ ಕೊಡುವುದಿಲ್ಲ. ಮಗು ಸಾಮಾನ್ಯವಾಗಿ ಹೆಚ್ಚು ಅಳುತ್ತಿದ್ದರೆ ಅದಕ್ಕೆ ಕೆಂಡವನ್ನು ತೆಗೆದು ಹಾಕುತ್ತಾರೆ. ಕೆಲವೊಂದು ಸಾರಿ ಹುಟ್ಟಿದ ಮಕ್ಕಳು ಬದುಕದೇ ಸಾಯುತ್ತಿರುವಂತಹ ಸಂದರ್ಭದಲ್ಲಿ ಅದು ಒಂದು ದೋಷವೆಂದು ತಿಳಿದು ಆ ಮಗುವಿಗೆ ಕಿವಿ ಅಥವಾ ಮೂಗನ್ನು ಚುಚ್ಚಿಸಿ ಅದಕ್ಕೆ ಮೇಟಿಯನ್ನು ಹಾಕಿಸುತ್ತಾರೆ. ಈ ಶಾಸ್ತ್ರವನ್ನು 'ತಿರುಕ ಮೇಟಿ' ಎಂದು ಕರೆಯುತ್ತಾರೆ ಈ ರೀತಿಯಾಗಿ ಮಾಡಿದರೆ ಮಗು ಬದುಕುತ್ತದೆ. ಸೋಲಿಗರಲ್ಲಿ ಈ ತಿರುಕಮೇಟಿ ಎಂಬ ಶಾಸ್ತ್ರವನ್ನು ಹುಟ್ಟುವ ಮಕ್ಕಳಿಗೆ ಮಾಡಿಸಿದರೆ ಮರಣ ಪ್ರಮಾಣ ಕಡಿಮೆಯಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಇಂತಹ ಒಂದು ಆಚರಣೆಗೆ ಪರ್ಯಾಯವಾದ ಪದ್ಧತಿಗಳೂ ಸಹ ಇತರೆ ಬುಡಕಟ್ಟುಗಳಲ್ಲಿಯು ಕಂಡುಬರುವ ಸಾಧ್ಯತೆಗಳಿವೆ.

ಸೋಲಿಗರಲ್ಲಿ 'ಮಡಕ್ಕಿಟ್ಟು' ಅಥವಾ 'ಮರಕ್ಕಿಟ್ಟು' ಎಂಬ ಆಚರಣೆಗಳಿದೆ ಇದು ಮಗು ಜನಿಸಿದ ನಂತರ ಸೂತಕ ಕಳೆಯುವ ಆಚರಣೆಯಾಗಿದೆ. ಮಗು ಜನಿಸಿದ ಮೂರು ದಿನಗಳವರೆಗೂ ಸಹ ಮೈಗೆ ಸ್ನಾನ ಮತ್ತು ನೀರನ್ನು ಮುಟ್ಟಿಸುವುದಿಲ್ಲ. ನಂತರ ದಿನಗಳಲ್ಲಿ ಮನೆಯಲ್ಲಿನ ಹಿರಿಯರು ಮಗುವಿಗೆ ಮೈಗೆಲ್ಲಾ ಎಣ್ಣೆಯನ್ನು ಸವರಿ ನಂತರ ಬೆಚ್ಚಗಿನ ನೀರಿನಿಂದ ಮಗುವಿಗೆ ಸ್ನಾನವನ್ನು ಮಾಡಿಸುತ್ತಾರೆ. ಮಗು ಹುಟ್ಟಿದ ದಿನಕ್ಕೆ ಅಂದರೆ ಹೆಣ್ಣು ಮಗು ಹುಟ್ಟಿದರೆ ನಾಲ್ಕು ದಿನಕ್ಕೆ ಗಂಡು ಮಗು ಹುಟ್ಟಿದರೆ ಐದನೇ ದಿನಕ್ಕೆ ಸೂತಕ ತೆಗೆಯುತ್ತಾರೆ. ಹಾಗೆಯೇ ಬೇರೊಂದು ಸಮುದಾಯದಲ್ಲೂ ಸಹ ಸೂತಕ ತೆಗಿತೀವಿ ಎನ್ನುವುದನ್ನು **"ಹೊಸ ಮಡಕೆ ಇಕ್ಕೊತೀವಿ"** ಅಥವಾ **"ಮಡಕೆ ತಗಿತೀವಿ"** ಎನ್ನುತ್ತಾರೆ. ಈ ರೀತಿಯಾದ ಆಚರಣೆಗಳನ್ನು ಬೇರೊಂದು ಸಮುದಾಯದಲ್ಲೂ ಸಹ ನೋಡಬಹುದಾಗಿದೆ. ಹಾಗೆಯೇ ಮಗುವಿಗೆ ನಾಮಕರಣವನ್ನು ಮಾಡುವಂತಹ ಸಂದರ್ಭ ಸೋಲಿಗರಲ್ಲಿ ವಿಶಿಷ್ಟವಾಗಿದೆ. ತಮ್ಮಡಿಯನ್ನು ಕರೆದು ಶಾಸ್ತ್ರೋಕ್ತವಾಗಿ ಪೂಜೆಯನ್ನು ಸಲ್ಲಿಸುತ್ತಾರೆ. ಮಗುವನ್ನು ಮುತ್ತುಗದ ಎಲೆಯ ಮೇಲೆ ಮಲಗಿಸಿ ತಮ್ಮಡಿ ಮತ್ತೆ ಕೋಲ್ಕಾರ ಇಬ್ಬರು ಈ ಸಂದರ್ಭದಲ್ಲಿರುವರು.

ತಂದೆ-ತಾಯಿ ಸಮ್ಮುಖದಲ್ಲಿ ಮಗುವಿಗೆ ಒಂದು ಹೆಸರನ್ನು ಇಟ್ಟು ಮೂರು ಬಾರಿ ಕರೆಯುತ್ತಾರೆ. ನಂತರ ಬೇರೆಯವರು ಉಚ್ಚರಿಸುವರು. ನಂತರ ಅವರ ಸ್ಥಿತಿಗೆ ತಕ್ಕಂತೆ ಊಟ

ಉಪಚಾರವನ್ನು ಮಾಡಿಸುವರು. ಈ ವಿಶೇಷ ಆಚರಣೆಯಲ್ಲಿ ಪೋಡಿನ ಎಲ್ಲರೂ ಭಾಗವಹಿಸುವರು. ಇಲ್ಲಿ ಹೆಣ್ಣು ಮಗುವಿಗಿಂತ ಗಂಡು ಮಗುವಿಗೆ ಹೆಚ್ಚು ವಿಜೃಂಭಣೆಯಿಂದ ಆಚರಣೆ ಮಾಡುವರು. ಸೋಲಿಗರಲ್ಲಿ ಪ್ರಾದೇಶಿಕವಾಗಿ ಹೊಸ ತಲೆಮಾರಿನವರು ಆಧುನಿಕರಣಕ್ಕೆ ಮತ್ತು ಶಿಕ್ಷಣದ ಪ್ರಭಾವದಿಂದ ಹಾಗೆಯೇ ನಗರದ ಜನಸಮುದಾಯದವರ ಸಂಪರ್ಕವೇರ್ಪಟ್ಟಿರುವುದರಿಂದ ಅಲ್ಪಸ್ವಲ್ಪ ಬದಲಾವಣೆಯಾಗುತ್ತಿರುವುದನ್ನು ನೋಡಬಹುದಾಗಿದೆ.

**೪.೨. ನಾಮಕರಣ**

ನಾಮಕರಣವು ಎಲ್ಲಾ ಸಮುದಾಯಗಳಲ್ಲಿ ಮಗು ಹುಟ್ಟಿದ ನಂತರ ಮಾಡುವ ಒಂದು ಕಾರ್ಯಕ್ರಮವಾಗಿದೆ. ನಾಮಕರಣವು ಒಂದಲ್ಲೊಂದು ಸಂಪ್ರದಾಯಗಳ ಮುಖಾಂತರ ಮಾಡುತ್ತಾ ಬಂದಿದ್ದಾರೆ. ಹೆಸರು ಕಟ್ಟುವುದು, ತೊಟ್ಟಿಲು ಕಾರ್ಯಮಾಡುವುದು ನಾಮಕರಣವೆಂದು ಬೇರೆ ಬೇರೆ ಹೆಸರುಗಳಿಂದ ಕರೆಯುವುದುಂಟು. ಸೋಲಿಗರಲ್ಲಿ ವಿಶೇಷವಾಗಿ ಈ ಶಾಸ್ತ್ರಕ್ಕೆ **ಮರಕ್ಕಿಟ್ಟು>ಮಡಕ್ಕಿಟ್ಟು** ಎಂದು ಕರೆಯುತ್ತಾರೆ. ಸೋಲಿಗ ಸಮುದಾಯದಲ್ಲಿ ಮಗು ಹುಟ್ಟಿದ ನಾಲ್ಕನೇ ಮತ್ತು ಐದನೇ ದಿನಕ್ಕೆ **"ತೂಮ"** ಸೂತಕ ತೆಗೆಯುತ್ತಾರೆ. ಹೆಣ್ಣು ಮಗು ಹುಟ್ಟಿದರೆ ನಾಲ್ಕು ದಿನಕ್ಕೆ, ಗಂಡು ಮಗು ಜನಿಸಿದರೆ ಐದನೇ ದಿನಕ್ಕೆ ಸೂತಕ ತೆಗೆಯುತ್ತಾರೆ. ಈ ಶಾಸ್ತ್ರಕ್ಕೆ ಕುಲದಲ್ಲಿ ಇರುವಂತಹ ಕೊಲ್ಕಾರ ಬರಲೇಬೇಕು, ಕೊಲ್ಕಾರ ಮತ್ತು ತಮ್ಮಡಿ ಬಂದು ಪೂಜೆ ನೆರವೇರಿಸಿ **ತೇರ್ಥ>ತೀರ್ಥ** ಕೊಟ್ಟರೆ ಸೂತಕ ಕಳೆದಂತೆ ತೀರ್ಥ ಎಂದರೆ ಬೆಲ್ಲದ ನೀರು. ಮತ್ತು ತುಳಸಿ ಎಲೆ ಮಿಶ್ರಿತ ನೀರು ಇದನ್ನು ಕೊಲ್ಕಾರ ಎಲ್ಲರಿಗೂ ನೀಡಬೇಕು ಮಗುವನ್ನು ಮುತ್ತುಗದ ಎಲೆಯ ಮೇಲೆ ಮಲಗಿಸಿ ತಂದೆ-ತಾಯಿಯ ಸಮ್ಮುಖದಲ್ಲಿ ಕೊಲ್ಕಾರ ಕುಲದೇವತೆಯ ಹೆಸರನ್ನು ಕೂಗಿದ ನಂತರ ತಮಗೆ ಇಷ್ಟವಾದ ಹೆಸರನ್ನು ಕಟ್ಟುತ್ತಾರೆ. ಕುಲದವರೆಲ್ಲಾ ಈ ಸಮಾರಂಭಕ್ಕೆ ಬಂದಿರುತ್ತಾರೆ. ಎಲ್ಲರೂ ಒಟ್ಟಿಗೆ ಸೇರಿ ಜಾತಕ ಕೂಟವನ್ನು ಮಾಡುವರು. ಇತ್ತೀಚಿನ ದಿನಗಳಲ್ಲಿ ನಗರಗಳ ಪ್ರಭಾವದಿಂದ ಹಾಗೂ ಆಧುನಿಕರಣಕ್ಕೆ ಒಳಗಾಗಿರುವ ಕೆಲವು ಸೋಲಿಗ ಸಮುದಾಯದವರು ಆಚರಣೆಗಳನ್ನು ವಿಭಿನ್ನ ರೀತಿಯಲ್ಲಿ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಇತ್ತೀಚಿನ ದಿನಗಳಲ್ಲಿ ಇವರಲ್ಲಿ ಊಟ ಉಪಚಾರಗಳು ಪ್ರಾದೇಶಿಕವಾಗಿ ಅಲ್ಪಸ್ವಲ್ಪ ಬದಲಾವಣೆ ಆಗಿರುವುದನ್ನು ಗಮನಿಸಬಹುದಾಗಿದೆ.

**೪.೩. ಋತುಮತಿ**

ಹೆಣ್ಣು ಮಕ್ಕಳು ಬೆಳೆದು ಋತುಚಕ್ರಕ್ಕೆ ಒಳಗಾಗುವುದು ಒಂದು ಸಹಜ ಜೈವಿಕ ಕ್ರಿಯೆಯಾಗಿದೆ. ಇದಕ್ಕೆ ಪ್ರಾದೇಶಿಕವಾಗಿ ಮೈನೆರೆದಿದ್ದಾಳೆ, ದೊಡ್ಡೊಳು ಆಗಿದ್ದಾಳೆ. ಒಸಗೆ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಇಂತಹ ಒಂದು ಸಂದರ್ಭವನ್ನು ಹುಡುಗಿ ಕನ್ಯೆಯಾಗಿದ್ದಾಳೆ. ಪ್ರಾಯಕ್ಕೆ ಬಂದ ವೇಳೆ ಹದಿಹರೆಯಕ್ಕೆ ಕಾಲಿಟ್ಟಳು. ಸಂತಾನೋತ್ಪತ್ತಿ ಕ್ರಿಯೆಗೆ

ಸಿದ್ಧಳಾದಳು ಎಂದು ಗ್ರಹಿಸಲಾಗಿದೆ. ಹಾಗೆಯೇ ಸೋಲಿಗ ಸಮುದಾಯದ ಹೆಣ್ಣು ಮಗಳು ಯೌವನಾವಸ್ಥೆಗೆ ಅಥವಾ ಪ್ರೌಢಾವಸ್ಥೆಗೆ ಬಂದಾಗ ಕೆಲವು ಸಾಂಪ್ರದಾಯಿಕ ಆಚರಣೆಗಳು ನಡೆಯುತ್ತಿರುತ್ತವೆ. ಆ ಸಾಂಪ್ರದಾಯಿಕ ಆಚರಣೆಗಳು ಸೋಲಿಗರಲ್ಲಿ ವಿಶೇಷವಾಗಿ ಆಚರಿಸುವುದು ಕಂಡುಬರುತ್ತದೆ. ಸೋಲಿಗರ ಸಮುದಾಯದಲ್ಲಿ ಹುಡುಗಿಯರು ಮೈ ನೆರೆದಾಗ ಆ ದಿನಗಳಲ್ಲಿ ಆಕೆಯನ್ನು ಮೈಲಿಗೆಯಾದಳೆಂದು ಭಾವಿಸಿಕೊಂಡು ಅವಳಿಗೆ ಮನೆಯಿಂದ ಹೊರಗೆ ಇಡುವರು **"ಗುಳ್ಳು ಹಾಕೊದು"** ಎಂದು ಕರೆಯುತ್ತಾರೆ. ಗುಳ್ಳು ಹಾಕೋದು ಎಂದರೆ ತನ್ನ ಮಾವ ಅಂದರೆ ಸೋದರ ಮಾವ ಒಂದು ಹಸಿರು ಸೊಪ್ಪಿನ ಗುಡಿಸಲನ್ನು ಹಾಕುವುದಕ್ಕೆ ಗುಳ್ಳು ಎಂದು ಕರೆಯುತ್ತಾರೆ. ಇದನ್ನು ಗುಮ್ಮಿ ಎಂತಲೂ ಕರೆಯುವುದುಂಟು. **"ಗುಮ್ಮಿ"** ಅಥವಾ **"ಗುಳ್ಳು"** ಎಂದರೆ ದಡಸು ದಂಡೆ ಕಟ್ಟಿಗೆಗಳಿಂದ ಹಸಿರು ಗುಡಿಸಲನ್ನು ಕಟ್ಟುವುದಕ್ಕೆ ಗುಮ್ಮಿ ಅಥವಾ ಗುಳ್ಳು ಎಂದು ಕರೆಯುವರು. ಗುಡಿಸಲಿನಲ್ಲಿ ಇರುವಾಗ ಅವಳಿಗೆ ಅಗತ್ಯವಾದ ಬಟ್ಟೆಗಳು, ಕನ್ನಡಿ, ಕುಂಕುಮ, ಹಾಗೂ ಆಹಾರವನ್ನು ಪೂರೈಸಲಾಗುವುದು. ಇವಳ ಕಾವಲಿಗೆ ವಯಸ್ಸಾದ ಹೆಂಗಸು ಅಥವಾ ಚಿಕ್ಕವಯಸ್ಸಿನ ಹೆಣ್ಣು ಮಕ್ಕಳನ್ನು ಬಿಟ್ಟಿರುತ್ತಾರೆ. ಈ ಸಂದರ್ಭದಲ್ಲಿ ಮನೆಯನ್ನು ಬಿಟ್ಟು ಹೊರಗೋಗುವಂತಿಲ್ಲ ಪರರನ್ನು ಮಾತನಾಡಿಸುವಂತಿಲ್ಲ. ಮೈನೆರೆದ ಹುಡುಗಿಯ ಮನೆ ತೂಮ (ಸೂತಕ) ಮನೆಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಯಾವುದೇ ಶುಭ ಕಾರ್ಯಗಳನ್ನಾಗಲಿ ಮನೆಯಲ್ಲಿ ದೇವರ ಪೂಜೆ ದೇವಸ್ಥಾನಕ್ಕೆ ಹೋಗುವುದಾಗಲಿ ಮಾಡುವಂತಿಲ್ಲ. ಐದನೇ ದಿನ (ಸೂತಕ) ತೆಗೆಯುವ ಶಾಸ್ತ್ರಕ್ಕೆ **ತೂಮ>ಮಡಕೆ** ತೆಗೆಯುವುದು ಸೋಲಿಗರು ಮಾಡುತ್ತಾರೆ. ಇಲ್ಲಿ ಸೂರ್ಯ ಹುಟ್ಟುವುದಕ್ಕೆ ಮುಂಚಿತವಾಗಿ ಋತುಮತಿಯಾದ ಹುಡುಗಿಯನ್ನು ಗುಡಿಸಲಿನಿಂದ ಹೊರಗೆ ಕರೆತಂದು ನಂತರ ಆ ಹಸಿರು ಗುಡಿಸಲನ್ನು ಗುರುತಿಸಿ ಸುಟ್ಟು ಹಾಕುತ್ತಾರೆ.

ಮೈನೆರೆದ ಹುಡುಗಿ ಪ್ರತಿದಿನ ಹಳ್ಳದಲ್ಲಿ ಸ್ನಾನ ಮಾಡಿ ಬರಬೇಕು. ಆಕೆ ಹೊರಗಡೆ ಹೋಗುವಾಗ ಕೈಯಲ್ಲಿ ಕುಡುಗೋಲು ಮತ್ತು ಚಪ್ಪಲಿ ಧರಿಸಿ ಹೋಗುಬೇಕು. ಇಲ್ಲದಿದ್ದರೆ ಕೊಳ್ಳಿ ದೆವ್ವ ಕಾಡುವುದು ಎಂಬುದಾಗಿ ಅವರ ನಂಬಿಕೆ. ಐದು ದಿನ ಕಳೆದ ನಂತರ ಸೂತಕ ತೆಗೆಯುವ ಶಾಸ್ತ್ರವನ್ನು ಮಾಡುವರು. ಸೂರ್ಯ ಹುಟ್ಟುವುದಕ್ಕೆ ಮುನ್ನ ಋತುಮತಿಯಾದ ಹುಡುಗಿಯನ್ನು ಗುಡಿಸಲಿನಿಂದ ಹೊರಗೆ ಬರಲು ಹೇಳುತ್ತಾರೆ. ಆ ದಿನ ಹಳ್ಳದಲ್ಲಿ ಸ್ನಾನ ಮಾಡಿದ ನಂತರ ಮಾವ ಗುಡಿಸಲನ್ನು ಬೆಂಕಿ ಇಟ್ಟು ಸುಡುತ್ತಾನೆ. ಹುಡುಗಿ ಸ್ನಾನ ಮಾಡಿ ಬಂದು ಸುಟ್ಟ ಗುಡಿಸಲಿನ ಬೂದಿಯನ್ನು ತುಳಿದು ಮನೆಗೆ ಕಾಲಿಡುತ್ತಾಳೆ. ಮನೆಯಲ್ಲಿ ಸಿಹಿ ಅನ್ನ ಮಾಡಿ ಕೊಡುತ್ತಾರೆ. ಸಮುದಾಯದ ಐದು ಜನ ಮುತ್ತೈದೆ ಹೆಣ್ಣು ಮಕ್ಕಳಿಗೆ ಎಲೆ ಅಡಿಕೆ ಅವಳಿಗೆ ಶಾಸ್ತ್ರ ಮಾಡಿ ಅಕ್ಕಿ ಅರಿಶಿಣ ಪುಡಿಯನ್ನು ಬೆರೆಸಿ ತಲೆಯ ಮೇಲೆ ಹಾಕುತ್ತಾರೆ. ಇದನ್ನು **ಸೋಸಲು ಅಕ್ಕಿ** ಎಂದು ಕರೆಯುತ್ತಾರೆ.

## ೪.೪ ವಿವಾಹ ಪದ್ಧತಿ

ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನ ವಂಶಾಭಿವೃದ್ಧಿಗಾಗಿ ಮದುವೆ ಎಂಬ ಸಂಪ್ರದಾಯವೊಂದನ್ನು ಸಮುದಾಯದಲ್ಲಿ ರೂಢಿಗೆ ತಂದನು. ಸ್ವಚ್ಛಂದ ಲೈಂಗಿಕತೆಗೆ ತಡೆ ಹಾಕುವ ಸಲುವಾಗಿ, ಸಮಾಜದ ನೀತಿ ನಿಯಮಗಳಿಗೆ ಒಳಪಟ್ಟು ದಾಂಪತ್ಯ ಸುಖವನ್ನು ಅನುಭವಿಸುವ ದಿಕ್ಕಿನಲ್ಲಿ ಈತ ರೂಪಿಸಿಕೊಂಡ ಈ ವಿವಾಹವು ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ದಾರಿ ಮಾಡಿಕೊಟ್ಟಿದೆ. ಹೆಣ್ಣು-ಗಂಡುಗಳನ್ನು ಕೊಟ್ಟು ತರುವಲ್ಲಿ ಕುಲ, ಜಾತಿ ಗುಂಪುಗಳು ಸಾಗಿದಾಗ ಮದುವೆಯ ನಿಯಮ ನಿಬಂಧನೆಗಳು ಗಟ್ಟಿಯಾದವು. ಹಾಗೆಯೇ ಭದ್ರವಾಗಿ ನಿಲ್ಲಲು ಅನುಕೂಲವಾಯಿತು. ಯಾವುದೇ ಬುಡಕಟ್ಟುಗಳಲ್ಲೂ ಕೂಡ ಮದುವೆ, ಸಾವು ಹಾಗೂ ದೈವದ ಆಚರಣೆಗಳು ಬಹು ಮುಖ್ಯವಾದವು. ವಿವಾಹವು ಎಲ್ಲಾ ಸಮುದಾಯದಲ್ಲೂ ಮಹತ್ವ ಪೂರ್ಣವಾದ ಘಟ್ಟವಾಗಿದೆ. ಒಂದು ನಿರ್ದಿಷ್ಟ ವಯಸ್ಸಿಗೆ ಬಂದಾಗ ಯುವಕ-ಯುವತಿಯರನ್ನು ಮದುವೆ ಮಾಡಿ ಬೇರೆ ಮನೆಯಲ್ಲಿ ವಾಸಿಸುವಂತೆ ಮಾಡುತ್ತಾರೆ. ಅನೇಕ ಬುಟಕಟ್ಟು ಸಮುದಾಯದಲ್ಲಿ ಭಿನ್ನವಾಗಿ ವಿವಾಹ ಆಚರಣೆ ಮಾಡಿಕೊಳ್ಳುವುದು ಕಂಡುಬರುತ್ತದೆ. ಬಿಳಿಗಿರಿ ರಂಗನ ಬೆಟ್ಟದಲ್ಲಿ ನೆಲೆಸಿರುವಂತಹ ಸೋಲಿಗ ಸಮುದಾಯದ ವೈವಾಹಿಕ ಆಚರಣೆಗಳು ಗಮನ ಸೆಳೆಯುವಂತಹ ಆಚರಣೆಗಳಾಗಿವೆ.

**ಅಪಹರಣ ವಿವಾಹ ಪದ್ಧತಿ**

**ವಿಧವಾ ವಿವಾಹ**

**ಹಿರಿಯರ ನಿಶ್ಚಯಿಸಿದ ವಿವಾಹ**

**ವಿವಾಹ ವಿಚ್ಛೇದನ**

### ೪.೪.೧ ಅಪಹರಣ ವಿವಾಹ

ಸೋಲಿಗ ಸಮುದಾಯದಲ್ಲಿ ಅಪಹರಣ ವಿವಾಹವು ಪ್ರಾಚೀನ ಕಾಲದಿಂದಲೂ ಇವರಲ್ಲಿ ಬಹಳ ಮುಖ್ಯವಾಗಿ ಕಂಡುಬರುವ ಪದ್ಧತಿಯಾಗಿದ್ದು. ಈಗಲೂ ಸಹ ಈ ಇವರಲ್ಲಿ ನೆಡೆಯುತ್ತಿರುವ ಈ ಹಳೆಯ ತಲೆಮಾರಿನ ವಿವಾಹ ಪದ್ಧತಿಯಲ್ಲಿ ಅಪಹರಣವೇ ರೂಢಿಯಲ್ಲಿತ್ತು. ಈ ವಿವಾಹವು ರೊಟ್ಟಿ ಹಬ್ಬದ ಸಂದರ್ಭದಲ್ಲಿ ಹೆಚ್ಚಾಗಿ ನಡೆಯುವುದನ್ನು ಗಮನಿಸಬಹುದಾಗಿದೆ. ಇಲ್ಲಿ ಎಲ್ಲಾ ಕುಲದ ಪೋಡಿನ ಜನರು, ಸಂಬಂಧಿಕರು ಈ ಹಬ್ಬಕ್ಕೆ ಆಗಮಿಸುವರು.

ಇಲ್ಲಿ ಸಾಮೂಹಿಕ ಮನರಂಜನೆಗಾಗಿ ಎಲ್ಲರು ಒಂದೆಡೆ ಸೇರಿರುವರು. ಹೆಂಗಸರು ಹಾಡನ್ನು ಹೇಳಿದರೆ ಗಂಡಸರು ಹಾಡಿಗೆ ತಕ್ಕಂತೆ ಕುಣಿಯುವುದು ಈ ಹಬ್ಬದ ಸಂಪ್ರದಾಯ. ಇಡೀ ರಾತ್ರಿಯು ಕುಣಿತ ಹಾಡುಗಳು, ನೃತ್ಯಗಳು ನಡೆಯುತ್ತಲೇ ಇರುತ್ತದೆ. ಸೋಲಿಗ ಸಮುದಾಯದಲ್ಲಿ ಗೋರುಕನ ಕುಣಿತ ಬಹಳ ಮುಖ್ಯವಾದುದಾಗಿವೆ. ಈ ಸಂದರ್ಭದಲ್ಲಿ ಹೆಣ್ಣಿಗೆ ಒಂದು ಗಂಡು

ಇಷ್ಟವಾದರೆ ಹೂ ಮತ್ತು ಹರಳುಗಳಿಂದ ಇಷ್ಟವಾದ ಹುಡುಗನಿಗೆ ಹೊಡೆಯುವಳು ಆ ಹುಡುಗಿ ಮೂರು ಬಾರಿ ಹೊಡೆದ ನಂತರ ಹುಡುಗ ಹುಡುಗಿಯ ಹತ್ತಿರ ಬಂದು ಕೇಳುತ್ತಾನೆ. ನಂತರ ಕುಲ-ಕುಲ ಒಂದೇ ಆದರೆ ಮದುವೆ ಆಗುವುದಿಲ್ಲ, ಕುಲ-ಕುಲ ಬೇರೆ ಬೇರೆಯಾದರೆ ಇಬ್ಬರು ಒಪ್ಪಿಗೆ ಪಟ್ಟು ಕಾಡಿನೊಳಗೆ ರಾತ್ರೋ ರಾತ್ರಿ ಓಡಿ ಹೋಗುತ್ತಾರೆ. ಗಂಡು ತನಗೆ ಗೊತ್ತಿರುವಂತಹ ಸ್ಥಳಕ್ಕೆ ಅಪಹರಿಸಿಕೊಂಡು ಹೋಗುತ್ತಾನೆ. ಇಬ್ಬರು ಕಾಡಿನಲ್ಲಿ ಮೂರು ದಿವಸ ಅಥವಾ ಅವರಿಗೆ ಇಷ್ಟವಾಗುವವರೆಗೂ ಇರುತ್ತಾರೆ. ನಂತರ ಪೋಡಿನಿಂದ ನಿರ್ಗಮಿಸಿರುವುದು ಪೋಡಿನ ಎಲ್ಲಾ ಜನರಿಗೆ ತಿಳಿಯುತ್ತದೆ. ಎರಡು ಮೂರು ದಿನಗಳ ನಂತರ ಪೋಡಿಗೆ ಹಿಂದಿರುಗಿ ಬರುವರು ಪಂಚಾಯಿತಿ/ಕಟ್ಟೆಮನೆಯಲ್ಲಿ ಕುಲದ ಯಜಮಾನರು ಸೇರಿಸಿ ಹುಡುಗಿಯರ ಮನೆಯವರ ಮತ್ತು ಹುಡುಗನ ಮನೆಯವರು ತಂದೆ ತಾಯಿಗಳ ಸಮ್ಮುಖದಲ್ಲಿ ತಪ್ಪು ಮಾಡಿದ್ದೀರಿ ಎಂದು ಹೇಳಿ ಸಮುದಾಯಕ್ಕೆ ತಪ್ಪು ಕಾಣಿಕೆ ಸಲ್ಲಿಸುವಂತೆ ಹೇಳುತ್ತಾರೆ. ಆ ಕಾಣಿಕೆಯ ಮೊತ್ತ ೧೨ ೧/೨ ರೂಪಾಯಿಗಳು ಇದಾದ ನಂತರ ಹುಡುಗ ಮತ್ತು ಹುಡುಗಿ ಕೈಯಲ್ಲಿ ಭಾಷೆಯನ್ನು ತೆಗೆದುಕೊಳ್ಳುತ್ತಿದ್ದು ಪರಸ್ಪರ ನೀವಿಬ್ಬರು ಅನ್ಯೂನ್ಯವಾಗಿ ಜೀವನ ನಡೆಸಬೇಕು ಯಾವುದೇ ಸಂದರ್ಭದಲ್ಲಿ ಹೆಂಡತಿಯನ್ನು ಕೈ ಬಿಡಬಾರದು ಎಂದು ಹುಡುಗನ ಕಡೆಯವರು ಭಾಷೆ ತೆಗೆದುಕೊಳ್ಳುತ್ತಾರೆ. ನಂತರ ಕುಲದವರಿಗೆಲ್ಲಾ ಊಟ ಹಾಕಿಸುವರು. ಈ ರೀತಿ ಸೋಲಿಗರಲ್ಲಿ ವಿವಾಹ ಪದ್ಧತಿ ಕಂಡುಬರುತ್ತದೆ. ಈ ಅಪಹರಣದ ವಿವಾಹಗಳಿಗೆ ಸಂಬಂಧ ಪಟ್ಟಂತೆ ಸೋಲಿಗರು ಧಾರ್ಮಿಕ ಹಿನ್ನಲೆಯನ್ನು ನೆನಪಿಸಿಕೊಳ್ಳುತ್ತಾರೆ. ತಮ್ಮ ದೈವವಾದಂತಹ ಬಿಳಿಗಿರಿರಂಗಪ್ಪ ಸೋಲಿಗರ ಬೊಮ್ಮೆಗೌಡನ ಮಗಳು ಕುಸುಮಾಲೆಯಲ್ಲಿ ಮೋಹಗೊಂಡು ಅವಳನ್ನು ಕಾಡಿಗೆ ಅಪಹರಿಕೊಂಡು ಹೋಗಿ ಮದುವೆಯಾದನೆಂದು, ಆ ನಂತರವೇ ಮದುವೆ ವಿಷಯ ಕುಸುಮಾಲೆಯ ತಂದೆ ಬೊಮ್ಮೆಗೌಡನಿಗೆ ತಿಳಿದು ತನ್ನ ಕುಲಬಾಂಧವರಿಗೆಲ್ಲಾ ಹುಡುಕಲು ಹೇಳುತ್ತಾನೆ. ಈ ರೀತಿ ಹುಡುಕಲು ಹೋದ ಸೋಲಿಗರಿಗೆ ರಂಗಸ್ವಾಮಿ ಮತ್ತು ಕುಸುಮಾಲೆ ಅನೇಕ ದಿನಗಳವರೆಗೂ ಯಾರಿಗೂ ಸಿಗಲಾರರು. ಹಲವು ದಿನಗಳ ನಂತರ ಸೋಲಿಗರ ಬೊಮ್ಮೆಗೌಡನಿಗೆ ಕನ್ಯಾಶುಲ್ಕ ಕೊಟ್ಟನೆಂದು ತಿಳಿದು ಬರುತ್ತದೆ. ಆ ಕಾರಣದಿಂದಾಗಿ ಬಿಳಿಗಿರಿರಂಗಸ್ವಾಮಿಯನ್ನು ಸೋಲಿಗರ ಭಾವ ಎಂದು ಸಂಬೋಧಿಸುವರು. ತಮ್ಮ ದೇವರೇ ಈ ರೀತಿ ಮಾಡಿಕೊಂಡಿರುವುದರಿಂದ ತಾವು ಅದನ್ನು ಅನುಸರಿಸುತ್ತಿದ್ದೇವೆ ಎಂದು ಸೋಲಿಗರು ಹೇಳುವರು. ಆರ್ಥಿಕ ಪರಿಸ್ಥಿತಿಯು ಕಠಿಣವಾಗಿರುವುದರಿಂದ ಸರಳ ವಿವಾಹಕ್ಕೆ ಪ್ರಾಧಾನ್ಯತೆ ನೀಡಿ ಅಪಹರಣ ವಿವಾಹಕ್ಕೆ ಹೆಚ್ಚು ಉತ್ತೇಜನವನ್ನು ಇವರು ನೀಡುತ್ತಾರೆ. ಇದು ಉತ್ತಮ ಜೀವನ ನಡೆಸಲು ಸಹಕಾರಿಯಾಗಿದೆ.

**೪.೪.೨ ವಿಧವಾ ವಿವಾಹ**

ವಿಧವಾ ವಿವಾಹ ಪದ್ಧತಿಯು ಸೋಲಿಗರಲ್ಲಿ ಇಂದಿಗೂ ಕಂಡುಬರುತ್ತದೆ. ಇದು ಪೋಡಿನ ಹಿರಿಯರ ಮತ್ತು ಕುಲಪಂಚಾಯಿತಿಯವರ ಸಮ್ಮತಿಯಿಂದಲೇ ನಡೆಯುತ್ತವೆ. ಗಂಡ ಸತ್ತ ನಂತರ ಹೆಂಡತಿಗೆ ವಯಸ್ಸಾಗಿಲ್ಲದಿದ್ದರೆ ಅಥವಾ ಚಿಕ್ಕವಯಸ್ಸಿನಲ್ಲಿಯೇ ಗಂಡ ತೀರಿಕೊಂಡರೆ ಅವರ ಜೀವನ ನಿರ್ವಹಣೆಯು ಕಷ್ಟವಾಗುತ್ತದೆ ಎನ್ನುವ ಕಾರಣಕ್ಕಾಗಿ ಇನ್ನೊಬ್ಬ ಗಂಡು ಅಥವಾ ವಿಧುರ ಅವಳ ಒಪ್ಪಿಗೆಯ ಮೇರೆಗೆ ಅವಳನ್ನು ಮರುಮದುವೆ ಮಾಡಿಕೊಳ್ಳಬಹುದಾಗಿದೆ. ಆದರೆ ಇದಕ್ಕೆ ಹೆಣ್ಣು ಒಪ್ಪಿಗೆ ಸೂಚಿಸಲೇಬೇಕು. ಅವಳಿಗೆ ಮಕ್ಕಳಾಗಿದ್ದರೆ ಗಂಡನ ಮನೆಯವರು ಒಪ್ಪಿಗೆ ಸೂಚಿಸಬೇಕಾಗುತ್ತದೆ. ಮಕ್ಕಳ ಲಾಲನೆ ಪೋಷಣೆ ಎರಡನೆಯ ಗಂಡನಿಗೆ ಸೇರುತ್ತದೆ. ಇದನ್ನು **ಕೂಡಾವಳಿ** ಎಂದು ಕರೆಯುತ್ತಾರೆ. ಕೂಡಾವಳಿ – ಹಿರಿಯರ ಒಪ್ಪಿಗೆ ಪಡೆದು ಪರಸ್ಪರ ಗಂಡು ಹೆಣ್ಣು ಕೂಡುವುದು ಎಂದರ್ಥ. ಈ ಪದ್ಧತಿಯು ಬೇರೆ ಬೇರೆ ಸಮುದಾಯದಲ್ಲಿ ಬೇರೆ ರೀತಿಯಲ್ಲಿ ಪ್ರಚಲಿತದಲ್ಲಿರುತ್ತದೆ.

ಕೂಡುವಳಿ ಎಂದರೆ ಅಕ್ರಮ ಸಂಬಂಧ ಆದರೆ ಈ ಸಮುದಾಯದಲ್ಲಿ ಕೂಡುವಳಿ ಎಂದರೆ ಹಿರಿಯರು ನಿಶ್ಚಯಿಸಿ ಮಾಡುವಂತಹ ವಿಧವಾ ವಿವಾಹವಾಗಿದೆ. ಈ ಪದ್ಧತಿಯಲ್ಲಿ ಕನ್ಯಾಶುಲ್ಕವನ್ನು ಕೊಡಬೇಕಾಗುತ್ತದೆ. ಎರಡನೇ ಗಂಡನೇ ಮೊದಲ ಗಂಡನಿಂದ ಪಡೆದ ಮಕ್ಕಳ ಜವಾಬ್ದಾರಿಯನ್ನು ವಹಿಸಬೇಕಾಗುತ್ತದೆ. ಇಲ್ಲಿ ಮೊದಲು ಹೆಣ್ಣು ಗೊತ್ತು ಮಾಡಲಾಗುತ್ತದೆ. ಹುಡುಗಿಯು ಮನೆಗೆ ಸ್ವಲ್ಪ ರಾಗಿಯನ್ನಾಗಲಿ ಹಣವನ್ನಾಗಲಿ ನೀಡಬೇಕಾಗುತ್ತದೆ. ಮನೆಯ ಒಳಗೆ ಒಂದು ಮಣೆಯೊಂದು ಹಾಕಿ ಗಂಡು ಹೆಣ್ಣನ್ನು ಕೂರಿಸಲಾಗುತ್ತದೆ. ಗಂಡಿನ ಪಂಚೆಯ ಅಂಚು, ಹೆಣ್ಣಿನ ಸೀರೆಯ ಸೆರಗನ್ನು ಗಂಟು ಹಾಕುವರು. ಈ ವಿವಾಹ ಪದ್ಧತಿಯ ಮತ್ತೊಂದು ಆಚರಣೆ ಎಳೆಯ ಕೂಸನ್ನು ಎತ್ತಿಕೊಂಡು ಮೊದಲು ಗಂಡಿನ ಕೈಗೆ ನೀಡಿ ಅದನ್ನು ಅವನು ಹೆಣ್ಣಿನ ಕೈಗೆ ನೀಡಬೇಕು. ಇಲ್ಲಿ ಗಂಡು **"ನಾನು ಪೋಡಿಗೆ ಓಗಿ ಬಿಟ್ಟು ಒತ್ತೀಮಿ ಇಂದಾ ಈ ಕೂಸು"** ಎಂದು ಹೇಳುತ್ತಾನೆ. ನಂತರ ಹೆಣ್ಣು ಆ ಮಗುವನ್ನು ಗಂಡಿನ ಕೈಗೆ ನೀಡುತ್ತಾ **"ನಾನು ಸೊಪ್ಪು ಸದೆಗೆ ಓಗಿಬಿಟ್ಟು ಬತ್ತೀನಿ ಇಂದಾ ಈ ಕೂಸು"** ಎಂದು ಹೇಳುತ್ತಾಳೆ. ಈ ರೀತಿ ಗಂಡು ಮತ್ತು ಹೆಣ್ಣಿನ ನಡುವಿನ ಸಂಭಾಷಣೆಯ ಮೂಲಕವಾಗಿ ಕೂಸನ್ನೂ ವರ್ಗಾಯಿಸಿಕೊಂಡು ವಿವಾಹ ಕಾರ್ಯವನ್ನು ಮುಗಿಸುತ್ತಾರೆ, ಇವನ್ನು ಕೂಡಾವಳಿಶಾಸ್ತ್ರವೆಂದು ಕರೆಯುವರು. ನಂತರ ಕುಲದವರಿಗೆಲ್ಲ ಭೋಜನದ ವ್ಯವಸ್ಥೆ ಮಾಡುವರು. ಹಾಗೆಯೇ ಒಂದು ವೇಳೆ ಗಂಡನು ಸತ್ತಾಗ ಅವನ ತಮ್ಮನು ಸಹ ಆಕೆಯನ್ನು ವಿವಾಹವಾಗಿ ಸಂಸಾರ ನಡೆಸಬಹುದು. ಈ ರೀತಿಯ ವಿವಾಹಕ್ಕೆ ಕುಲಪಂಚಾಯಿತಿಯಲ್ಲಿ ವಿರೋಧ ವ್ಯಕ್ತವಾಗುತ್ತದೆ. ಪರಸ್ಪರ ಒಪ್ಪಿಗೆ ಹಿನ್ನೆಲೆಯಲ್ಲಿ ನಡೆಯುತ್ತವೆ. ಅಂದರೆ ಇಂತಹ ವಿವಾಹಗಳು ಕೂಡಾವಳಿ ಮೂಲಕ ನಡೆಯುತ್ತಿದ್ದು ವಿಜೃಂಭಣೆಯಿಂದ ನಡೆಯುವುದಿಲ್ಲ. ಅವರ ಕಟ್ಟೆ ಮನೆಯಲ್ಲಿಯೇ ನಡೆದು ಇತ್ಯಾರ್ಥವಾಗುತ್ತದೆ.

೪.೪.೩. ಹಿರಿಯರು ನೋಡಿ ನಿಚ್ಚಯಿಸಿದ ವಿವಾಹ

ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಎರಡನೆ ತಲೆಮಾರಿನಿಂದೀಚೆಗೆ ಹಿರಿಯರು ನಿಚ್ಚಯಿಸಿದ ವಿವಾಹವು ಕಂಡುಬರುತ್ತದೆ. ಇಲ್ಲಿ ಸೋಲಿಗರ ಮದುವೆಯು ಎರಡು ಮೂರು ದಿನಗಳವರೆಗೆ ಮಾಡುವುದನ್ನು ಮತ್ತು ಸಂಪ್ರದಾಯಕವಾದ ಆಚರಣೆಗಳನ್ನು ನೊಡಬಹುದಾಗಿದೆ. ಮೊದಲ ನೀರು ತರುವ ಶಾಸ್ತ್ರ ಈ ವಿಧಾನವನ್ನು ಹೆಣ್ಣು ಮಕ್ಕಳು ಗಡಿಗೆ ನೀರು ತೆಗೆದು ಕೊಂಡುಬರುವರು, ಸಮುದಾಯದ ಹಿರಿಕರು ಸೋಭಾನೆ ಪದಗಳನ್ನು ಹಾಡುವರು. ಇದನ್ನು ಸೋಲಿಗರು ದೇವರು ತರುವ ದಿನವೆಂದು ಕರೆಯುವರು. ದಿಬ್ಬಣ ಎರಡನೆಯ ದಿನದಂದು ನಡೆಯುವ ಕಾರ್ಯಕ್ರಮ ಇಲ್ಲಿ ಗಂಡಿನ ಮನೆಯವರು ಹೆಣ್ಣಿನ ಮನೆಗೆ ಮೆರವಣಿಗೆಯ ಮೂಲಕ ಸೇರುವುದು. ಅಲ್ಲಿ ಸೇರಿರುವ ಮಂದಿಗೆ ದಿಬ್ಬಣ ಎಂದು ಕರೆಯುವರು. ಈ ದಿನದಲ್ಲಿ ಧಾರೆ ಮಂಟಪದಲ್ಲಿ ತಾಳಿಕಟ್ಟುವ ಶಾಸ್ತ್ರ ನಡೆಯುತ್ತದೆ. ಹೀಗೆ ಹಿರಿಯರು ನೋಡಿ ಮಾಡಿದಂತಹ ವಿವಾಹವು ಇತ್ತೀಚಿನವರಲ್ಲಿ ಮಾತ್ರ ಕಂಡುಬರುತ್ತದೆ. ಹೊಸ ತಲೆಮಾರಿನವರಲ್ಲಿ ಬದಲಾವಣೆ ಕಂಡುಬರುತ್ತಿರುವುದನ್ನು ಗಮನಿಸಬಹುದಾಗಿದೆ.

೪.೪.೪. ವಿವಾಹ ವಿಚ್ಛೇಧನ

ವಿವಾಹ ವಿಚ್ಛೇದನವು ಸೋಲಿಗ ಸಮುದಾಯದಲ್ಲಿ ತೀರ ಸಾಮಾನ್ಯವಾಗಿ ಕಾಣುವ ಒಂದು ವ್ಯವಸ್ಥೆಯಾಗಿದೆ. ಇವರಲ್ಲಿ ವಿವಾಹ ವಿಚ್ಛೇದನ ಪಡೆಯುವುದು ತುಂಬಾ ಸುಲಭವಾಗಿದೆ. ಹೆಣ್ಣು-ಗಂಡು ಪರಸ್ಪರ ಜೀವನ ಸಂಸಾರ ನೆಡೆಸಲು ಸಾಧ್ಯವಾಗದಿದ್ದ ಪಕ್ಷದಲ್ಲಿ ಹೆಣ್ಣಿಗೆ ಜೀವನಾಂಶ ನೀಡಿ ವಿಚ್ಛೇದನ ಪಡೆಯಬಹುದಾಗಿದೆ. ಹೆಣ್ಣು ವಿಚ್ಚೇದನವನ್ನು ಪಡೆಯಬೇಕಾದರೆ ವಿವಾಹ ಸಂದರ್ಭದಲ್ಲಿ ನೀಡಿದ್ದ ಕನ್ಯಾಶುಲ್ಕ ಹಾಗೂ ಖರ್ಚುವೆಚ್ಚಗಳನ್ನು ನೀಡಿ ವಿಚ್ಚೇದನ ಮಾಡಿಕೊಳ್ಳಬಹುದು. ಸಮುದಾಯದ ಕುಲಪಂಚಾಯಿತಿಯಲ್ಲಿ ಸೇರಿ ತೀರ್ಮಾನ ಕೈಗೊಳ್ಳಲಾಗುತ್ತದೆ. ಗಂಡು ಹೆಣ್ಣು ಒಪ್ಪಿದನಂತರ ಕುಲಪಂಚಾಯಿತಿಗೆ ಹನ್ನೆರಡು ರೂಪಾಯಿ ಹಣವನ್ನು ಕಟ್ಟಬೇಕು, ಅದರಲ್ಲಿ ಒಂದುವರೆ ರೂಪಾಯಿಯನ್ನು ಎರಡು ದೇವರಿಗೆ ಮುಡುಪು ನೀಡಲಾಗುತ್ತದೆ. ಹಾಗೇ ಒಂದು ಕಡ್ಡಿಯನ್ನು ಎರಡು ತುಂಡು ಮಾಡಲಾಗುತ್ತದೆ. ಗಂಡ ಹೆಂಡಿರು ಬೇರೆಯಾದರು ಎಂಬ ಸಂಕೇತ ಈ ಕಡ್ಡಿ ಮುರಿಯವಿಕೆ ಸೂಚಿಸುತ್ತದೆ. ಇದಾದ ನಂತರ ಊಟದ ವ್ಯವಸ್ಥೆ ಇರುತ್ತದೆ. ಇಂತಹ ಒಂದು ಸಂದರ್ಭದ ಊಟದ ವ್ಯವಸ್ಥೆಯನ್ನು **ಬಿಡುಗಡೆಯ ಅನ್ನ** ಎಂದು ಕರೆಯುತ್ತಾರೆ.ಇದು ಸೋಲಿಗ ಸಮುದಾಯದಲ್ಲಿ ಕಂಡುಬರುತ್ತದೆ.

೪.೫ ಶವಸಂಸ್ಕಾರ

ಜೀವಂತ ವ್ಯಕ್ತಿಗೆ ಮಾಡುವಂತಹ ವಿವಿಧ ಕ್ರಿಯಾಚರಣೆಗಳು ಮಾಡುವುದು ಎಷ್ಟು ಮುಖ್ಯವೋ ಹಾಗೆಯೇ ವ್ಯಕ್ತಿಯು ಸತ್ತ ನಂತರ ಮಾಡುವ ಕ್ರಿಯಾಚರಣೆಗಳು ಅಷ್ಟೇ

ಮುಖ್ಯವಾಗಿರುತ್ತದೆ ಎಂಬುದು ಭಾರತದ ಮೂಲ ಬುಡಕಟ್ಟು ಜನಾಂಗದ ನಂಬಿಕೆ. ಕಾರಣ ಪಂಚಭೂತಗಳಿಂದಾದ ಕಾಯವನ್ನು ಪಂಚಭೂತಗಳಿಗೆ ಒಪ್ಪಿಸುವುದಲ್ಲದೆ. ದೇಹದಿಂದ ಹೊರಬಂದ ಆತ್ಮಕ್ಕೆ ಉತ್ತಮ ನೆಲೆಯನ್ನು ತೋರುವುದು ಅಗತ್ಯವೆಂಬುದಾಗಿದೆ. ಈ ರೀತಿ ಮಾಡುವಂತಹ ಅಂತ್ಯಸಂಸ್ಕಾರದ ಆಚರಣೆಗಳನ್ನು ಶವಸಂಸ್ಕಾರವೆಂದು ಕರೆಯುತ್ತೇವೆ. ಈ ಸಂಸ್ಕಾರಗಳು ಪ್ರತಿಯೊಂದು ಜಾತಿ ಮತ್ತು ಬುಡಕಟ್ಟುಗಳ ಅಂಗಗಳಾಗಿರುವುದರಿಂದ ಬುಡಕಟ್ಟು ಅಧ್ಯಯನದಲ್ಲಿ ಇತರೆ ಸಂಸ್ಕಾರಗಳಿಗೆ ಕೊಟ್ಟಷ್ಟೆ ಮಹತ್ವವನ್ನು ಈ ಶವಸಂಸ್ಕಾರಕ್ಕೆ ಕೊಡುತ್ತಾರೆ. ಸತ್ತಂತಹ ವ್ಯಕಿಗೆ ಅವನ ಆತ್ಮಶಾಂತಿಗಾಗಿ ಮಾಡುವಂತಹ ವಿಧಿವಿಧಾನಗಳನ್ನು ಉತ್ತರ ಕ್ರಿಯಾದಿಗಳು ಸತ್ತ ಮೇಲೂ ಆ ವ್ಯಕ್ತಿಗೆ ತೋರುವ ಗೌರವದ ಸಂಕೇತಗಳಾಗಿರುತ್ತವೆ. ಸರಿಯಾದ ರೀತಿಯಲ್ಲಿ ಸಂಸ್ಕಾರ ಕ್ರಿಯೆಗಳನ್ನು ನೆರವೇರಿಸದಿದ್ದರೆ ಅವರ ಆತ್ಮಕ್ಕೆ ಸದ್ಗತಿ ದೊರೆಯುವುದಿಲ್ಲವೆಂಬುದು ನಂಬಿಕೆ ಇದೆ.

ಬರ್ಟನ್ ಬೆನ್‌ಡಿಕ್ಟ್‌ರವರ ಪ್ರಕಾರ. " If the Social fact of birth can be seen as gradual recognition beginning with the mother, extending to the father and other members of the household, then to the wider kin group and at last to the community at large, the social fact death can be seen as being recognized immediately borne in upon the kin group the household and the nearest to the deceseased. ಸಾವು ಒಂದು ಪ್ರಕೃತಿದತ್ತವಾದ ಕ್ರಿಯೆ. ಆದರೆ ಮಾನವ ಬದುಕಿರುವಾಗ ಸಮಾಜದ ಒಂದು ಅಂಗವಾಗಿರುತ್ತಾನೆ. ಅಲ್ಲಿನ ಸಂಸ್ಕೃತಿಗಳನ್ನೂ ಸಾಮಾಜಿಕ ಸಂಬಂಧಗಳನ್ನೂ, ಸಮಾಜದ ಏರಿಳಿತಗಳನ್ನೂ ಅನುಭವಿಸುತ್ತಾನೆ. ಆ ಅನುಭವಗಳನ್ನು ಅವನಿಗೆ ನೀಡಿದ ಸಮಾಜವೊಂದಿರುತ್ತದೆ ಎಂಬುದನ್ನು ಮರೆಯುವಂತಿಲ್ಲ. ವ್ಯಕ್ತಿ ಸತ್ತರೂ, ಸತ್ತಿದ್ದಕ್ಕೂ ಪ್ರತಿಕ್ರಿಯಿಸುತ್ತಾ ಅವು ಹಾಗೆಯೇ ಉಳಿದುಕೊಂಡಿರುತ್ತವೆ.೫ ಆದರೆ ಮೂಲದ ಕೆಲವು ಮುಖ್ಯ ನೆಲೆಗಳನ್ನು ಮಾತ್ರ ಅಚ್ಚಳಿಯದಂತೆ ಉಳಿಸಿಕೊಂಡು ಹೋಗುತ್ತಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಸೋಲಿಗರ ಶವಸಂಸ್ಕಾರ. ಅಪರೂಪದ ವಿಧಿವಿಧಾನಗಳನ್ನು ಕಾಣಬಹುದಾಗಿದೆ.

ಸಾವಿನ ಸಂದರ್ಭದಲ್ಲಿ ಮಾಡುವಂತಹ ಆಚರಣೆಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಹುಟ್ಟು ಸಾವು ಮನುಷ್ಯನ ಒಂದು ಆಕಸ್ಮಿಕ ಘಟನೆಗಳು, ಆದರೆ ಕೆಲವು ಸಾಂಪ್ರದಾಯಿಕ ಆಚರಣೆಗಳ ಮೂಲಕ ಆಚರಿಸುವ ಪದ್ಧತಿ ಎಲ್ಲಾ ಸಮುದಾಯ ಜಾತಿಧರ್ಮಗಳಲ್ಲಿಯೂ ಕಂಡುಬರುತ್ತದೆ. ಸೋಲಿಗರಲ್ಲಿ ಸತ್ತವರನ್ನು ಹೂಳುವ ಪದ್ಧತಿ ಆಚರಣೆಯಲ್ಲಿದೆ. ಸತ್ತವರನ್ನು ಹೂಳುವ ಜಾಗಕ್ಕೆ **ಮದನ ಮಾದದಿಂಬ/ಸಗ್ಗ** ಎಂತಲೂ ಕರೆಯುತ್ತಾರೆ. ಮಣ್ಣಕ್ಕಿ ಹುಯ್ಯುವ ಪದ್ಧತಿ ಈ ಪದ್ಧತಿಯ ದಕ್ಷಿಣ ಕರ್ನಾಟಕದಲ್ಲೂ ಈ ಒಂದು

ಶಾಸ್ತ್ರವನ್ನು ಮಾಡುತ್ತಾರೆ. ಆ ಸಮುದಾಯದಲ್ಲಿ ಸತ್ತಂತಹ ವ್ಯಕ್ತಿ ಗಂಡಸಾಗಿದ್ದರೆ ಅವನ ಹೆಂಡತಿ ಇನ್ನೂ ಬದುಕಿದ್ದಾಗ ಅವಳನ್ನು ಮಡಿಬಟ್ಟೆ ಹಾಕಿಸಿ ಹೆಣಕ್ಕೆ ಸ್ನಾನ ಮಾಡಿಸಿ ಹೆಣದ ಪಕ್ಕದಲ್ಲಿ ಕೂರಿಸಿ ಇಬ್ಬರಿಗೆ ಪೂಜೆ ಮಾಡಿ ಮಡ್ಲಕ್ಕಿ ಹುಯ್ಯುತ್ತಾರೆ. ಶವಕ್ಕೆ ಬಿಳಿಯ ಬಟ್ಟೆಯನ್ನು ತೊಡಿಸುವುದನ್ನು **"ಕೂಡಿಬಟ್ಟೆ"** ಎನ್ನುತ್ತಾರೆ. ಪೋಡಿನ ಸಂಬಂಧಿಕರು ಶವದ ಪೂಜೆ ಮಾಡುವರು. ನಂತರ ಶವ ಹೂಳುವ ಅರ್ಧದಾರಿಯಲ್ಲಿ **ಕಾಲುಕರಣೆ** ಎಂಬ ಶಾಸ್ತ್ರಮಾಡುವರು. (ಕೂಳು ಹೊಡೆಯುವುದು) ಶವವನ್ನು ಹೊತ್ತುಕೊಂಡು ಬರುವ ಹಾದಿಯಲ್ಲಿ ಮಧ್ಯೆ ಮಧ್ಯೆ ಶವವನ್ನು ಇಳಿಸಿ ವಿಶ್ರಮಿಸಿಕೊಳ್ಳುತ್ತಾರೆ. ಶವವನ್ನಿಳಿಸಿದ ಕಡೆ ಎಲ್ಲರೂ ಒಂದೊಂದು ಕಲ್ಲನ್ನಿಡುತ್ತಾರೆ, ಇದನ್ನು ಗೋಪೆಮನೆ, ಸಗ್ಗ ಎಂತಲೂ ಕರೆಯುವರು. ಈ ಹಾದಿಯಲ್ಲಿ ಇಂತಹ ಕಲ್ಲುಗಳ ರಾಶಿಯನ್ನು ಕಾಣಬಹುದು. ಈ ಕಲ್ಲಿನ ರಾಶಿಗಳನ್ನು **ಹಿಂದಗುಂಡ್ಲ ಗುಡ್ಡ** ಎಂದು ಕರೆಯುವರು. ಸೋಲಿಗರು ಅವರದೇ ಆದ ವಿಧಿವಿಧಾನಗಳ ಪ್ರಕಾರ ಶವಸಂಸ್ಕಾರ ಮಾಡುವರು. ಅದರಂತೆ ಸತ್ತಿರುವ ಹೆಣಕ್ಕೆ ಅದೇ ಪೋಡಿನ ತಮ್ಮಡಿ (ಪೂಜಾರಿ ಕುಲದೇವತೆಯನ್ನು ಆರಾಧಿಸುವರು) ಯನ್ನು ಕರೆದು ಸೂರ್ಯ ಮುಳುಗುವುದರೋಳಗೆ **ರಾವು ಕಟ್ಟಿ** ಶಾಂತಿ ಮಾಡುವುದು. ಹೀಗೆ ಸೋಲಿಗರಲ್ಲಿ ಸಾವಿನ ಸಂದರ್ಭದಲ್ಲಿ ಮಾಡುವ ವಿಶೇಷ ಆಚರಣೆಗಳಾಗಿವೆ. ಇವುಗಳನ್ನು ಭಾಷಿಕ ನೆಲೆಯಲ್ಲಿ ಅಧ್ಯಾಯನದಲ್ಲಿ ಚರ್ಚಿಸಲಾಗಿದೆ.

**ರಾವು ಕಟ್ಟುವುದು**

ಸೋಲಿಗರ ಮಾತಿನಲ್ಲಿ ಜೀವ ಆಯ್ದುಬಿಟ್ಟದೆ, ದೆವ್ವವಾಗಿಬುಟ್ಟಿದೆ ಎಂದು ಕರೆಯುತ್ತಾರೆ. ಇದನ್ನು ಗಾಳಿ ಕಟ್ಟುವ ಶಾಸ್ತ್ರವೆಂದು ಕರೆಯುತ್ತಾರೆ. ಇದನ್ನು ಸಮುದಾಯದ ಹಿರಿಯನು ಕಲಿತಿರುತ್ತಾನೆ. ಇದಕ್ಕೆ ರಾವು ಕಟ್ಟುವುದು ಎಂಬುದಾಗಿಯೂ ಸಹ ಕರೆಯುತ್ತಾರೆ. ರಾವು ಕಟ್ಟುವಂತಹ ಸಂದರ್ಭದಲ್ಲಿ ಹಲವಾರು ಮಂತ್ರಗಳನ್ನು ಹೇಳುತ್ತಾನೆ. ಈ ಆಚರಣೆಯು ಒಂದು ಕಡೆ ನಡೆಯುತ್ತಿದ್ದರೆ ಇನ್ನೊಂದು ಕಡೆ ತಿಥಿ (ಜಿನ) ಕಾರ್ಯವು ಮತ್ತೊಂದು ಕಡೆ ನಡೆಯುತ್ತಿರುತ್ತದೆ.[೧೦] ಸೋಲಿಗ ಸಮುದಾಯದಲ್ಲಿ ಇದು ಒಂದು ವಿಶಿಷ್ಟವಾದಂತಹ ಆಚರಣೆಯಾಗಿದೆ. ರಾವು ಕಟ್ಟುವಿಕೆಯು ವಿವಿದ ಆಚರಣೆಗಳ ಮೂಲಕ ತಮ್ಮಡಿಯಿಂದ ನೆರವೇರಿಸುವರು. ತಮ್ಮಡಿಯು ದಿಗ್ಬಂಧನ ಮಾಡುತ್ತಾನೆ. ಈ ಬುಡಕಟ್ಟು ಸಮುದಾಯದಲ್ಲಿ ಒಬ್ಬ ಮನುಷ್ಯ ಯಾವುದೊಂದಾದರು ಆಕಸ್ಮಿಕ ಘಟನೆಗಳಿಂದ ಮನೆಯನ್ನು ಬಿಟ್ಟು ಹೋರಗಡೆ ಅಪಘಾತ, ಮರದ ಕೆಳಗೆ ಬಿದ್ದು ಮರಣ ಹೊಂದಿದ ಸಂದರ್ಭದಲ್ಲಿ ಹಾಗೂ ಕ್ರೂರ ಪ್ರಾಣಿಗಳಿಗೆ ಬಲಿಯಾದಂತಹ ಸಂದರ್ಭದಲ್ಲಿ ಸಮುದಾಯದ ಹಿರಿಯರು ಅಂದರೆ ತಮ್ಮಡಿ ಅಥವಾ ಮಂತ್ರಗಳಿಂದ ಬಿಡಿಸುವವರು ಇವರಲ್ಲಿರುತ್ತಾರೆ. ಇಂತಹವರು ಸತ್ತಂತ ವ್ಯಕ್ತಿಗೆ ಪ್ರತಿರೂಪವಾಗಿ ಮನುಷ್ಯಾಕಾರದ ಒಂದು ಮಣ್ಣಿನ ಬೊಂಬೆಯನ್ನು ಮಾಡಿಕೊಂಡು ತಮ್ಮಡಿಯ ಮುಂದಿಡುತ್ತಾರೆ.

ಮನುಷ್ಯಾಕಾರದ ಮಣ್ಣಿನ ಬೊಂಬೆಗೆ ಒಂದು ಕೋಳಿ ಬಲಿ ಕೊಡುವುದರ ಮೂಲಕ ಹೆಣದ ಶವಸಂಸ್ಕಾರಕ್ಕೆ ಸುಗಮವಾಗುತ್ತದೆಂಬುದು ಅವರ ನಂಬಿಕೆ, ತಮ್ಮಡಿ ಹಸಿ ನೂಲಿನಿಂದ ಬೊಂಬೆಗೆ ಕಟ್ಟಿ ಮಂತ್ರ ಹೇಳಿಕೊಂಡು ದಿಗ್ಬಂಧನ ಮಾಡುವಂತೆ ವಿಳ್ಯೆ ಬಿಟ್ಟು ಕಟ್ಟುತ್ತಾನೆ. ನಂತರ ಸತ್ತಿರುವ ವ್ಯಕ್ತಿಗೆ ಪ್ರತಿರೂಪದ ಬೊಂಬೆಗೆ ತಮ್ಮಡಿಯು ಐದು ಮೊಳೆಗಳನ್ನು ತೆಗೆದುಕೊಂಡು ಸೊಂಟದ ಭಾಗಕ್ಕೆ ಬಡಿದು ಶಾಂತಿ ಮಾಡುತ್ತಾನೆ.

**ಕಡ್ಡಿ ಮುರಿಯುವ ಶಾಸ್ತ್ರ**

ಸೋಲಿಗ ಸಮುದಾಯದಲ್ಲಿ ಗಂಡಸು ಬೇಗನೇ ತೀರಿಕೊಂಡರೆ "ಕಡ್ಡಿ ಮುರಿಯುವ ಶಾಸ್ತ್ರ"ವನ್ನು ಸಮುದಾಯದ ಹಿರಿಯರ ಸಮ್ಮುಖದಲ್ಲಿ ನಡೆಯುತ್ತದೆ. ಕಾರಣ ಮೊದಲ ಪತಿಯಿಂದ ಅಂದರೆ ತೀರಿಕೊಂಡ ಮೇಲೂ ಸಹ ಆಚರಣೆ ಸೋಲಿಗರಲ್ಲಿದೆ. ಗಂಡ ಸತ್ತ ಮಹಿಳೆಗೆ ವಯಸ್ಸು ಕಡಿಮೆಯಾಗಿದ್ದರೆ ಪುನರ್ ವಿವಾಹವಾಗಲು ಅವಕಾಶವಿದೆ. ವಿಧವೆಯಾದಂತಹ ಆ ಹೆಣ್ಣು ಮಗಳ ಒಪ್ಪಿಗೆಯನ್ನು ಪಡೆದು ಈ ಕಾರ್ಯವನ್ನು ಮಾಡುತ್ತಾರೆ. ವಿಧವೆಯಾದಂತಹ ಮಹಿಳೆಯು ಒಪ್ಪಿಗೆಯನ್ನು ನೀಡಿದರೆ, ತಿಥಿ(ಜಿನ)ಕಾರ್ಯ ಮಾಡುವುದಕ್ಕೆ ಮುಂಚಿತವಾಗಿ ಈ ಕಾರ್ಯವನ್ನು ನಡೆಸುತ್ತಾರೆ. ಈ ಕಾರ್ಯಕ್ಕೆ ಸಮುದಾಯದ ಮುಖಂಡರು, ಗಂಡು ಮತ್ತು ಹೆಣ್ಣಿನ ಕಡೆಯವರು ಇಲ್ಲಿ ಬಂದಿರುತ್ತಾರೆ. ಕಡ್ಡಿ ಮುರಿಯಲು ಬಳಸುವ ಕಡ್ಡಿ (ಬಾಣೆ ಹುಲ್ಲಿನದು ) ಮೂರು ಇಂಚು ಉದ್ದವಿರುತ್ತದೆ. ಹಿರಿಯರು ಹೀಗೆ ಕೇಳುತ್ತಾರೆ " ಗಂಡನ ಜೊತೆ ಕೂಡಿ ಬಾಳುವೆಯೋ ಇಲ್ಲ ಹಾಗೆ ಇರುತ್ತಿಯೊ" ಎಂದು. ಅದಕ್ಕೆ ಹೆಣ್ಣುಮಗಳು ಒಪ್ಪಿಗೆ ನೀಡಿದರೆ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಕಡ್ಡಿಯನ್ನು ನೀಡುತ್ತಾರೆ. ಇಲ್ಲಿಗೆ "ನಮಕೂ ನಿಮ್ಮು ಏವ ಸಂಬಂಧವಿಲ್ಲ" ಎಂದು ಹೇಳುವರು. ಆಚರಣೆಯ ನಡೆಯುವ ಸ್ಥಳದಲ್ಲಿ ಒಂಬತ್ತು ಮಂದಿ ಪೋಡಿನ ಜನರು ಬಂದು ಸೇರಿರುತ್ತಾರೆ. ಎಲ್ಲರ ಒಪ್ಪಿಗೆಯ ನಂತರ ಈ ಕಾರ್ಯವನ್ನು ಮುಗಿಸುವರು. ಈ ಒಂದು ಆಚರಣೆಯು ಸೋಲಿಗರಲ್ಲಿ ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿರುವುದನ್ನು ಕಾಣಬಹುದು. ಸೋಲಿಗ ಸಮುದಾಯದಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆ ಇರುವುದರಿಂದ ವಿಧವೆಯನ್ನು ಮದುವೆಯಾಗಲು ಅವಕಾಶ ಕಲ್ಪಿಸಿರಬಹುದೆಂದು ತಿಳಿಯಬಹುದಾಗಿದೆ.[77] ಜೊತೆಗೆ ಆಚರಣೆಯ ಸಂದರ್ಭದಲ್ಲಿ ಕಂಡುಬರುವ ವಿಶೇಷ ಪದಗಳನ್ನು ಕುರಿತು ಭಾಷಿಕವಾಗಿ ಅಧ್ಯಯನದಲ್ಲಿ ಚರ್ಚಿಸಿದೆ.

**ಕಲ್ಲುಗುಡಿ ಸೇವೆ**

ಸೋಲಿಗ ಸಮುದಾಯದಲ್ಲಿ ವ್ಯಕ್ತಿ ತನ್ನ ಜೀವಿತ ಅವಧಿಯಲ್ಲಿ ಅನೇಕ ಪಾಪ ಕಾರ್ಯಗಳನ್ನು ಮಾಡಿರುತ್ತಾನೆ. ಆ ಪಾಪ ಕಳೆದು ಹೋಗದಿದ್ದಲ್ಲಿ ಅವನಿಗೆ ಸ್ವರ್ಗದ ಬಾಗಿಲು ತೆಗೆಯುವುದಿಲ್ಲ ಎಂದು ಅವರ ನಂಬಿಕೆ. ಹಳೆಯ ತಲೆಮಾರಿನಲ್ಲಿ ವ್ಯಕ್ತಿಯು ಸತ್ತಕೂಡಲೆ ಸುಡುವುದಾಗಲಿ,

ಮಣ್ಣಿಗೆ ಹಾಕುವುದಾಗಲಿ ಮಾಡುತ್ತಿರಲಿಲ್ಲ. ಅಂದಿನ ಸಂದರ್ಭದಲ್ಲಿ ಸತ್ತ ವ್ಯಕ್ತಿಯನು ಪೋಡಿನಿಂದ ಸ್ವಲ್ಪ ದೂರದಲ್ಲಿ ಕಲ್ಲುಗುಡಿಯನ್ನು ನಿರ್ಮಿಸಿ, ಅಲ್ಲಿ ಮೂರು ನಾಲ್ಕು ಕಲ್ಲುಗಳಿಂದ ಅಗಲವಾದ ಚಪ್ಪಡಿಗಳಿಂದ ಕಲ್ಲು ಮನೆಯನ್ನು ಭೂಮಿಯಲ್ಲಿ ರಚಿಸಿರುತ್ತಾರೆ. ಸತ್ತ ವ್ಯಕ್ತಿಯನ್ನು ಶವವನ್ನು ಅದರೊಳಗೆ ಇಟ್ಟು ಕಲ್ಲಿನಿಂದ ಮುಚ್ಚುವರು. ಅದರ ಜೊತೆಗೆ ಸತ್ತ ವ್ಯಕ್ತಿಯು ಉಪಯೋಗಿಸುತ್ತಿದ್ದಂತಹ ವಸ್ತುಗಳನ್ನು ಮಡಕೆಗಳಲ್ಲಿ ಹಾಕಿ ಆ ಕಲ್ಲನ್ನು ಮುಚ್ಚುವರು. ಇದಾದ ನಂತರ ಕಲ್ಲು ಹಿಡಿಯುವ ಶಾಸ್ತ್ರವನ್ನು ಮಾಡುತ್ತಾರೆ ಕಲ್ಲು ಹಿಡಿಯುವುದು ಎಂದರೆ ಒಂದು ಕಲ್ಲನ್ನು ಗುರುತಿಗೆ ಕಾಡಿನಿಂದ ತಂದು ಅದಕ್ಕೆ ಅರಿಶಿಣ, ಕುಂಕುಮ, ಸೀಗೆಕಾಯಿಂದ ತೊಳೆದು ಪೂಜೆ ಮಾಡುವರು.

ಸೂತಕವನ್ನು ತೆಗೆಯುವುದಕ್ಕೆ ಮುಂಚಿತವಾಗಿ ಆ ಕಲ್ಲನ್ನು ಪೂಜಿಸುವರು. ಪೂಜೆಯನ್ನು ಮಾಡುವಂತಹ ಸಂದರ್ಭದಲ್ಲಿ ಕಲ್ಲು ತಮ್ಮಡಿಯ ಕೈಯಲ್ಲಿ ಬರಬೇಕು. ಕಲ್ಲು ಕೈಗೆ ಬಂದರೆ ಗಾಳಿ ಇಲ್ಲವೆಂದರ್ಥ ಭಾವಿಸುತ್ತಾರೆ. ಕಲ್ಲು ಕೈ ಸೇರದಿದ್ದರೆ ಗಾಳಿ ಬಂದಿದೆ ಎಂದು ಭಾವಿಸುತ್ತಾರೆ. ಬಂದಂತಹ ಕಲ್ಲನ್ನು ತೆಗೆದುಕೊಂಡು ಹೋಗಿ ಕಲ್ಲುಗುಡಿಗೆ ಇಡುತ್ತಾರೆ. ನಂತರ ಇದಕ್ಕೆ ಕಾರಣವೇನೆಂಬುದನ್ನು ಗುರುತಿಸಿಕೊಂಡು ಕಲ್ಲುಗುಡಿಗೆ ಹೋಗಿ ಪೂಜೆಯನ್ನು ನೆರವೇರಿಸುವರು. ಇದರಲ್ಲಿ ವಿಶೇಷ ಆಚರಣೆ ಎಂದರೆ ಸತ್ತ ವ್ಯಕ್ತಿ ಉಪಯೋಗಿಸುತ್ತಿದ್ದ ವಸ್ತುಗಳನ್ನು ಗುಂಡಿಯಲ್ಲಿ ಶವದ ಜೊತೆಗೆ ಹೂಳುವುದು. ಆದರೆ ಇತ್ತೀಚಿನ ದಿನಗಳಲ್ಲಿ ಮಣ್ಣಿನಲ್ಲಿ ಹೂಳುವುದು ಸಾಮಾನ್ಯವಾಗಿದೆ.

ಸೋಲಿಗ ಸಮುದಾಯದವರಿಗೆ ದೇವರು, ದೆವ್ವ, ಭೂತಗಳ ಬಗ್ಗೆ ಅಪಾರ ನಂಬಿಕೆ ಇದೆ. ಕಲ್ಲನಿಟ್ಟು ಕಲ್ಲು ಸತ್ತವನ ಆತ್ಮವೆಂದು ತಿಳಿದುಕೊಳ್ಳುತ್ತಾರೆ. ದೇಹವಷ್ಟೇ ನಮ್ಮಲ್ಲಿ ಇಲ್ಲ, ಅವನ ಆತ್ಮವು ನಮ್ಮ ಹತ್ತಿರವಿರುತ್ತದೆ ಎಂಬ ನಂಬಿಕೆಯಿಂದ ಕಲ್ಲನ್ನು ತಂದು ಕಲ್ಲು ಗುಡಿಯಲ್ಲಿಡುತ್ತಾರೆ. ಕಲ್ಲುಗುಡಿಗೆ ಹಾಗೂ ಸಮಾಧಿಗೆ ಪ್ರತಿವರ್ಷ ಯುಗಾದಿಯ ಸಂದರ್ಭದಲ್ಲಿ ಹೋಗಿ ಎಡೆ ಹಾಕಿ ಪೂಜೆ ಮಾಡಿ ಬರುತ್ತಾರೆ ಇನ್ನುಳಿದ ಸಂದರ್ಭಗಳಲ್ಲಿ ಅವರು ಸ್ಮಶಾನದ ಕಡೆ ಹೋಗುವುದೇ ಇಲ್ಲ, ಸ್ಮಶಾನಕ್ಕೆ ಇವರು **ಮದನ ಮಾವನ ದಿಂಬ**ವೆಂದು ಕರೆಯುತ್ತಾರೆ. ಇವರಿಗೆ ಸ್ಮಶಾನವೆಂದರೆ ಭಯ, ಭಯವನ್ನು ನಿವಾರಿಸಲು ಗುಂಜಿಶಾಸ್ತ್ರ ಕೇಳಿಸುತ್ತಾರೆ. ಈ ವಿದ್ಯೆಯು ಅನಾದಿ ಕಾಲದಿಂದಲೂ ಮುಂದುವರೆದುಕೊಂಡು ಬಂದಿದೆ. ಈ ಶಾಸ್ತ್ರವನ್ನು ಮಾಡುವರಲ್ಲಿ ಯಾವ ಬೇಡಿಕೆಗಳು ಇರುವುದಿಲ್ಲ.[೨] 'ಮಾವಟಿ ಶಾಸ್ತ್ರ' ಗುಂಡಿಯನ್ನು ಮುಟ್ಟು ಮಾಡಿದ ನಂತರ ಗುದ್ದಲಿಯಿಂದ ಕರೆಯಶಾಸ್ತ್ರ ಮಾಡುವರು. ಸಮಾಧಿಯನ್ನು ತೋಡಿದ ನಂತರ ಗುದ್ದಲಿಯನ್ನು ಬಿಚ್ಚಿ ಆದರ ಕಾವಿನೊಳಗೆ ಹಿಂದು ಮುಂದಾಗಿ ಹಾಕಿ ಕಾಲ ಕೆಳಗಿನಿಂದ ಮೂರು ಬಾರಿ ಎಸೆಯುತ್ತಾರೆ ಇದಕ್ಕೆ **ಮಾವಟ ಶಾಸ್ತ್ರ** ಎಂದು ಕರೆಯುತ್ತಾರೆ. ಇದು ದಕ್ಷಿಣ ಕರ್ನಾಟಕದ

ಭಾಗದಲ್ಲಿ ಸಮಾಧಿ ಮುಚ್ಚಿದ ನಂತರ ಈ ಶಾಸ್ತ್ರ ಮಾಡುತ್ತಾರೆ. "**ಸೊಳ್ಳು ನೋಡುವುದು**" ಶವಸಂಸ್ಕಾರ ಮುಗಿದ ನಂತರದಲ್ಲಿ ಅದರಲ್ಲಿ ಭಾಗಿಯಾದವರು ಪಕ್ಕದ ಹಳ್ಳಕ್ಕೆ ಹೋಗಿ ಸ್ನಾನ ಮಾಡುತ್ತಾರೆ. ಶವವನ್ನು ಹೊತ್ತ ನಾಲ್ಕು ಮಂದಿಯೂ ಒಂದು ಒನಕೆಯ ಮೇಲೆ ಕುಳ್ಳಿರಿಸಿ ನೀರು ಸಿಗೇಕಾಯಿ ಗಂಜಲ ಮುಂತಾದವುಗಳನ್ನು ಸಿಂಪಡಿಸುವರು. ಇದಕ್ಕೆ 'ಹೆಗಲು ತೊಳೆಯುವುದು' ಎನ್ನುತ್ತಾರೆ. ನಂತರ ಎಲ್ಲರು ಸತ್ತ ವ್ಯಕ್ತಿ ಮನೆಗೆ ತೆರಳುವರು ಅಲ್ಲಿ ತಲೆಯನ್ನು ಇಟ್ಟಿದ ಜಾಗದಲ್ಲಿ ಒಂದು ಎಣ್ಣೆಯ ದೀಪವನ್ನು ಹಚ್ಚಿರುತ್ತಾರೆ. ಅದನ್ನು ಶವಸಂಸ್ಕಾರಕ್ಕೆ ಹೋಗಿದ್ದವರೆಲ್ಲರು ನೋಡಿ ಕೈ ಮುಗಿಯುತ್ತಾರೆ. ಇದನ್ನು **ಸೊಳ್ಳು ನೋಡುವುದು** ಎಂದು ಕರೆಯುವರು. ನಂತರ ತಿಥಿಕಾರ್ಯವನ್ನು ಹನ್ನೆರಡು ದಿನಕ್ಕೆ ಮಾಡುತ್ತಾರೆ ಇದಕ್ಕೆ ಐದು ಕುಲದವರು ಸೇರುವುದು ಕಡ್ಡಾಯವಾಗಿದೆ.

**ಜೀನ-ತಿಥಿ**ಗೆ ಸೋಲಿಗರಲ್ಲಿ ಜೀನ ಎಂದು ಕರೆಯುವರು. ಸಾಮಾನ್ಯವಾಗಿ ಎಲ್ಲಾ ಅಗತ್ಯ ಸೌಲಭ್ಯಗಳು ದೊರಕುವ ಕಡೆಯಲ್ಲಿ ನಡೆಸಲಾಗುತ್ತದೆ. ಐದು ಮುದ್ದೆ ಮಾಂಸದ ಸಾರು, ಐದು ಮುತ್ತುಗದ ಎಲೆಗಳ ಮೇಲೆ ಎಡೆ ಹಾಕುವರು. ನಂತರ ಐದು ಕುಲವನ್ನು ಪ್ರತಿನಿಧಿಸುವ ಹಿರಿಯ ವ್ಯಕ್ತಿಗಳಿಗೆ ಊಟ ಬಡಿಸಲಾಗುತ್ತದೆ. ನಂತರ ಕುಲದವರೆಲ್ಲಾ ಊಟ ಮಾಡುವುದು ರೂಢಿಯಲ್ಲಿದೆ.

### ೪.೬. ಹಬ್ಬಗಳು

ಮಾನವನು ಸಮೂಹ ಜೀವಿಯಾಗಿರುವಂತೆ ಧಾರ್ಮಿಕ ಅಥವಾ ಆಧ್ಯಾತ್ಮಿಕ ಜೀವಿಯಾಗಿದ್ದಾನೆ. ಧರ್ಮವು ಮಾನವನ ಜೀವನದ ವಿಶಿಷ್ಟ ಅನುಭವವು ಆಗಿದೆ. ಹಬ್ಬವು ಸಹ ಧಾರ್ಮಿಕ ವಿಧಾನಗಳಿಗನುಸಾರವಾಗಿ ಆಚರಿಸುವ ಒಂದು ವಿಶಿಷ್ಟವಾದ ದಿನ. ಇಲ್ಲಿ ಪರ್ವಕಾಲ, ಉತ್ಸವ ತೃಪ್ತಿ, ಜಿತಣ ಎಂದಿದ್ದಾರೆ. ಹಬ್ಬ ಎಂಬ ಪದವು ಸಂಸ್ಕೃತದ 'ಪರ್ವನ್' ಶಬ್ದದ ತದ್ಭವ ರೂಪ, ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಸೂರ್ಯ ಚಂದ್ರರ ದಿಕ್ಕು ಬದಲಾಗುವುದೇ ಪರ್ವ. ಅದನ್ನೇ ನಮ್ಮ ಪೂರ್ವಜರು ಅಮವಾಸ್ಯೆ, ಹುಣ್ಣಿಮೆಯೆಂದು ಹೆಸರಿಸಿಕೊಂಡಿದ್ದಾರೆ. ಮಾನವನು ತನ್ನ ಬಯಕೆಗಳ ಈಡೇರಿಕೆಗಾಗಿ ಒಂದು ಸೀಮಿತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ ಸಂಪ್ರದಾಯ ಆಚರಣೆ, ಉತ್ಸವಗಳೇ ಹಬ್ಬಗಳಾಗಿವೆ.೧೩ ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿವೆ. ಅದನ್ನು ಬಡವ ಬಲ್ಲಿದರೆನ್ನದೆ ಎಲ್ಲರೂ ಹರುಷದಿಂದ ಆಚರಿಸುತ್ತಾ ಬಂದಿದ್ದಾರೆ.

ಬಾಗ್ಸ್ ಎಂಬ ವಿದ್ವಾಂಸರು ಹಬ್ಬವನ್ನು ಕುರಿತು " Festival is a complex unit of cystoms and other folkore to celebrate a special accasion, usually annunally and the public intereset" ಎಂದು ಹೇಳಿದ್ದಾರೆ. ಸಮಾಜದ ಒಳಿತಿಗಾಗಿ ಮತ್ತು ಸಾಮಾಜಿಕ ಹೊಂದಾಣಿಕೆಗಾಗಿ ಪ್ರತಿವರ್ಷ ವಿಶೇಷ ದಿನಗಳಲ್ಲಿ ನಡೆಸುವ ಸಂಪ್ರದಾಯ

ಆಚರಣೆಗಳೇ ಹಬ್ಬಗಳು. ಹಬ್ಬ ಸಾಮಾನ್ಯವಾಗಿ ಸಾಮೂಹಿಕ ಸ್ವರೂಪದ ಆಚರಣೆಯಾಗಿರುತ್ತದೆ. ತನ್ನ ಬದುಕಿನ ಎಲ್ಲ ಆಗುಹೋಗುಗಳಿಗೂ ದೈವವೇ ಕಾರಣವೆಂದು ನಂಬಿದ ಮಾನವ ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನ ನಡೆಸುವುದರ ಫಲದಿಂದಾಗಿ ಹಬ್ಬಗಳು ಹುಟ್ಟಿಕೊಂಡವು.೧೪

ಪ್ರತಿಯೊಂದು ಸಮುದಾಯದಲ್ಲಿ ತಮ್ಮದೇ ಆದಂತಹ ಸಂಸ್ಕೃತಿ, ಆಚಾರ, ವಿಚಾರ, ವೇಷಭೂಷಣ, ಊರದೇವತೆ, ಆರಾಧ್ಯ ದೇವರು ಕುಲ ದೇವರುಗಳೆಂದು ಹಲವಾರು ರೀತಿಗಳಲ್ಲಿ ತಮ್ಮ ತಮ್ಮ ಸಂಪ್ರದಾಯಕ್ಕನುಗುಣವಾಗಿ ಹಬ್ಬ ಪೂಜೆ, ಪುನಸ್ಕಾರ, ಸಂಭ್ರಮವನ್ನು ಆಚರಿಸಿಕೊಳ್ಳುತ್ತಾ ಬಂದಿರುವುದನ್ನು ಕಾಣುತ್ತೇವೆ. ಇವು ಇತಿಹಾಸವನ್ನು ಕಟ್ಟಿಕೊಡುವಲ್ಲಿ ಪ್ರಮುಖ ಆಕರಗಳಾಗಿವೆ. ಮನುಷ್ಯನಿಗೆ ಆರೋಗ್ಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಅಂಶಗಳನ್ನು ಈ ಹಬ್ಬಗಳಿಂದ ಪಡೆದುಕೊಳ್ಳಬಹುದಾಗಿದೆ.

ಬುಡಕಟ್ಟು ಸಮುದಾಯಗಳಲ್ಲಿ ತಮ್ಮದೇ ಆದ ಆಚರಣೆಯ ಸಾಂಪ್ರದಾಯಿಕ ಮೌಲ್ಯಗಳ ಆಚರಣೆಗಳು ಕಂಡುಬರುತ್ತದೆ. ಇಲ್ಲಿ ಸಾರ್ವತ್ರಿಕವಾಗಿ ಧರ್ಮ ಸಮುದಾಯಗಳು ಒಂದೇ ತೆರನಾಗಿರುವುದಿಲ್ಲ. ಸೋಲಿಗರಲ್ಲಿ ಧಾರ್ಮಿಕ ನಂಬಿಕೆಗಳು, ಪರಂಪರೆ ರೂಢಿ ಸಾಂಪ್ರದಾಯಗಳು ಆಚರಣೆಗಳು ವಿಭಿನ್ನ ರೀತಿಯಲ್ಲಿರುವುದನ್ನು ನೋಡಬಹುದಾಗಿದೆ. ಅಲ್ಲದೇ ಅವುಗಳು ಮೌಲ್ಯಯುತವಾಗಿವೆ.

**೪.೬.೧. ಹೊಸ ರಾಗಿ ಹಬ್ಬ**

ಇದು ಸೋಲಿಗರು ಭೂಮಿ ತಾಯಿಗೆ ಪೂಜೆಯನ್ನು ಸಲ್ಲಿಸುವ ಪಾರಂಪರಿಕ ಹಬ್ಬವಾಗಿದೆ. ಇದನ್ನು ಆಯಾ ಪೋಡಿನ ಜನರು ಸೇರಿ ಒಂದು ನಿರ್ದಿಷ್ಟ ದಿನದಂದು ಆಚರಣೆಯನ್ನು ಮಾಡಲು ತೀರ್ಮಾನಿಸುತ್ತಾರೆ. ಈ ಹಬ್ಬವನ್ನು ಸೋಲಿಗರು ಡಿಸೆಂಬರ್ ಮತ್ತು ಜನವರಿ ತಿಂಗಳಲ್ಲಿ ಆಚರಿಸುತ್ತಾರೆ. ಆ ಸಂದರ್ಭದಲ್ಲಿ ಪೋಡಿನ ತಮ್ಮಡಿಯು ಉಪವಾಸವನ್ನು ಮಾಡಬೇಕಾಗುತ್ತದೆ. ಬೇಯಿಸಿದ ಆಹಾರವನ್ನು ತಿನ್ನುವಂತಿಲ್ಲ. ಹಬ್ಬದ ದಿನದಂದು ಮನೆಯಲ್ಲಾ ಶುಚಿಗೊಳಿಸಿ ಎಲ್ಲರೂ ಸ್ನಾನಮಾಡಿ ಮಡಿಬಟ್ಟೆಯನ್ನು ಧರಿಸುತ್ತಾರೆ. ಈ ಹಬ್ಬದ ದಿನದಂದು ವಿಶೇಷವಾಗಿ 'ರಾಗಿಮುದ್ದೆ' ಅದರ ಜೊತೆಗೆ ಹಲಸಿನ 'ತಾಳ್ವ' (ಒಂದು ತರದ ಪಲ್ಯ)ಮಾಡಿ ಸೋಲಿಗರು ಮೊದಲು ಫಸಲನ್ನು ಮನೆಯಲ್ಲಿ ಯಾರು ಎಂಜಲು ಮಾಡದೇ ಭೂಮಿ ತಾಯಿಗೆ ಅರ್ಪಿಸಬೇಕು. ಮುದ್ದೆ, ರಾಗಿರೊಟ್ಟಿ, ಕುಂಬಳಿಕಾಯಿ ತಾಳ್ವ ಇವುಗಳನ್ನು ಎಡೆಮಾಡಿ ದೇವರಿಗೆ ಕೈಮುಗಿದು "ದೇವ್ರೆ" ಇವತ್ತಿನ ಸಮಯದಲ್ಲಿ ಒನ್ನ ಬಿತ್ತಿ ಎಸರು ಬೆಳ್ದು ಬುಟ್ಟು ಈ ನಿನ್ನ ರ‍್ರುಣಪಾದಕ್ಕೆ ಅರ್ಪಿಸ್ತಿವಿ. ಇನ್ನು ಮುಂದೆ **ಮಕ್ಕಗ ಕೂಚಿನಲ್ಲಿ ಕುಂಜಿನಲ್ಲಿ ಭಗವಂತ ಕಾಪಾಡು** ಎಂದು ಬೇಡಿಕೊಳ್ಳುತ್ತಾರೆ.

ದೇವರ ಹೆಸರನ್ನು ಹೇಳಿ ಒಂದೊಂದು ಎಲೆ ಹಾಕಿ ಎಡೆ ಹಾಕುವರು. ಜೊತೆಗೆ ಪ್ರಾಣಿಗಳ ಹೆಸರುಗಳನ್ನು ಹೇಳಿ ಎಡೆ ಹಾಕುತ್ತಾರೆ. ಕಾಡು ಪ್ರಾಣಿಗಳಿಂದ ರಕ್ಷಿಸುವುದಕ್ಕಾಗಿ ಯಾವುದೇ

ತೊಂದರೆ ಆಗದಿರಲಿ ಎಂಬ ಕಾರಣಕ್ಕಾಗಿ ಕಾಟಿ–ಕಾಡವ್ವ, ಕಡವೆ, ಕಾಡು ಬಡೆಯ–ಮುತ್ತಗಾಯ ದೇವರು, ಕೀಯ–ಕ್ಯಾತದೇವರು, ಹುಲಿ–ಹುಲೀರಪ್ಪ, ಪಡವು, ನಾಗರಹಾವು ಸೀತಾ ಕಲೆ ಇವುಗಳ ಹೆಸರನ್ನು ಹೇಳಿ ದೇವರಲ್ಲಿ ಬೇಡಿಕೊಳ್ಳುವರು.

**೪.೬.೨. ರೊಟ್ಟಿ ಹಬ್ಬ**

ಸೋಲಿಗ ಸಮುದಾಯದಲ್ಲಿ ಅತ್ಯಂತ ಮುಖ್ಯವಾದ ಹಾಗೂ ಸಾಮೂಹಿಕವಾಗಿ ಆಚರಿಸುವಂತಹ ಪ್ರಾಚೀನವಾದಂತಹ ಹಬ್ಬವಾಗಿದೆ. ಸಮುದಾಯದ ಆಚರಣೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪೂರ್ವಿಕರ ಅನೇಕ ವಿವಿಧ ಮಜಲುಗಳನ್ನು ಅರ್ಥೈಸಿಕೊಳ್ಳಲು ಸಹಾಯಕವಾಗುತ್ತದೆ. ಈ ಹಬ್ಬವು ಸಂಕ್ರಾಂತಿಯ ಹಬ್ಬದ ನಂತರ ಮಾಡುವರು. ಸಮುದಾಯದವರೆಲ್ಲಾ ಒಂದು ಕಡೆ ಸೇರಲು ಈ ಹಬ್ಬವು ಅನುಕೂಲಕರವಾಗಿದೆ. ಇವರು ಬೆಳೆದಂತಹ ಬೆಳೆಯು ಇವರ ಕೈ ಸೇರುತ್ತದೆ. ಹುಣ್ಣಿಮೆಯ ದಿನದಂದು ಈ ಹಬ್ಬವನ್ನು ಆಚರಿಸುವರು. ಈ ಹಬ್ಬವು ಜಡೆಸ್ವಾಮಿ ದೇವರಿಗೆ ಕುರಿತಾಗಿರುತ್ತದೆ. ರೊಟ್ಟಿ ಹಬ್ಬವನ್ನು ಆಚರಿಸುವ ದಿನವನ್ನು ಯಜಮಾನ ಕೊಲುಕಾರ ಚಲವಾದಿ ಪೋಡಿನ ಜನರ ಸಮ್ಮುಖದಲ್ಲಿ ಸಭೆಯನ್ನು ಸೇರಿ ನಿರ್ಧರಿಸುತ್ತಾರೆ. ಆ ಪೋಡಿನಲ್ಲಿ ಈ ಹಬ್ಬದ ಖರ್ಚಿಗಾಗಿ ರಾಗಿ ಮತ್ತು ಹಣವನ್ನು ನೀಡಬೇಕಾಗುತ್ತದೆ. ಕೋಲಕಾರನು ಈ ಸಮಯದಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕೆಂದು ನಿರ್ಧರಿಸುತ್ತಾನೆ. ತಮ್ಮಡಿಯು ಉಪವಾಸ ಇರುತ್ತಾನೆ. ದೇವರಿಗೆ ಪೂಜೆ ಸಲ್ಲಿಸಿದ ನಂತರ ವಿಶೇಷವಾದ ಒಲೆಯನ್ನು ನಿರ್ಮಿಸಿ ಅದಕ್ಕೆ ಪೂಜೆಯನ್ನು ಸಲ್ಲಿಸಿ ಕೊಂಡದಲ್ಲಿ ಮುತ್ತುಗದ ಎಲೆಯ ಮೇಲೆ ರಾಗಿ ಹಿಟ್ಟು ತಟ್ಟಿ ಅದನ್ನು ಕೆಂಡದಲ್ಲಿ ಬೇಯಿಸುತ್ತಾರೆ. ಇದನ್ನೇ "ಕೆಂಡದ ರೊಟ್ಟಿ" ಹಾಗೂ "ರೊಟ್ಟಿಪರ" ಎಂದು ಕರೆಯುವರು. ಹೊಸದಾಗಿ ಬೆಳೆದ ರಾಗಿಯ ಪಾಲನ್ನು ಕುಂಬಳ ಬಳ್ಳಿಯಲ್ಲಿ ಮೊದಲಿಗೆ ಬಿಟ್ಟು ಕುಂಬಳಕಾಯಿ ಅಥವಾ ತರಕಾರಿಗಳನ್ನು ದೇವರಿಗೆ ಅರ್ಪಿಸಿದರೆ ಮುಂದಿನ ಫಲ ಹುಲುಸಾಗಿ ಬೆಳೆಯುತ್ತದೆಂಬ ನಂಬಿಕೆ ಸೋಲಿಗರಲ್ಲಿದೆ.

ಈ ಹಬ್ಬದಲ್ಲಿ ಮೈಮೇಲೆ ದೇವರು ಬರುವುದುಂಟು. ಮೆರವಣಿಗೆ ವೇಳೆಯಲ್ಲಿ ಕಗ್ಗ ಹಾಡುವುದು ಕಂಡುಬರುತ್ತದೆ. (ಕಗ್ಗ ಎಂದರೆ ದೇವರ ಸ್ತುತಿ ಮಾಡುವುದು) ದೇವರಿಗೆ ಸಂಧಾನ ರೀತಿಯಲ್ಲಿ ಕಗ್ಗ ಕಾರ್ಯ ನಡೆಯುತ್ತದೆ. ದೇವರ ಸ್ತುತಿಗಳನ್ನು ಹಾಡುವವರ ಕೊರಳಿನಲ್ಲಿ ಹೂವಿನ ಹಾರ ಹಾಗೂ ಕೈಯಲ್ಲಿ ಬೆತ್ತವಿರುತ್ತದೆ. ಕಗ್ಗ ಹಾಡುವವರು ಒಂದೊಂದು ಸಲ ದೇವರನ್ನು ತಡೆಯುತ್ತಾರೆ. ಹೀಗೆ ಮಾಡುವುದಕ್ಕೆ ದೇವರ ಮಂತ್ರ ಎಂದು ಕರೆಯುತ್ತಾರೆ. ಮೆರವಣಿಗೆ ಸಮಯದಲ್ಲಿ ದೇವರು ನಡೆದು ಬರುವ ದಾರಿಯಲ್ಲಿ ಮಡಿಯಾದ ಸೀರೆಗಳನ್ನು ಸೋಲಿಗರು ಹಾಸುವರು. ಮೆರವಣಿಗೆ ಸಂದರ್ಭದಲ್ಲಿ ದೇವರಿಗೆ ಅಲ್ಲಲ್ಲಿ ಹಿಡುಗಾಯಿಯನ್ನು ನೆಲಕ್ಕೆ ಹೊಡೆಯುವ ಸಂಪ್ರದಾಯವಿದೆ.

ಸೋಲಿಗರು ರಾತ್ರಿ ಜೋಗಿ (ಹಾಸ್ಯಗಾರ ರೊಟ್ಟಿಯನ್ನು ಮಾಡುವುದು ಒಂದು ವಿಶೇಷ ಗೋರುಕನ ಕುಣಿತವನ್ನು ಕುಣಿಯುವಾಗ ಕಟ್ಟಿಗೆಗಳಿಂದ ಬೆಂಕೆಯನ್ನು ಹಾಕಿರುತ್ತಾರೆ. ಅದರ ಸುತ್ತಲೂ ಜೋಗಿ ರೊಟ್ಟಿಯನ್ನು ಹಿಡಿದುಕೊಂಡು ಚೇಷ್ಟೆ ಮಾಡುತ್ತಾ ಕುಣಿಯುತ್ತಾ ಹಾಡುನ್ನು ಹಾಡುತ್ತಾ ಚೌಕಕಾರದಲ್ಲಿ ಸುತ್ತಲೂ ಕುಣಿಯುತ್ತಿರುತ್ತಾನೆ. ಈ ಹಬ್ಬದಲ್ಲಿ ರೊಟ್ಟಿಯನ್ನು ಮಾಡಿರುತ್ತಾರೆ. ಗೋರುಕನ ಕುಣಿತ ಮಾಡುವವರು ಹಾಗೂ ನೋಡಲು ಕುಳಿತಿರುವವರಿಗೆ ಚೇಷ್ಟೆ ಮಾಡುತ್ತಾ ಮನರಂಜನೆ ಮಾಡುತ್ತಾನೆ. ಇಡೀ ರಾತ್ರಿ ಸಂತೋಷದಿಂದ ಕಳೆಯುತ್ತಾರೆ.

**೪.೬.೩. ಮಾರಿಹಬ್ಬ**

ಸೋಲಿಗ ಆದಿವಾಸಿ ಸಮುದಾಯದವರಲ್ಲಿ ಶಕ್ತಿ ದೇವತೆಗಳೇ ಹೆಚ್ಚು. ಇವರು ಅಡಗಿನ ದೇವರುಗಳನ್ನು ಹೆಚ್ಚು ಪೂಜಿಸುವುದು ಕಂಡುಬರುತ್ತದೆ. ಪ್ರಾರಂಭದಲ್ಲಿ ಅಲೆಮಾರಿಯಾಗಿದ್ದು ಕೊಂಡು ನಂತರ ಒಂದು ಕಡೆ ನೆಲೆಯೂರಿ ಜೀವನವನ್ನು ಪ್ರಾರಂಭಿಸಿದ್ದಾರೆ. ಹಾಗೆಯೇ ಸಮುದಾಯದಲ್ಲಿ ಅವರದೇ ಆದ ದೇವರುಗಳು ರೀತಿ ನೀತಿ ಆಚಾರ-ಸಾಂಪ್ರದಾಯಗಳು ಬೆಳೆದು ಬರತೊಡಗಿದವು ನಂತರ ಮಾರಮ್ಮ, ಮಾದಮ್ಮ, ಸುಂಕಮ್ಮ, ಗ್ರಾಮದೇವತೆಗಳನ್ನಾಗಿ ಮಾಡಿಕೊಂಡು ಪ್ರತಿವರ್ಷವು ಆ ಹೆಣ್ಣು ದೇವತೆಗೆ ಬಲಿಕೊಡುವುದು ವಿಶೇಷ ಪೂಜೆಸಲ್ಲಿಸುವುದು ಇವರಲ್ಲಿ ಕಂಡುಬರುತ್ತದೆ.

ಮಾರಿಹಬ್ಬದಲ್ಲಿ ತಮ್ಮದೇ ಆದ ಆಚರಣೆ ಸಾಂಪ್ರದಾಯಗಳು ಆಚರಿಸಿಕೊಂಡು ಬಂದಿರುವುದನ್ನು ಇವರಲ್ಲಿ ಕಾಣಬಹುದಾಗಿದೆ. ಕೊಂಡ ಉತ್ಸವಗಳು ಹಾಗೂ ಮೆರವಣಿಗೆ, ಬಲಿಗಳನ್ನು ಕೊಟ್ಟು ಸಮುದಾಯದವರೆಲ್ಲಾ ಸೇರಿ ಓತ, ಟಗರು, ಕೋಳಿ, ಮೇಕೆ ಮುಂತಾದವುಗಳನ್ನು ಗ್ರಾಮದೇವತೆಗೆ ಬಲಿಯನ್ನು ನೀಡಿ ತಮಗೆ ಒಳ್ಳೆಯ ಆರೋಗ್ಯ ಭಾಗ್ಯವನ್ನು ನೀಡಲಿ ಎಂದು ಕೇವಲ ಗ್ರಾಮ ರಕ್ಷಣೆಯಲ್ಲದೆ ಉತ್ತಮ ಮಳೆ ಬೆಳೆ ಕೊಡುವವಳು ಹಾಗೂ ತಮ್ಮ ಮಕ್ಕಳ ಮೇಲೆ ದೃಷ್ಟಿಯಿಟ್ಟು ಕಾಪಾಡುತ್ತಾಳೆ ಎಂಬ ನಂಬಿಕೆ ಉಳ್ಳವರಾಗಿದ್ದಾರೆ. ಆದ್ದರಿಂದ ಮಾರಮ್ಮನ ಜೊತೆಯಲ್ಲಿ ಅಲ್ಲಿನ ಜನತೆಗೆ ತಾಯಿ ಮಕ್ಕಳ ಸಂಬಂಧವಿದೆ. ಇಲ್ಲಿ ಈ ದೇವತೆಗೆ ಪ್ರಿಯವಾದದೆಂದು ನಂಬಿ ಪೂಜಾಕಾರ್ಯವನ್ನು ನೆರಸವೇರಿಸುತ್ತಾರೆ.

**೪.೬.೪. ಸುಂಕಮ್ಮನ ಹಬ್ಬ**

ಸುಂಕಮ್ಮ ಸೋಲಿಗರ ಸಮುದಾಯದ ಮಹತ್ವದ ದೇವತೆ. ಇವಳನ್ನು ಇವರು 'ತಾಯಿ' ಯ ಸ್ಥಾನವನ್ನು ನೀಡಿದ್ದಾರೆ. ಅಲ್ಲದೇ ಇವರ ಪುರಾಣಕತೆಗಳಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಇವರು ವಿಶೇಷವಾಗಿ ಸುಂಕಮ್ಮನ ಹಬ್ಬವನ್ನು ಆಚರಿಸುತ್ತಾರೆ. ಇಲ್ಲಿ ವಿಶೇಷತೆ ಎಂದರೆ ರಾಗಿಯ ಮೆದೆಗೆ ಹಾಗೂ ದನದ ಕೊಟ್ಟಿಗೆಗೆ ಗೊಬ್ಬರದ ಗುಂಡಿಳಿಗೆ ಸಿಂಗಾರ ಮಾಡುವರು. ಈ ದಿನ ಸುಂಕಮ್ಮ ಮನೆಗೆ ಬರುತ್ತಾಳೆ ಎಂಬ ನಂಬಿಕೆ ಇವರಲ್ಲಿದೆ.

## ೪.೭. ಜಾತ್ರೆ

ಸಾಮಾನ್ಯವಾಗಿ ಬುಡಕಟ್ಟುಗಳು ಜಾತ್ರೆ ಮತ್ತು ಉತ್ಸವಗಳಲ್ಲಿ ತಮ್ಮ ಸಮುದಾಯದ ಆಚರಣೆಗಳಿಗೆ ಮಹತ್ವದ ಸ್ಥಾನ ನೀಡಿ ತಮ್ಮ ಆರಾಧ್ಯ ದೇವರ ಸೇವೆಯನ್ನು ಚಾಚೂ ತಪ್ಪದೆ ನೆರವೇರಿಸುತ್ತಾರೆ. ಸಾಮಾನ್ಯವಾಗಿ ಆದಿವಾಸಿಗಳು ದೇವರ ಸೇವೆ ಮಾಡುತ್ತಾರೆ. ಆದರೆ ಅದರಿಂದ ಪ್ರತಿಫಲ ನಿರೀಕ್ಷಿಸುವುದಿಲ್ಲ. ಇಲ್ಲಿ ಭಕ್ತಿಗೆ ಪ್ರಾಧಾನ್ಯತೆ ನೀಡುತ್ತಾರೆ. ಬುಡಕಟ್ಟು ಸಮುದಾಯಗಳ ಜಾತ್ರೆಗಳನ್ನು ಗಮನಿಸಿದಾಗ ಅಲ್ಲಿ ಸ್ನೇಹ, ಸಹಕಾರ, ಸಂಬಂಧಗಳಿಂದ ಬೆಳೆದುಕೊಂಡು ಬಂದಿರುವುದು ಎದ್ದು ಕಾಣುತ್ತದೆ. ಬಿಳಿಗಿರಿರಂಗನ ಬೆಟ್ಟದಲ್ಲಿ ನಡೆಯುವ ಬಿಳಿಗಿರಿ ರಂಗಸ್ವಾಮಿಯ ಜಾತ್ರೆಯು ಸೋಲಿಗರ ಅಧೀನದಲ್ಲಿಯೇ ನಡೆಯುತ್ತದೆ. ಜಾತ್ರೆಗಳಿಗೆ ಸಂಬಂಧಿಸಿದ ಎಲ್ಲಾ ಕೆಲಸಕಾರ್ಯಗಳನ್ನು ಸೋಲಿಗರೇ ನಿರ್ವಹಿಸುತ್ತಾರೆ. ಸೋಲಿಗರು ಈ ಜಾತ್ರೆಯಲ್ಲಿ ಯಾವ ಫಲಾಪೇಕ್ಷೆಗಳನ್ನು ನಿರೀಕ್ಷಿಸುವುದಿಲ್ಲ. ಬಿಳಿಗಿರಿರಂಗನ ಜಾತ್ರೆಯ ಪೂಜೆ ಮತ್ತು ಆರಾಧನೆಯನ್ನು ಪುರೋಹಿತರೇ ನಿರ್ವಹಿಸುತ್ತಾರೆ. ಇಲ್ಲಿ ಸೋಲಿಗರಿಗೆ ಅವಕಾಶವಿಲ್ಲ. ಜಾನಪದರಲ್ಲಿ ಒಂದು ಗಾದೆಯಿದೆ. "ಹಬ್ಬದೂಟ ಚಂದ, ಜಾತ್ರೆ ನೋಟ ಚಂದ" ಈ ಗಾದೆಗೆ ಪೂರಕವೆಂಬಂತೆ ಸೋಲಿಗರಲ್ಲಿ ನಡೆಯುವ ಜಾತ್ರೆ ಮತ್ತು ಹಬ್ಬಗಳು ಅತ್ಯಂತ ಸುಂದರವಾಗಿ ನಡೆಯುತ್ತವೆ. ಜಾತ್ರೆಯೆಂದರೆ ಒಂದು ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ಜನಪದ (Folk group) ವೊಂದು ನಿರ್ದಿಷ್ಟ ದೈವವೊಂದಕ್ಕೆ ಸಾಂಪ್ರದಾಯಿಕ ಪೂಜೆ ಪುರಸ್ಕಾರದ ಆಚರಣೆಗಳನ್ನು ನಡೆಸುವುದಕ್ಕೆ 'ಜಾತ್ರೆ' ಎಂದು ಕರೆಯಬಹುದು. ಜಾತ್ರೆಗಳು ಬುಡಕಟ್ಟು ಜನರ ಜೀವನದ ಅವಿಭಾಜ್ಯ ಅಂಗಗಳಾಗಿರುತ್ತವೆ. ಜಾತ್ರೆ ಉತ್ಸವ, ಹಬ್ಬಗಳು ಸಮಾಜದ ಏಳಿಗೆಗಾಗಿ ದೇವತೆಗಳ ಸಂಪ್ರೀತಿಗಾಗಿ, ಜನರ ಸಂತೋಷಕ್ಕಾಗಿ, ಬಹಳ ಹಿಂದಿನಿಂದಲೂ ನಡೆಯುತ್ತಾ ಬಂದಿರುವುದು ಎಲ್ಲರಿಗೂ ತಿಳಿದಿರುವ ವಿಚಾರ, ಜಾತ್ರೆಗಳು ಒಂದು ಕಡೆ ಸಂಭ್ರಮ ಮೂಡಿಸಿದರೆ ಮತ್ತೊಂದು ಕಡೆ ಹಬ್ಬದ ವಾತಾವರಣವನ್ನು ಉಂಟುಮಾಡುತ್ತದೆ. ಬಿಳಿಗಿರಿ ರಂಗಸ್ವಾಮಿ ಜಾತ್ರೆ ಮತ್ತು ಆರಾಧನೆಯನ್ನು ಸೋಲಿಗರು ಅತ್ಯಂತ ಪೂಜ್ಯನೀಯ ಭಾವನೆಯಿಂದ ಕೈಗೊಳ್ಳುತ್ತಾರೆ. ಏಕೆಂದರೆ ಬಿಳಿಗಿರಿ ರಂಗಸ್ವಾಮಿ ಸೋಲಿಗರ ಭಾವನಾಗುತ್ತಾನೆ ಎಂಬುದು ಅವರ ನಂಬಿಕೆ.೧೦ ಈ ಕಾರಣಕ್ಕಾಗಿ ಸೋಲಿಗರು ಈ ದೈವದ ಆರಾಧನೆಯು ಜಾತ್ರೆಯಲ್ಲಿ ಅತ್ಯಂತ ನಿಷ್ಠೆ ಮತ್ತು ಭಕ್ತಿಯಿಂದ ಪಾಲ್ಗೊಳ್ಳುತ್ತಾರೆ. ಜಾತ್ರೆಯಲ್ಲಿ ಒಂದೊಂದು ಕುಲದವರು ಒಂದೊಂದು ಕೆಲಸವನ್ನು ಮಾಡುತ್ತಾರೆ.

ಸೋಲಿಗರ ಸಮುದಾಯದಲ್ಲಿ ಜಾತ್ರೆಗೆ ವಿಶೇಷ ಪ್ರಾಧಾನ್ಯತೆ ನೀಡಿದ್ದಾರೆ. ಈ ಜಾತ್ರೆಯು ಜನವರಿಯಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ನಡೆಯುವ ಜಾತ್ರೆಯನ್ನು ಚಿಕ್ಕಜಾತ್ರೆ ಎಂದು ಕರೆಯುವರು. ಇದು ಸಂಕ್ರಾಂತಿಯ ಹಬ್ಬದಲ್ಲಿ ನಡೆಯುತ್ತದೆ. ಈ ಜಾತ್ರೆಯನ್ನು ಸೋಲಿಗರು ಒಪ್ಪಂದದ ದಿನ ಎಂದು ಆಚರಣೆ ಮಾಡುತ್ತಾರೆ. ತನ್ನ ಭಾವನಾದ ಬಿಳಿಗಿರಿ ರಂಗಪ್ಪನಿಗೂ

ಸೋಲಿಗರ ಮಗಳಾದ ಕುಸುಮಾಲೆಗೂ ಒಪ್ಪಂದ ಮಾಡಿಕೊಳ್ಳುವುದು ಎಂದಿದ್ದಾರೆ. ಸಮುದಾಯದ ಎಲ್ಲಾ ಸದಸ್ಯರು ಒಂದೆಡೆ ಸೇರಿ ಆ ಪೋಡುಗಳ ಸದಸ್ಯರು ಜಾತ್ರೆಯಲ್ಲಿ ಒಂದೊಂದು ಕೆಲಸವನ್ನು ವಹಿಸಿಕೊಳ್ಳುತ್ತಾರೆ. ಈ ಜಾತ್ರೆಯಲ್ಲಿ ಮೊಲ ಬೇಟೆಯನ್ನು ತಂದಿರುತ್ತಾರೆ. ಇದರ ವಿಶೇಷತೆ ಎಂದರೆ ಬಿಳಿಗಿರಿ ರಂಗಸ್ವಾಮಿಯು ತನ್ನ ಹೆಂಡತಿಯರಾದ ಲಕ್ಷ್ಮೀದೇವಿ ಮತ್ತು ತೊಳಸಮ್ಮರಿಗೆ ಸುಳ್ಳು ಹೇಳಿ ಬೇಟೆಗೆ ಹೋಗುವುದು. ಮೊಲದ ಬೇಟೆ ಜೀವಂತವಾಗಿರುತ್ತದೆ. ಮೊಲಕ್ಕೆ ಸಿಂಗರಿಸಿ ಅಂದರೆ ಕಿವಿಗೆ ಓಲೆ ಮೂಗುತಿ ಹಾಕಿ ಮತ್ತೆ ಬಿಡುತ್ತಾರೆ. ಈ ಜಾತ್ರೆಯಲ್ಲಿ ಸೋಲಿಗರಲ್ಲದೆ ನಗರ ಮತ್ತು ಬೇರೆ ಬೇರೆ ಊರುಗಳಿಂದ ಜನರು ಬಂದಿರುವರು.

**ದೊಡ್ಡಜಾತ್ರೆ**

ದೊಡ್ಡಜಾತ್ರೆಯು ಮೇ ತಿಂಗಳಲ್ಲಿ ನಡೆಯುತ್ತದೆ. ಬಿಳಿಗಿರಿ ರಂಗಸ್ವಾಮಿಯು ಸೋಲಿಗರ ಮಗಳಾದ ಕುಸುಮಾಲೆಯನ್ನು ಲಗ್ನವಾದ ದಿನವೆಂದು ಕರೆದಿದ್ದಾರೆ. ಸೋಲಿಗರು ಅಕ್ಕನ ಮದುವೆ ಎಂದು ಸಂಭ್ರಮಾಚರಣೆಯಿಂದ ಆಚರಿಸುವರು. ಸೋಲಿಗರು ಚಿಕ್ಕ ಜಾತ್ರೆಯಲ್ಲಿ ನಿರ್ವಹಿಸಿದ ರೀತಿಯಲ್ಲಿಯೇ ದೊಡ್ಡಜಾತ್ರೆಯಲ್ಲಿಯೂ ಸಹ ತಮ್ಮ ತಮ್ಮ ಪೋಡಿನ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾರೆ. ಈ ಸಂದರ್ಭದಲ್ಲಿ ಆನೆವನ ಉತ್ಸವ, ಗರುಡ ಉತ್ಸವ, ಬಸವ ಉತ್ಸವ, ಕರ್ಪೂರೋಸ್ಥವಗಳು ನಡೆಯುತ್ತವೆ.

ಈ ಜಾತ್ರೆಯಲ್ಲಿ ಬ್ರಾಹ್ಮಣರು ರಾಕ್ಷಸ ಸಂಹಾರ ಎಂಬ ಉತ್ಸವವನ್ನು ಮಾಡುವರು. ಇದಾದ ನಂತರ ಸೀಗೆ ಬೆಟ್ಟದ ಸೋಲಿಗರು ಕಲ್ಯಾಣಿ ಉತ್ಸವ ನಡೆಸುವರು. ನಂತರ ಹೆಗಲು ತೊಳೆಯುವುದು ಎಂದು ಮಾಡುತ್ತಾರೆ. ಮದುವೆಯ ನಂತರ ಮಾರವ ಶಾಸ್ತ್ರವನ್ನು ದೇವರಿಗೆ ಮುದ್ಧಣ ಮಾಡಿಸುವುದು ಎಂದು ಕರೆಯುತ್ತಾರೆ. ದೇವರಿಗೆ ಸ್ನಾನಮಾಡಿಸಿ ತೆಪ್ಪದಲ್ಲಿ ತಿರುಗಿಸುವುದು ದೊಣ್ಣೆಮುರಿಸೋದು ಇಲ್ಲಿ ಬಿಳಿಗಿರಿರಂಗಪ್ಪನಿಗೆ ಮದುವೆಗೆ ಮುಂಚೆ ಮಾಡುತ್ತಾರೆ. ಅಂದರೆ ಕುಸುಮಾಲೆಯನ್ನು ಕದ್ದು ಒಯ್ದು ರಂಗಪ್ಪನಿಗೆ ಸೋಲಿಗರು ದೊಣ್ಣೆಯಿಂದ ಹೊಡೆಯಲು ಹೋಗುವುದು, ದೊಣ್ಣೆಯಿಂದ ಮೂರು ಬಾರಿ ಬಿಳಿಗಿರಿ ರಂಗಸ್ವಾಮಿಗೆ ಮುಟ್ಟಿಸುತ್ತಾರೆ. ಇದು ಸೋಲಿಗ ಸಮುದಾಯದ ಛಲವಾದಿ ಮನೆತನದವರು ಮಾಡುವರು.

ಜಾತ್ರೆಯನ್ನು ಸೋಲಿಗರು ಅಕ್ಕನ ಮದುವೆ ಎಂದು ಕರೆಯುತ್ತಾರೆ. ಚಿಕ್ಕ ಜಾತ್ರೆ ದೊಡ್ಡಜಾತ್ರೆ ಇಲ್ಲಿ ಸೋಲಿಗರೇತರರು ಸಹ ಭಾಗವಹಿಸುವುದನ್ನು ಕಾಣಬಹುದಾಗಿದೆ.

**ಮುನಿ**

ಸೋಲಿಗರು ವ್ಯವಸಾಯದ ಭೂಮಿಯಲ್ಲಿ ಜಡೆಮುನಿಯು ಇರುತ್ತಾನೆ ಎಂಬುದನ್ನು ನಂಬಿದ್ದಾರೆ. ವ್ಯವಸಾಯ ಮಾಡುವ ಭೂಮಿಗೆ ಪೂಜೆ ಪುನಸ್ಕಾರಗಳು ನಡೆಯುವುದರಿಂದ ವರ್ಷಕ್ಕೆ ಒಂದು ಬಾರಿ ಜಮೀನಿನಲ್ಲಿ ಮುನಿ ಹಬ್ಬ ಆಚರಿಸುತ್ತಾರೆ. ತಾವು ಬೆಳೆದ ಫಲಫಸಲು ತಮ್ಮ ಕೈಸೇರಿದ ನಂತರ ಭೂಮಿಯಲ್ಲಿ ಮುನಿ ಮಾಡುತ್ತಾರೆ.

**ಸಂಕ್ರಾಂತಿ ಹಬ್ಬ**

ಇದು ಸಾಮಾನ್ಯವಾಗಿ ಪಶು, ಪ್ರಾಣಿ, ಜಾನುವಾರುಗಳಿಗೆ ಸಂಬಂಧಿಸಿದ ಹಬ್ಬ. ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿಯೂ ಬೇರೆ ಬೇರೆ ಹೆಸರುಗಳಲ್ಲಿ ಆಚರಣೆ ಮಾಡುವುದನ್ನು ಕಾಣುತ್ತೇವೆ. ಉತ್ತರ ಕರ್ನಾಟಕದ ಭಾಗದಲ್ಲಿ ಇದನ್ನು ಕಾರಹುಣ್ಣಿಮೆ ಎಂದರೆ, ದಕ್ಷಿಣ ಕರ್ನಾಟಕದಲ್ಲಿ ಸಂಕ್ರಾಂತಿ ಮತ್ತೆ ಕೆಲವೆಡೆ **ಮುಂಗಾರಿ ಹಬ್ಬ** ಎಂದು ಕರೆಯುತ್ತಾರೆ. ದಕ್ಷಿಣ ಕರ್ನಾಟಕದ ಮಂಡ್ಯ, ಮೈಸೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಕೋಲಾರ ಮುಂತಾದ ಜಿಲ್ಲೆಗಳಲ್ಲಿ ಈ ಹಬ್ಬವನ್ನು ಎಲ್ಲಾ ಜನರು ಆಚರಿಸುತ್ತಾರೆ. ಸೋಲಿಗ ಸಮುದಾಯದಲ್ಲಿ ದನಕರುಗಳು ಇರುವವರು ದನಕರುಗಳನ್ನು ಚೆನ್ನಾಗಿ ಮೈತೊಳೆದು ಮನೆಯಲ್ಲಿ ಈ ಹಬ್ಬವನ್ನು ಆಚರಣೆ ಮಾಡುತ್ತಾರೆ.

**ಯುಗಾದಿ**

ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಯುಗಾದಿ ಆರಂಭದ ವರ್ಷ. ಇತ್ತೀಚಿನ ತಲೆಮಾರಿನವರಲ್ಲಿ ಸಹ ವಿಶೇಷವಾಗಿ ಈ ಹಬ್ಬವನ್ನು ಆಚರಣೆ ಮಾಡುವುದು ಕಂಡುಬರುತ್ತದೆ. ಎಣ್ಣೆ ಸ್ನಾನ ಮಾಡಿ ಹೊಸಬಟ್ಟೆಯನ್ನ ಹಾಕಿಕೊಂಡು ಹಬ್ಬವನ್ನು ಆಚರಿಸುವರು. ಹಬ್ಬವಾದ ನಂತರ **"ಹೊಸತಡುಕು"** ಮಾಡಿ ಎಲ್ಲಾರು ಮಾಂಸದಡಿಗೆ ಮಾಡಿ ಊಟ ಮಾಡುತ್ತಾರೆ. ಹಾಗೆಯೇ ಗೌರಿ–ಗಣೇಶ ಹಬ್ಬವನ್ನು ಸಹ ಆಚರಣೆಮಾಡುವರು. ಗಣೇಶ ಮೂರ್ತಿಯನ್ನು ಪೋಡುಗಳಲ್ಲಿ ಇಟ್ಟು ವಿಜೃಂಭಣೆಯಿಂದ ಆಚರಣೆ ಮಾಡುತ್ತಾರೆ.

**೪.೮. ಸೋಲಿಗರ ನಂಬಿಕೆಗಳು**

ಸಂಪ್ರದಾಯ, ಸಂಸ್ಕಾರ ಆಚರಣೆ ಆರಾಧನೆ ನಂಬಿಕೆ ಇತ್ಯಾದಿ ಪದಗಳು ಜನ ಸಮುದಾಯವೊಂದರಲ್ಲಿ ಸಂಕೀರ್ಣ ರೂಪದಲ್ಲಿ ಬಳಕೆಗೊಳ್ಳುತ್ತದೆ. ಖಚಿತವಾದಂತಹ ವಿರವಣೆಯನ್ನು ಕೊಡಲು ಕಷ್ಟಕರವಾಗಿರುತ್ತದೆ. ಆಚರಣೆಯು ಸಮುದಾಯದ ಒಂದು ಒಪ್ಪಿಗೆ ಪಡೆದು ತಲೆತಲಾಂತರದಿಂದ ಅನುಸರಿಸಲಾಗುತ್ತಿರುವ ಒಂದು ಪ್ರಕ್ರಿಯೆಯೆನ್ನಬಹುದು. ನಂಬಿಕೆಯೇ ಈ ಆಚರಣೆಯ ಮೂಲಧಾತುವಾಗಿರುತ್ತದೆ. ಬುಡಕಟ್ಟು ಸಮುದಾಯದಲ್ಲಿಯೂ ಹಾಗೂ ಬುಡಕಟ್ಟೇತರ ಸಮುದಾಯದಲ್ಲಿಯೂ ಕೂಡ ಒಂದಲ್ಲ ಒಂದು ರೀತಿಯಲ್ಲಿ ನಂಬಿಕೆಗಳು ಕಂಡುಬರುತ್ತದೆ.

೧. ಹುಡುಗಿ ಕನ್ಯೆಯಾದ ಸಂದರ್ಭ ಮನೆಯಲ್ಲಿ ಯಾರಾದರೂ ತೀರಿಕೊಂಡಾಗ ಮಗು ಜನಿಸಿದ ಸಂದರ್ಭದಲ್ಲಿ ಸೂತಕವನ್ನು ಆಚರಿಸುತ್ತಾರೆ.
೨. ಹುಡುಗಿ ಮೈನೆರೆದ ಸಂದರ್ಭದಲ್ಲಿ ತಕ್ಷಣವೇ ಮನೆಯ ಹೊರಗೆ ಮೂಲೆಯೊಂದರಲ್ಲಿ ಕೂಡಿಸುತ್ತಾರೆ.

೩. ಮೈನೆರೆದ ಹುಡುಗಿ ಜೇರೆಯವರನ್ನು ಮುಟ್ಟಿಸಿಕೊಳ್ಳುವ ಹಾಗಿಲ್ಲ. ಮನೆಯಲ್ಲಿ ೯ ದಿನಗಳ ಕಾಲ ಸೂತಕದ ವಾತಾವರಣ ಇರುತ್ತದೆ. ಯಾವುದೇ ಶುಭ ಕಾರ್ಯಗಳು ನಡೆಯುವಲ್ಲಿ ನೋಡಲು ಹೋಗುವುದಿಲ್ಲ.

೪. ಸತ್ತ ವ್ಯಕ್ತಿಯ ಗಿಡದ ಮನೆಯು ಸೂತಕವಾಗಿರುತ್ತದೆ. ಆ ವ್ಯಕ್ತಿಯ ಮನೆಯಲ್ಲಿ ಯಾವುದೇ ಶುಭ ಕಾರ್ಯಗಳನ್ನು ಸೂತಕ ತೆಗೆಯುವವರೆಗೆ ಮಾಡುವಂತಿಲ್ಲ.

೫. ಲಿಂಗಮಣಿ ಗಿಡದ ಜೇರನ್ನು ಭಾನುವಾರದಂದು ಬರುವ ಅಮವಾಸ್ಯೆಯಲ್ಲಿ ಕಿತ್ತು ಒಣಗಿಸಬೇಕು. ಅದನ್ನು ಸುಟ್ಟು ಕೊಬ್ಬರಿ ಎಣ್ಣೆಯಲ್ಲಿ ಬೆರಸಿ ಇಟ್ಟುಕೊಂಡು ಹೋದರೆ ಎಲ್ಲರೂ ಗೌರವದಿಂದ ಕಾಣುತ್ತಾರೆ. ನಮಗೆ ಯಾರು ಕೆಡುಕು ಮಾಡಲು ಬಯಸುವುದಿಲ್ಲ ಎಂಬ ನಂಬಿಕೆ ಇದೆ.

೬. ಗೆದ್ದಲು ಹುಳು ಬಂದರೆ ಗೆದ್ದಲು ಮಳೆ ಬರುವ ಸೂಚನೆಯನ್ನು ನೀಡುತ್ತದೆ ಎಂಬುದು ಇವರ ನಂಬಿಕೆ.

೭. ಕಾರಿ ಹಕ್ಕಿಯನ್ನು ಸಾವಕ್ಕಿ. ಸಾವಕ್ಕಿ ಸಾವಿನ ಸುದ್ದಿಯನ್ನು ಕಳಿಸುತ್ತದೆ ಎಂಬ ನಂಬಿಕೆ. ಕಿಟರ್ ಎಂದರೆ ಯಾರಿಗಾದರು ಅಪಾಯಕಾದಿದೆ. ಅಪಶಕುನದ ಸಂಕೇತ ಆ ದಿವಸ ಯಾರು ಕಾಡಿಗೆ ಹೋಗುವುದಿಲ್ಲ. ಕಿರ್‌ಕಿರ್ ಎಂದರೆ ಒಳ್ಳೆಯದು ಎಂಬ ನಂಬಿಕೆ.

೮. ಕಾಡುಗುಮ್ಮ (ಕಾಡುಗೂಬೆ) ನಾಡಿನ ಗೂಬೆಗಿಂತ ಸ್ವಲ್ಪ ದೊಡ್ಡಗಾತ್ರದ್ದು, ಈ ಕಾಡುಗುಮ್ಮ ಕೂಗಿದರೆ ಮಾಯ ಮಾಡುವರು ಬಂದಿದ್ದಾರೆ ಎಂಬ ನಂಬಿಕೆ.

೯. ಜೀವಂತವಿರುವ ಆನೆಯ ಬಾಲದ ಕೂದಲನ್ನು ಬೇರು ಸಮೇತ ಕಿತ್ತು ತಂದು ಅದನ್ನು ಉಂಗುರ ಅಥವಾ ತಾಯಿತದಲ್ಲಿ ಸೇರಿಸಿ ಧರಿಸಿಕೊಂಡರೆ ಭಯ ನಿವಾರಣೆಯಾಗುತ್ತದೆ ಎಂಬುದಾಗಿ ನಂಬಿಕೆ.

೧೦. ವ್ಯವಸಾಯದ ಭೂಮಿಯಲ್ಲಿ ಜಡೆಮುನಿ ದೇವರು ಇರುತ್ತಾರೆ ಎಂಬ ನಂಬಿಕೆ.

೧೧. ಮಕ್ಕಳು ಹೆಚ್ಚು ಅಳುತ್ತಿದ್ದರೆ ಮಗುವಿಗೆ ದೃಷ್ಟಿಯಾಗಿದೆಯೆಂದು ಉಪ್ಪು ಮೆಣಸಿನಕಾಯಿ ಕಸಬರಿಕೆಯಿಂದ ಮಗುವಿಗೆ ಅಡಿಯಿಂದ ಮುಡಿಯತನಕ ಮೂರು ಸಾರಿ ನೀವಳಿಸಿ ಒಲೆಯೊಳಗೆ ಹಾಕಿದರೆ ದೃಷ್ಟಿ ಹೋಗುತ್ತದೆ ಎಂಬ ನಂಬಿಕೆ.

೧೨. ಹುಡುಗಿಯು ಮೈನೆರೆದ ಸಂದರ್ಭದಲ್ಲಿನ ಮೈಲಿಗೆಯನ್ನು ಸರಿಯಾದ ರೀತಿಯಲ್ಲಿ ಆಚರಣೆಯ ಮಾಡದಿದ್ದಲ್ಲಿ ಕಾಡು ಪ್ರಾಣಿಗಳು ದಾಳಿ ಮಾಡುತ್ತದೆ. ಮತ್ತೆ ಮಳೆ ಬೆಳೆ ಕೈ ಸೇರುವುದಿಲ್ಲ ಎಂಬ ನಂಬಿಕೆಯಿದೆ.

೧೩. ಬಸುರಿ ಹೆಂಗಸು ಹಾವು ನೋಡಬಾರದು.

೧೪. ಮಗುವನ್ನು ಕಾಲಿನಿಂದ ಮುಟ್ಟಬಾರದು.

೧೫. ಬಾಗಿಲ ಹೊಸ್ತಿಲ ಮೇಲೆ ನಿಂತು ಸೀನಬಾರದು.

೧೬. ಒಂಟಿ ಸೀನು ಸೀನಬಾರದು. ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ.

೧೭. ಹೆಣ್ಣು ಮಕ್ಕಳಿಗೆ ಕಪ್ಪು ಮಚ್ಚೆ ದೇಹದ ಬಲಭಾಗದಲ್ಲಿ ಇದ್ದರೆ ಹಾಗೂ ಗಂಡುಮಕ್ಕಳಿಗೆ ಎಡಭಾಗದ ಕಪ್ಪುಯಿದ್ದರೆ. ತೊಂದರೆ ಅನುಭವಿಸುತ್ತಾರೆ ಎಂಬ ನಂಬಿಕೆ ಇದೆ.

೧೮. ಶವಸಂಸ್ಕಾರಕ್ಕೆ ಹೋದವರು ಸ್ನಾನ ಮಾಡಿಕೊಂಡು ಮನೆಯ ಒಳಗೆ ಬರಬೇಕು.

೧೯. ಮಳೆಕರೆವ ಆಚರಣೆಯಲ್ಲಿ ವಿವಾಹಿತ ಹೆಣ್ಣುಮಕ್ಕಳು ಮಾತ್ರ ಭಾಗವಹಿಸಬೇಕು. ಯಾವುದೇ ಕಾರಣಕ್ಕೂ ಗಂಡುಮಕ್ಕಳು ಹತ್ತಿರ ಸುಳಿಯುವಂತಿಲ್ಲ. ಒಂದು ಪಕ್ಷ ಗಂಡು ಮಕ್ಕಳು ಹೋದದ್ದೇ ಆದರೆ ಕಲ್ಲಾಗುತ್ತಾರೆ ಎಂದು ಇವರ ನಂಬಿಕೆ.

೨೦. ಗರ್ಭಿಣಿಯ ಮತ್ತು ಅವರ ಗಂಡನು ಶವಸಂಸ್ಕಾರ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಬಿಡುವುದಿಲ್ಲ. ಹಾಗೆಯೇ ಗರ್ಭಿಣಿಯ ಗಂಡನು ಕಾಡಿನಲ್ಲಿ ತಿರುಗಾಡುವಂತಿಲ್ಲ.

೨೧ ಗಂಡು ಮಕ್ಕಳು ಒಂದರಿಂದೆ ಒಂದರಂತೆ ಐದು ಜನ ಗಂಡು ಮಕ್ಕಳು ಹುಟ್ಟುಬಾರದು ಎಂಬುದು ಇವರ ನಂಬಿಕೆ.

೨೨. ಕಾಗೆಯು ಮನೆಯ ಮೇಲೆ ಕಾ ಕಾ ಎಂದು ಕಿರುಚಿಕೊಂಡರೆ ನೆಂಟರು ಬರುವರು ಎಂಬುದನ್ನು ನಂಬಿದ್ದಾರೆ.

೨೩. ಸೋಲಿಗರು ಬೇಟೆಗೆ ಹೋಗುವಂತಹ ಸಂದರ್ಭದಲ್ಲಿ ಹಾವು ಎಡಕ್ಕೆ ಹರಿದು ಹೊದರೆ ಕೆಟ್ಟದ್ದು, ಬಲಭಾಗಕ್ಕೆ ಹರಿದುಹೋದರೆ ಒಳ್ಳೆಯದು ಎಂಬುದು ಇವರ ನಂಬಿಕೆ.

೨೪. ಕತ್ತೆಯು ಪ್ರಯಾಣ ಮಾಡುವ ಸಂದರ್ಭದಲ್ಲಿ ಕಂಡರೆ ಒಳ್ಳೆಯದು.

೨೫. ಸೋಲಿಗರು ಬೇಟೆಗೆ ಹೋಗುವಂತಹ ಸಂದರ್ಭದಲ್ಲಿ ತುಂಬಿದ ಬಿಂದಿಗೆಯು ಎದುರಿಗೆ ಬಂದರೆ ಈದಿನ ಬೇಟೆ ನಮಗೆ ಲಭಿಸುವುದಿಲ್ಲ ಎಂದು ಹಿಂದಿರುಗುವರು, ಖಾಲಿ ಬಿಂದಿಗೆಯು ಎದುರಿಗೆ ಬಂದರೆ ಬೇಟೆ ಸಿಗುತ್ತದೆ ಎಂಬುದು ಇವರ ನಂಬಿಕೆ.

೨೬. ಸೋಲಿಗರು ಮನೆಯಲ್ಲಿ ಹಲ್ಲಿಯು ಪೂರ್ವದಿಕ್ಕಿನಲ್ಲಿ ನುಡಿದರೆ ಒಳ್ಳೆಯ ಶಕುನ ಎಂಬ ನಂಬಿಕೆಯಿದೆ.

೨೭. ಸೋಲಿಗರು ಊಟವನ್ನು ಮಾಡುವಂತಹ ಸಂದರ್ಭದಲ್ಲಿ ಯಾರಾದರು ನೋಡಿದರೆ ಕಣ್ಣಿನ ದೃಷ್ಟಿಯಾಗುತ್ತದೆ ಎಂಬುದನ್ನು ನಂಜಿದ್ದಾರೆ, ಊಟ ಮಾಡುತ್ತಿರುವಂತಹ ಸಂದರ್ಭದಲ್ಲಿ ಹೊರಗಡೆಯಿಂದ ಬಂದರೆ ಕಾಲು ತೊಳೆದು ಬರಬೇಕಾಗುತ್ತದೆ. ಇಲ್ಲದಿದ್ದರೆ ಹೊಟ್ಟೆಯು ಊದಿಕೊಳ್ಳುತ್ತದೆ ಎಂಬುದು ಇವರ ನಂಬಿಕೆ.

೨೮. ಋತುಮತಿಯಾದ ಹುಡುಗಿಯು ಹಳ್ಳಕ್ಕೆ ಹೋಗುವಂತಹ ಸಂದರ್ಭದಲ್ಲಿ ಕುಡುಗೋಲನ್ನು ಹಿಡಿದುಕೊಂಡು ಹೋಗಬೇಕು, ಹಾಗೆಯೇ ಇವರು ಬರಿಯ ಕಾಲಿನಲ್ಲಿ

ಓಡಾಡುವಂತಿಲ್ಲ ಮೆಟ್ಟನ್ನು ಹಾಕಿಕೊಂಡು ಓಡಾಡಬೇಕು. ಇಲ್ಲದಿದ್ದಲ್ಲಿ ಕೊಳ್ಳೆದೆವ್ವ ಮೆಚ್ಚಿಕೊಳ್ಳುತ್ತದೆ ಎಂಬುದು ಇವರ ನಂಬಿಕೆ.

೨೯. ಸೋಲಿಗರು ಕನಸ್ಸಿನಲ್ಲಿ ತನ್ನ ಹಿರಿಕರು ಕನಸ್ಸಿನಲ್ಲಿ ಕಾಣಿಸಿಕೊಂಡರೆ ಒಳ್ಳೆಯದು ಎಂದು ರಾತ್ರಿಯ ಕನಸ್ಸಿನಲ್ಲಿ ಸತ್ತ ವ್ಯಕ್ತಿಯ ದೇಹ ಕಾಣಿಸಿಕೊಂಡರೆ ಹೊತ್ತು ಹುಟ್ಟಿದ ಮೇಲೆ ಬೇಟೆಗೆ ಹೋಗುವಂತಹ ಸಂದರ್ಭದಲ್ಲು ಬೇಟೆ ಸಿಗುತ್ತದೆ ಎಂಬುದು ಇವರ ನಂಬಿಕೆ.

೩೦. ಸೋಲಿಗರು ಪ್ರಯಾಣ ಅಥವಾ ಬೇಟೆಗೆ ಹೋಗುವಂತಹ ಸಂದರ್ಭದಲ್ಲಿ ನರಿಯನ್ನು ಕಂಡರೆ ಒಳಿತಾಗುತ್ತದೆ ಎಂಬ ನಂಬಿಕೆ ಇದೆ.

೩೧. ಹೊಸದಾಗಿ ಬೆಳೆದ ರಾಗಿಯ ಪಾಲನ್ನು ಕುಂಬಳ ಬಳ್ಳಿಯಲ್ಲಿ ಮೊದಲಿಗೆ ಬಿಟ್ಟು ಕುಂಬಳಕಾಯಿ ಅಥವಾ ತರಕಾರಿಗಳನ್ನು ದೇವರಿಗೆ ಅರ್ಪಿಸಿದರೆ ಮುಂದಿನ ಫಲ ಹುಲುಸಾಗಿ ಬೆಳೆಯುತ್ತದೆಂಬ ನಂಬಿಕೆ ಸೋಲಿಗರಲ್ಲಿದೆ.

**೪.೯. ದೈವಗಳು**

ಸೋಲಿಗ ಸಮುದಾಯದಲ್ಲಿ ಬುಡಕಟ್ಟಿನ ದೈವಾರಾಧನೆ ಬಹಳ ವಿಶೇಷವಾಗಿ ಕಂಡುಬರುತ್ತದೆ. ಇಲ್ಲಿ ಮಾರಿಯಮ್ಮ, ಮಸಣಮ್ಮ, ಎಂಬ ಹೆಸರಿನಿಂದ ಕರೆಯುವರು. ಸಮುದಾಯದ ಜನರಿಗೆ ಸಿಡುಬು ವಾಂತಿ ಭೇದಿಗಳನ್ನು ನಿಯಂತ್ರಿಸುವ ದೇವತೆಗಳನ್ನು ಒಲಿಸಿಕೊಳ್ಳದಿದ್ದರೆ ಈ ಭಯಂಕರ ರೋಗಗಳು ಇಡೀ ಪೋಡಿಗೆ ಅಂಟಿಕೊಳ್ಳುತ್ತವೆಂದು ಭಯ ಪಡುತ್ತಾರೆ. ಈ ದೇವತೆಗಳಿಗೆ ಶಾಂತಿ ಮಾಡಿದರೆ ಈ ರೋಗಗಳು ಬರುವುದಿಲ್ಲವೆಂದು ಇವರ ನಂಬಿಕೆಯಾಗಿದೆ. ನಮಗೆ ಕಂಡುಬರುವ ಸ್ತ್ರೀದೇವತೆಗಳು ಬಸವಕಟ್ಟೆ ಮಾರಮ್ಮ, ದಡಸುಗಳು ಮಾರಿ, ಮಲಕಮ್ಮ, ಮಾಸ್ತಮ್ಮ ಮುಂತಾದ ಸ್ತ್ರೀದೇವತೆಗಳು ಕಂಡುಬರುತ್ತವೆ.

**ದೈವನಾಮಗಳು**

ಈ ಸಮುದಾಯದಲ್ಲಿ ಹೆಚ್ಚಾಗಿ ಪ್ರಕೃತಿಯನ್ನು ಆರಾಧಿಸುತ್ತಾರೆ. ಪ್ರತಿಯೊಂದು ಸಮುದಾಯದಲ್ಲಿ ಒಂದಲ್ಲ ಒಂದು ದೈವಗಳು ಕಂಡುಬರುತ್ತದೆ. ಪ್ರತಿನಿತ್ಯ ಪೂಜೆ ಮನಸ್ಕಾರ ಮಾಟ ಭಯ ನಿವಾರಣೆಯಾಗಿ ಅನೇಕ ರೀತಿಯ ದೈವಗಳನ್ನು ಪೂಜಿಸುವುದು ಆರಾಧನೆ ಮಾಡುವುದನ್ನು ನೋಡಬಹುದು. ಕೃಷಿ. ಪ್ರಕೃತಿ, ವನದೇವತೆ, ಸ್ತ್ರೀದೇವತೆಗಳನ್ನು ಮಾರಿ ಹಬ್ಬಗಳನ್ನು ಆಚರಿಸುವುದು ಇವರಲ್ಲಿ ಗಮನಿಸಲಾಗಿದೆ. ಪ್ರಕೃತಿಯ ಮಡಿಲಿನಲ್ಲಿ ಇವರ ಮರಗಳು, ಪಕ್ಷಿಗಳು ಪ್ರಾಣಿ ಸಂಕುಲಗಳನ್ನು ಆರಾಧಿಸುವರು. ಕಾಡಿನಲ್ಲಿ ದೊಡ್ಡ ಸಂಪಿಗೆ ಇಂದು ೨೦,೦೦೦ ವರ್ಷಗಳು ಹಳೆಯದಾದಂತಹ ಮರ ಎಂದು ಅಂದಾಜಿಸಲಾಗಿದೆ. ಈ ಮರದಲ್ಲಿ ದೊಡ್ಡ ಸಂಪಿಗೆ ಸ್ವಾಮಿ

ನೆಲೆಸಿದ್ದಾನೆಂದು ಸೋಲಿಗರು ಆರಾಧಿಸುತ್ತಾರೆ. ಈ ಮರದಲ್ಲಿ ಮಾದೇಶ್ವರ, ಪಂದಪ್ಪ, ದೇವರುಗಳು ವಾಸವಿದ್ದಾರೆಂದು ನಂಬಿಕೆಯಿದೆ.

ಈ ಸಮುದಾಯದಲ್ಲಿ ಸ್ತ್ರೀದೇವತೆಗಳಾದ ಮಾರಿಯಮ್ಮ, ಮಸಣಮ್ಮ, ಮಾಸ್ತಮ್ಮ, ಮಲಕಮ್ಮ ಈ ದೇವತೆಗಳು ಕಂಡುಬರುತ್ತದೆ.

ಬುಡಕಟ್ಟು ಸಮುದಾಯಗಳಲ್ಲಿ ಅನಾದಿ ಕಾಲದಿಂದಲೂ ಹಾಸು ಹೊಕ್ಕಾಗಿ ಬೆರೆತು ಬಂದಿರುವ ಆರಾಧಿಸುವ ದೈವಗಳು ಅವರ ಬದುಕಿನ ಒಂದು ಭಾಗವೇ ಆಗಿರುತ್ತದೆ. ಬುಡಕಟ್ಟು ಸಮುದಾಯಗಳ ಸಾಮಾಜಿಕ ವ್ಯವಸ್ಥೆ, ಅರ್ಥವ್ಯವಸ್ಥೆ ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವಾಗ ಮೊದಲು ಅವರು ಆರಾಧಿಸುವಂತಹ ದೈವಗಳನ್ನು ಗಮನಿಸಬೇಕಾಗುತ್ತದೆ. ಒಂದು ದೇವತೆಗೆ ಸಂಬಂಧಿಸಿದ ಹಾಡು ಕಥೆ, ಐತಿಹ್ಯ ಮತ್ತು ಪುರಾಣ ದಂತಕಥೆಗಳು ಆ ಸಮುದಾಯಗಳ ಸಮಸ್ಯೆಗಳಿಗೆ ಕಂಡುಕೊಂಡ ಉತ್ತರಗಳಾಗಿರುತ್ತವೆ. ಹಾಗೂ ಇವು ಆ ಬುಡಕಟ್ಟಿನ ಜನರ ಜೀವನ ರೀತಿ ನೀತಿಗಳನ್ನು ಒದಗಿಸಿಕೊಡುತ್ತವೆ. ಸಿದ್ದಲಿಂಗಯ್ಯ ಅವರು ಹೇಳಿರುವಂತೆ ವಿಶಿಷ್ಟವೂ ವೈವಿಧ್ಯಮಯವು ಆದ ಬುಡಕಟ್ಟು ಸಂಸ್ಕೃತಿಯನ್ನು ವಿವರಿಸಲು ಬುಡಕಟ್ಟುಗಳು ಹೇಳುವ ಪುರಾಣಗಳು ಆರಾಧಿಸುವ ದೈವಗಳು, ಆಚರಿಸುವ ಧಾರ್ಮಿಕ ವಿಧಿವಿಧಾನಗಳು ಬಹಳ ಸಹಕಾರಿಯಾಗುತ್ತವೆ. ಆದ್ದರಿಂದ ಈ ಸಂಸ್ಕೃತಿಯನ್ನು ಅರ್ಥೈಸಿರುವ ಯಾರೇ ಆಗಲಿ ಬುಡಕಟ್ಟು ಪುರಾಣ ಪ್ರಪಂಚವನ್ನು ಎಚ್ಚರಿಕೆಯಿಂದ ಪ್ರವೇಶಿಸಬೇಕಾಗುತ್ತದೆ. ಏಕೆಂದರೆ ಶಿಷ್ಟ ದೇವತೆಗಳಲ್ಲದೆ ವೈವಿಧ್ಯಮಯ ವೈಚಿತ್ರ ಈ ಬುಡಕಟ್ಟು ದೇವತೆಗಳು ಅವರ ಸಮುದಾಯಕ್ಕೆ ತಕ್ಕಂತೆ ಅವರ ಸೃಷ್ಟಿ ಪುರಾಣಗಳು ಹೇಳುತ್ತಿರುತ್ತವೆ ಎಂದಿದ್ದಾರೆ.

**ಅಚ್ಚುಗ ದೇವರು**

ಇದು ಸೋಲಿಗರ ಒಂದು ದೈವ. ಸೋಲಿಗ ಸಮುದಾಯದ ಜನರು ಪ್ರತಿಯೊಬ್ಬರು ಪೂಜಿಸುವಂತ ದೇವರು. ಅನಾದಿ ಕಾಲದಿಂದಲೂ ಸಮುದಾಯದ ಪ್ರತಿಯೊಂದು ಪೋಡಿನ ಜನರು ಪೂಜಿಸುವರು ಸರಿ. ಇಲ್ಲಿ ಪೂಜಾರಿಯನ್ನು ತಮ್ಮಡಿ ಎಂದು ಕರೆಯುತ್ತಾರೆ. ಮಡಿ ಮೈಲಿಗೆಯಿಂದ ಅಚ್ಚುಗ ದೇವರನ್ನು ಪೂಜಿಸುತ್ತಾರೆ. ಇವರಿಗೆ ಮೈಮೇಲೆ ದೇವರು ಬರುತ್ತದೆ. ತಮ್ಮಡಿಗೆ . ಇದೆ ಮೈಮೇಲೆ ದೇವರು ಬಂದಾಗ ಅವನು ಗಡಗಡನೆ ನಡುಗುತ್ತಾನೆ, ಮುಳ್ಳಿನ ಪಾದುಕೆ ಮೇಲೆ ನಿಲ್ಲುತ್ತಾನೆ. ನಂತರ ಅವನಿಗೆ ಜನ ಅಡ್ಡ ಬಿದ್ದು ತಮ್ಮ ಕಷ್ಟ ನಿವಾರಿಸುವಂತೆ ಬೇಡಿಕೊಳ್ಳುವವರು.

**ಮಾದೇಶ್ವರ**

ಸೋಲಿಗರ ಮತ್ತೊಬ್ಬ ಆರಾಧ್ಯ ದೈವ ಮಲೆಯ ಮಾದೇಶ್ವರ ಮಾದಪ್ಪನು ಶಿವನ ಅವತಾರವೆಂದು ಹೇಳಲಾಗುತ್ತದೆ. ಮಾದೇಶ್ವರ ಲಿಂಗ ರೂಪವಾಗಿದ್ದು ಸೋಲಿಗರು ಇವರನ್ನು ಭಕ್ತಿ ಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಸೋಲಿಗರು ಮಾದಪ್ಪನ ಆರಾಧಕರಾಗಿದ್ದಾರೆ.

**ಈರಣ್ಣ**

ಸೋಲಿಗ ಸಮುದಾಯದ ಓರ್ವ ಹಿರಿಯ ವ್ಯಕ್ತಿ ಈತನು ತನ್ನ ಸಮುದಾಯದ ಜನರಿಗೋಸ್ಕರ ಶ್ರಮಿಸಿ ಪ್ರಾಣತ್ಯಾಗ ಮಾಡಿದ ನಿಮ್ಮಿತ ಈತನನ್ನು ದೇವರೆಂದು ಪೂಜಿಸುತ್ತಾ ಒಂದು ದೇವಸ್ಥಾನವನ್ನು ಕಟ್ಟಿಕೊಂಡು ಪ್ರತಿನಿತ್ಯ ಪೂಜೆ ಕಾರ್ಯಗಳು ನಡೆಸುತ್ತಾರೆ. ಈರಣ್ಣನ ಗುಡಿ ಎಂದು ಕರೆದುಕೊಂಡಿದ್ದಾರೆ. ಸಮುದಾಯದ ಒಳಿತಿಗಾಗಿ ಜನಪರವಾದ ಕೆಲಸ ಕಾರ್ಯಗಳನ್ನು ಮಾಡಿದವನಾಗಿದ್ದಾನೆ. ಆದ್ದರಿಂದ ಇಂದಿಗೂ ಜನರ ಮನದಲ್ಲಿ ನೆಲೆಯೂರಿದ್ದಾನೆ.

**ಕಾರಯ್ಯ**

ಕಾರಯ್ಯನು ಮಲೆಯ ಮಾದೇಶ್ವರ ಶಿಷ್ಯ. ಅದರಲ್ಲಿ ಒಬ್ಬನು ಇವನು ಸುಂಕಮ್ಮ ಮತ್ತು ನೀಲೆಗೌಡ ದಂಪತಿಗಳ ಅವಳಿ ಮಕ್ಕಳಲ್ಲಿ ಇವನು ಒಬ್ಬ. ಸೋಲಿಗರ ಮೂಲ ಪುರುಷನಾಗಿ ಇಂದು ಸಮುದಾಯದಲ್ಲಿ ಪೂಜೆಗೆ ಒಳಗಾಗಿರುವುದನ್ನು ಕಾಣಬಹುದಾಗಿದೆ ಸೋಲಿಗರು ಕಾರಯ್ಯನ ಮಕ್ಕಳೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

**ಕೋಡುಗಲ್ಲಯ್ಯ**

ಬಿಳಿಗಿರಿರಂಗನ ಬೆಟ್ಟದ ಸಮೀಪದಲ್ಲಿ ಒಂದು ಬಂಡೆಯು ಎರಡಾಗಿ ಸೀಳಿಕೊಂಡಿದೆ. ಆದ್ದರಿಂದ ಅದು ಕೋಡುಗಳಂತೆ ಕಾಣುತ್ತದೆ. ಆದ್ದರಿಂದ ಕೋಡಿನಂತಿರುವ ಕಲ್ಲಿ ಕೋಡು ಗಲ್ಲು ಎಂಬುದಾಗಿ ಕರೆಯಲಾಗಿದೆ. ಮುಂದೆ ಕ್ರಮೇಣ ಜನರು ಆರಾಧನೆಯ ನೆಲೆಯಲ್ಲಿ ಬಳಕೆಯನ್ನು ಮಾಡುವಂತಹ ಸಂದರ್ಭದಲ್ಲಿ "ಅಯ್ಯ" ಎಂಬ ಪದವನ್ನು ಸೇರಿಸಿಕೊಂಡು ಕೋಡುಗಲ್ಲಯ್ಯ ಎಂಬುದಾಗಿದೆ ಕರೆದಿರಬೇಕೆಂಬ ಸಾಧ್ಯತೆಗಳಿವೆ.

**ಬಸವೇಶ್ವರ/ಬಸಪ್ಪ**

ಬಸವೇಶ್ವರ ಸ್ವಾಮಿಯನ್ನು ಅನಾದಿ ಕಾಲದಿಂದಲೂ ಸೋಲಿಗರು ಪೂಜಿಸುತ್ತಾ ಬಂದಿದ್ದಾರೆ. ಈ ದೇವರಿನ ಪೂರ್ಣ ಹೆಸರು "ಕಡವಿನ ಬಸಪ್ಪ" ಈ ದೇವರ ಲಿಂಗವನ್ನು ಯರಕನಗದ್ದೆಯಲ್ಲಿ ಪೂಜಿಸುತ್ತಾರೆ. ಮೂರು ವರ್ಷಕ್ಕೆ ಒಂದು ಬಾರಿ ಪೂಜೆಸಲ್ಲಿಸುತ್ತಾರೆ. ಈ ದೇವರಿಗೆ ಹಬ್ಬ ಮಾಡ ಬೇಕೆಂದಿದ್ದಾಗ ಒಂದು ತಿಂಗಳ ಮುಂಚೆಯೇ ಸಿದ್ಧತೆ ನಡೆಸುತ್ತಾರೆ. ಹಾಗೆಯೇ "ಊಲವು" ಅಥವಾ ಭಿಕ್ಷೆ ಎತ್ತಲೂ ಪೋಡು ಪೋಡಿಗೆ ಹೋಗುವರು. ಸೋಲಿಗರ ಮಾತಿನಲ್ಲಿ ಊಲವು ಎಂದರೆ ಭಿಕ್ಷೆ ಎಂದರ್ಥ. ಹಬ್ಬದ ದಿವಸ ಕೊಂಡ ಹಾಯುವುದು, ತಂಪು ತರುವುದು, ಮಾಡುತ್ತಾರೆ ನಂತರ ರಾತ್ರಿಯಲ್ಲಿ ಹಾಡು ಪೂಜಾ ಕುಣಿತವಿರುತ್ತದೆ.

**ಬಿಳಿಗಿರಿ ರಂಗಪ್ಪ**

೧೪-೧೫ ನೇಶತಮಾನದ ವೈಷ್ಣವ ಪಂಥದ ಕೇಂದ್ರಗಳಲ್ಲಿ ಬಿಳಿಗಿರಿರಂಗನ ಬೆಟ್ಟವು ಒಂದು. ಈ ದೇವಸ್ಥಾನವನ್ನು ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ ಕಟ್ಟಲಾಗಿದೆ. ರಂಗಸ್ವಾಮಿ

ದೇವಸ್ಥಾನದ ಎತ್ತರವಾದ ಬೆಟ್ಟದ ಮೇಲೆ ನಿರ್ಮಿಸಲಾಗಿದ್ದು. ಮಂಜಿನಿಂದ ಮುಚ್ಚಿ ಬೆಳ್ಳಗೆ ಕಾಣುತ್ತಿದ್ದರಿಂದ ಈ ಬೆಟ್ಟವನ್ನು ಬಿಳಿ-ಗಿರಿ-ರಂಗಸ್ವಾಮಿ ಎಂದು ಹೆಸರಾಗಿದೆ. ಹಾಗೆಯೇ ಬಿಳಿಗಿರಿ ರಂಗಸ್ವಾಮಿಯು ಸೋಲಿಗರ ದೈವವಾಗಿದೆ. ಇವರ ಬಾಳಿನಲ್ಲಿ ಹಾಸು ಹೊಕ್ಕಾಗಿರುವ ಅತ್ಯಂತ ಪ್ರಮುಖ ದೇವರಾಗಿದೆ.

ಬಿಳಿಗಿರಿ ರಂಗನಾಥನನ್ನು ಭಾವರಂಗಯ್ಯ ಎಂದೇ ಸೋಲಿಗರು ಕರೆಯುತ್ತಾರೆ. ಸೋಲಿಗರ ಬೊಮ್ಮೆಗೌಡನ ಏಳು ಜನ ಮಕ್ಕಳಲ್ಲಿ ಕೊನೆಯ ಮಗಳು ಅಪ್ರತಿಮೆಸ ಚೆಲುವೆ ಕುಸುಮಾಲೆ. ಒಂದು ದಿನ ಕಾಡಿನಲ್ಲಿ ಗೆಡ್ಡೆಗೆಣಸು ಹುಡುಕುತ್ತಾ ಕಾಡಿಗೆ ಹೊರಟ ಸಂದರ್ಭದಲ್ಲಿ ರಂಗನಾಥ ಅವಳನ್ನು ನೋಡಿದ ಇಬ್ಬರು ಪರಸ್ಪರ ಒಪ್ಪಿ ಕಾಡಿಗೆ ಹೋಗಿ ಒಂದು ಗುಹೆಯಲ್ಲಿ ವಾಸವಾಗುವರು. ಸೋಲಿಗರ ಹುಡುಗಿ ಕುಸುಮಾಲೆಯನ್ನು ವಿವಾಹವಾಗಿದ್ದರಿಂದ ಅವನಿಗೆ ಭಾವರಂಗಯ್ಯ ಎಂದು ಹೆಸರು ಬಂದಿತು. ಅಂದಿನಿಂದ ಬಿಳಿಗಿರಿರಂಗಪ್ಪ ಅಕ್ಕನ ಗಂಡ ಬಿಳಿಗಿರಿ ರಂಗನಾಥ.

ದೈವಗಳು ಸಮುದಾಯದಿಂದ ಸಮುದಾಯಕ್ಕೆ ವಿವಿಧ ಸ್ವರೂಪದಲ್ಲಿರುತ್ತವೆ. ಸೋಲಿಗರು ಆದಿವಾಸಿಗಳಾಗಿದ್ದು, ಅವುಗಳ ಮೂಲ ದೈವದ ಹೆಸರಿನಲ್ಲಿ ಬೇರೊಂದು ದೈವವನ್ನು ಆಚರಿಸುವಂತಹ ಕ್ರಮಗಳಿವೆ. ಇಲ್ಲಿ ಕೇತಪ್ಪ ಕೋಣುರು ದೇವರು

ಪಂದಪ್ಪ
ಕೊಲ್ಲೊ
ವೀರು
ಕುಸುಮಾಲೆ
ಬೊಮ್ಮದೇವರು
ಭದ್ರ
ಬೀರು
ಸಿದ್ದಪ್ಪಾಜಿ
ಕಾರಯ್ಯ
ಬೇಟೆರಾತಯ, ಹುಲೀರಪ್ಪ
ಜಂತೋಜಡೆಯ
ಕಟ್ಟೆಪಾರ್‍ಯದ ಮಾರಿ,
ಹಸಿರೆಳೆ ಮಾರಿ,
ಹಲಸಿನಂತ ಮಾರಿ,

ಹೀಗೆ ಹಲವಾರು ದೇವರು ದೈವಗಳ ಸಾವಿರಾರು ವರ್ಷಗಳಿಂದ ಸೋಲಿಗರು ಆರಾಧಿಸುತ್ತಾ ಬಂದಿದ್ದಾರೆ. ಹಳೆಯ ತಲೆಮಾರಿನಿಂದ ಹೊಸ ತಲೆಮಾರಿನವರೆಗೆ

ಪೂಜಾಕಾರ್ಯಗಳೂ ನಡೆಯುತ್ತಾ ಬಂದಿದೆ. ಕಾಲಕಾಲಕ್ಕೆ ತಕ್ಕಂತೆ ಆಧುನೀಕರಣ ಮತ್ತು ನಗರೀಕರಣದ ಸಂದರ್ಭದಲ್ಲಿ ದೈವಗಳು ಬದಲಾವಣೆಗೊಳ್ಳುತ್ತವೆ. ಹೊಸ ಹೊಸ ದೈವಗಳ ಸೇರ್ಪಡೆಗೊಳ್ಳುತ್ತಿರುವುದನ್ನು ನೋಡುತ್ತಿದ್ದೇವೆ. ಸೋಲಿಗ ಸಮುದಾಯದಲ್ಲಿ ನಗರಕ್ಕೆ ಹೊಂದಿಕೊಂಡಂತೆ ಆಚರಣೆಗಳು ಮತ್ತೆ ದಿನನಿತ್ಯದ ಬದುಕಿನ ಪೂಜಾ ಕಾರ್ಯಗಳು ಬದಲಾವಣೆಗೊಳ್ಳುವುದನ್ನು ಇಂದು ನೋಡಬಹುದಾಗಿದೆ. ಅಯ್ಯಪ್ಪ ಸ್ವಾಮಿಯ ದೇವಸ್ಥಾನಕ್ಕೆ ಸೋಲಿಗರು ಪ್ರತಿವರ್ಷವು ಅಯ್ಯಪ್ಪನ ಮಾಲೆಯನ್ನು ಧರಿಸಿ ಯಾತ್ರೆ ಮಾಡುವುದನ್ನು ಕಾಣುತ್ತೇವೆ. ಹಾಗೆಯೇ ಧರ್ಮಸ್ಥಳದ ಮಂಜುನಾಥ ಸಿರಡಿ ಸಾಯಿಬಾಬ ಮತ್ತು ಚಾಮುಂಡೇಶ್ವರಿ ನಂಜನಗೂಡು ನಂಜುಡೇಶ್ವರ ಮುಂತಾದ ದೈವಗಳಿಗೆ ಆರಾಧಿಸುವರು ಮತ್ತು ಪ್ರತಿವರ್ಷ ಗಣೇಶ ಚತುರ್ಥಿಯನ್ನು ವಿಜೃಂಭಣೆಯಿಂದ ಆರಾಧನೆ ಮಾಡುವುದನ್ನು ಸಮುದಾಯದಲ್ಲಿ ನೋಡಬಹುದಾಗಿದೆ. ಹೀಗೆ ದೈವಾರಾಧನೆಯ ಕಲ್ಪನೆ ಇವರಲ್ಲಿ ವಿಶಿಷ್ಟ ಸ್ವರೂಪದಲ್ಲಿದೆ. ತಮ್ಮ ಮೂಲ ಪಾರಂಪರಿಕವಾಗಿ ಬಂದಂತಹ ದೈವಗಳಲ್ಲದೇ ಕಾಲದಿಂದ ಕಾಲಕ್ಕೆ ಇವರಲ್ಲಿ ಹೊಸ ಹೊಸ ದೈವಗಳು ಸೇರ್ಪಡೆಯಾಗುತ್ತಾಲೆ ಇರುತ್ತವೆ. ಒಟ್ಟಿನಲ್ಲಿ ಸೋಲಿಗ ಸಮುದಾಯದ ದಿನನಿತ್ಯದ ಆಚರಣ ಲೋಕವು ವಿಶಿಷ್ಟ ಮಾದರಿಯಲ್ಲಿದೆ. ವಿವಿಧ ಸಾಂಸ್ಕೃತಿಕ ವಿಷಯಗಳನ್ನು ಆಚರಿಸುತ್ತಾ ಸಮುದಾಯದ ಅನನ್ಯತೆಯನ್ನು ಇಂದಿಗೂ ಕಾಪಾಡಿಕೊಂಡು ಬಂದಿದ್ದಾರೆ.

## ಕೊನೆಟಿಪ್ಪಣಿಗಳು

೧. ಎಂ.ಬೈರೆಗೌಡ, ಇರುಳಿಗರ ಜಾನಪದ ಅಧ್ಯಯನ, ಪುಟ ಸಂ ೧೬೯

೨ ಮಂಜುನಾಥ ಬೇವಿನಕಟ್ಟ ೨೦೦೭ ಕನ್ನಡ ಜಾನಪದ ನಂಬಿಕೆಗಳು, ಪುಟ ೧೩೬

೩. ಶೇಖರಾಚಾರಿ.ಕೆ. ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ, ಪುಟ ಸಂ ೧೨೬

೪. ಚಂದ್ರುಕಾಳೆನಹಳ್ಳಿ, ಸೋಲಿಗರ ಸಂಸ್ಕೃತಿ ಪುಟ ಸಂ.೭೫

೫. ಅದೇ ಪುಟಸಂ ೮೭

೬. ಶೇಖರಾಚಾರಿ.ಕೆ. ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ, ಪುಟ ಸಂ ೧೩೧

೭. ಚಂದ್ರುಕಾಳೆನಹಳ್ಳಿ, ಸೋಲಿಗರ ಸಂಸ್ಕೃತಿ ಪುಟ ಸಂ.೭೭

೮. ಅದೇ ಪುಟ ಸಂ ೭೮

೯. ಎಂ.ಬೈರೆಗೌಡ, ಇರುಳಿಗರ ಜಾನಪದ ಅಧ್ಯಯನ, ಪುಟ ಸಂ ೧೯೩

೧೦. ಉಮೇಶ, ಎಂ. ಓ ಸೋಲಿಗರ ಪಾರಂಪರಿಕ ಆಹಾರ ಪದ್ದತಿ ಆಧುನಿಕ ಮುಖಾಮುಖಿ ಪುಟಸಂ. ೨೪೦

೧೧. ಅದೇ ೨೪೧

೧೨ ಅದೇ ೨೪೩

೧೩ ಶೇಖರಾಚಾರಿ.ಕೆ. ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ, ಪುಟ ಸಂ ೧೫೬

೧೪ ದೇ.ಜ.ಗೌ,೧೯೭೬ ಜಾನಪದ ಅಧ್ಯಯನ, ಮೈಸೂರು ಪುಟ ಸಂ೩೩೫

# ಅಧ್ಯಾಯ–ಐದು

# ಭಾಷಿಕ ಪರಿಸರ

5.1 ಸೋಲಿಗರ ಮಾತಿನ ಮಾದರಿಗಳು

5.2 ಸೋಲಿಗ ನುಡಿಯ ಮೇಲೆ ಪ್ರಾದೇಶಿಕ ಒಳನುಡಿಯ ಪ್ರಭಾವ

5.3. ವಯೋಮಾನ ಆಧಾರಿತ ಸೋಲಿಗ ನುಡಿ ರಚನೆ ಸ್ವರೂಪ

- 5.3.1. ವಚನಗಳು
- 5.3.2. ವಿಭಕ್ತಿ ಪ್ರತ್ಯಯಗಳು
- 5.3.3. ಸಂಖ್ಯಾವಾಚಕಗಳು

5.4. ಸೋಲಿಗ ನುಡಿ ರಚನೆ

5.5. ಮಾರುಕಟ್ಟೆಯಲ್ಲಿ ಭಾಷೆ ಬಳಕೆ

5.6. ನುಡಿಬೆರೆಕೆ

# ಅಧ್ಯಾಯ-ಐದು

# ಭಾಷಿಕ ಪರಿಸರ

ಯಾವುದೇ ಒಂದು ಸಮುದಾಯವು ಜೀವನವನ್ನು ನಡೆಸಬೇಕಾದರೆ ತಮ್ಮದೇ ಆದ ಪ್ರಾಕೃತಿಕ ಸಂಪತ್ತನ್ನು ಅವಲಂಬಿಸಿರುತ್ತದೆ. ಸೋಲಿಗ ಸಮುದಾಯವು ಕಾಡಿನ ಮಧ್ಯದಲ್ಲಿ ನೆಲೆಸಿ ತಾವು ನೆಲೆಸಿರುವ ಭೌಗೋಳಿಕ ವ್ಯಾಪ್ತಿಯಲ್ಲಿ ದೊರೆಯುವ ನೈಸರ್ಗಿಕ ಸಂಪತ್ತನ್ನು ಅವಲಂಬಿಸಿ ಜೀವನ ನಡೆಸುತ್ತಿರುವುದನ್ನು ಕಾಣಬಹುದಾಗಿದೆ. ಇವರ ನೆಲೆಯು ಚಾಮರಾಜನಗರ ಜಿಲ್ಲೆಯ ದಕ್ಷಿಣ ತುದಿಯಲ್ಲಿರುವ ಅರಣ್ಯ ಪ್ರದೇಶವಾಗಿದೆ. ಈ ಜಿಲ್ಲೆಯು ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟವು ಈ ಸೋಲಿಗರ ವಾಸವಿರುವಂತ ಮುಖ್ಯ ಸ್ಥಳವಾಗಿದೆ. ದಟ್ಟವಾದ ಅರಣ್ಯದಲ್ಲಿ ಇಲ್ಲಿನ ಸೋಲಿಗ ಬುಡಕಟ್ಟು ಜನರ ಜೀವನ ಶೈಲಿಯು ಮಹತ್ವದ್ದಾಗಿದೆ. ಹಾಗೆಯೇ ಈ ಜನಾಂಗ ನಾಗರೀಕ ಸಮಾಜದಿಂದ ಪ್ರತ್ಯೇಕವಾಗಿ ಜೀವಿಸಲು ಇಲ್ಲಿನ ದಟ್ಟವಾದ ಕಾಡು ಕಾರಣವಾಗಿದೆ. ಇವರು ಒಂದು ರೀತಿಯಲ್ಲಿ ಅರೆ ಅಲೆಮಾರಿ ಸಮುದಾಯದವರಾಗಿದ್ದಾರೆ. ಕೆಲವೊಮ್ಮೆ ಅಲ್ಲೆ ಸುತ್ತಮುತ್ತಲ ಪ್ರದೇಶಗಳಲ್ಲಿ ವಲಸೆ ಹೋಗುವರು. ಇವರು ವಲಸೆ ಹೋಗುವುದಕ್ಕೆ ಕಾರಣ ಸಾಗಾಣಿಕೆ ಬೇಸಾಯ ಪದ್ಧತಿ ಮತ್ತು ಕೆತ್ತು ಬೇಸಾಯ ಪದ್ಧತಿಯಾಗಿದೆ. ಒಂದು ಕಡೆ ಮಣ್ಣಿನ ಫಲವತ್ತತೆ ಕಡಿಮೆಯಾದ ನಂತರ ಮತ್ತೊಂದು ಕಡೆ ಹೋಗಿ ನೆಲಸಿ ಅಲ್ಲಿಯ ಸುತ್ತಮುತ್ತಲ ಪ್ರದೇಶಗಳನ್ನು ಹಸನು ಮಾಡಿ ವ್ಯವಸಾಯಕ್ಕೆ ಬಳಸುತ್ತಿರುವರು.

ಹಾಗೆಯೇ ಕೆಲವೊಮ್ಮೆ ಕಾಲರ, ಪ್ಲೇಗು, ಗೊರ ಮುಂತಾದ ಸಾಂಕ್ರಾಮಿಕ ರೋಗಗಳು ಭಾದಿಸಿದಾಗ ವಲಸೆ ಹೋಗುವುದು ಸೋಲಿಗರಲ್ಲಿ ಕಂಡುಬರುತ್ತದೆ. ವಲಸೆ ಹೊರಟ ಸಂದರ್ಭದಲ್ಲಿ ನೀರಿನ ಸೌಲಭ್ಯ ಚೆನ್ನಾಗಿರುವ ಕಡೆ ಎತ್ತರವಾದ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು ಕಾಡು ಪ್ರಾಣಿಗಳ ಹಾವಳಿಯಿಂದ ದೂರವಿರುವ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು.

ಆಯ್ಕೆಮಾಡಿದಂತಹ ಸ್ಥಳಗಳಲ್ಲಿ "ಅಳ್ಳುಶಾಸ್ತ್ರ" ಮಾಡಿ ಮನೆಗಳನ್ನು ನಿರ್ಮಿಸಿಕೊಳ್ಳುವರು. ಕಾಡು ಪ್ರಾಣಿಗಳ ಹಾವಳಿಯಿಂದ ತಪ್ಪಿಸಿಕೊಳ್ಳಲು ಮನೆಯ ಮುಂದೆ ರಾತ್ರಿ ಹೊತ್ತು ಬೆಂಕಿ ಕೊಳ್ಳಿಯನ್ನು ಉರಿಸಿ ಅದರಿಂದ ಪ್ರಾಣಿಗಳ ಹಾವಳಿಯನ್ನು ತಪ್ಪಿಸಿಕೊಳ್ಳುತ್ತಿದ್ದರು.

ಇವರು ವಾಸಿಸುವಂತಹ ಪ್ರದೇಶವನ್ನು ಪೋಡು ಎಂದು ಕರೆಯುವರು. ಸೋಲಿಗರು ಸಾಮಾನ್ಯವಾಗಿ ಒಂದು ಕಡೆ ಹತ್ತರಿಂದ ಹದಿನೈದು ಗುಡಿಸಲುಗಳ ಒಂದು ಸಮೂಹವನ್ನು ಹೊಂದಿರುತ್ತಾರೆ. ಇದನ್ನು ಪೋಡುಗಳು ಎಂದು ಕರೆಯುವುದುಂಟು. ಬಿಳಿಗಿರಿರಂಗನ ಬೆಟ್ಟದ ಆಸುಪಾಸಿನಲ್ಲಿ ಹದಿಮೂರು ಪೋಡುಗಳಿವೆ ಅವುಗಳೆಂದರೆ

೧. ಕಲ್ಯಾಣಿ ಪೋಡು
೨. ಭೂತಾಣಿ ಪೋಡು
೩. ಮಂಜಿಗುಂಡಿ ಪೋಡು
೪. ಮುತ್ತುಗದಗದ್ದೆ ಪೋಡು
೫. ಪುರಾಣಿ ಪೋಡು
೬. ಹೊಸ ಪೋಡು
೭ ಬಂಗ್ಲೆ ಪೋಡು
೮ ಕನ್ನೇರ ಕಾಲೋನಿ
೯ ಗೊಂಬೆಗಲ್ಲು ಪೋಡು
೧೦ ಕೆರೆದಿಂಬ ಪೋಡು
೧೨. ಯರಕನಗದ್ದೆ ಕಾಲೋನಿ
೧೩. ಕೆ ಗುಡಿ

ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟದ ಸೋಲಿಗರ ಜನಸಂಖ್ಯೆ ಸುಮಾರು ೨೦೦೦ ಕ್ಕಿಂತಲೂ ಹೆಚ್ಚಿದೆ. ಇವರು ಜನಾಂಗಿಕವಾಗಿ, ಸಾಮಾಜಿಕವಾಗಿ ವಿಶಿಷ್ಟವಾದವರು. ಇವರ ವೃತ್ತಿ ಮೂಲ ಕಸುಬು ಜೇನು, ಕೆತ್ಲುಬೇಸಾಯ, ಬೇಟೆ, ಬೇಟೆಯಾಡುವುದು. ಇವರ ಮುಖ್ಯವಾದ ಕಸುಬು ಬುಟ್ಟಿ ಎಣೆಯುವುದು, ಜೇನು ಸಂಗ್ರಹಣೆ ಮಾಡುವುದು. ಕಾಡಿನಲ್ಲಿ ಸಿಗುವಂತಹ ಅನೇಕ ಪದಾರ್ಥಗಳನ್ನು ಸಂಗ್ರಹಿಸಿ ಮಾರುವುದು. ಈ ರೀತಿ ಸಂಗ್ರಹಿಸಿ ನಗರ ಪ್ರದೇತಗಳಿಗೆ ಅಥವಾ ಲ್ಯಾಂಪ್‌ಗಳಿಗೆ ಮಾರಾಟ ಮಾಡುತ್ತಾರೆ, ಈ ವ್ಯಾಪಾರವನ್ನು ಮಾಡುವ ಸಲುವಾಗಿ ನಗರ ಪ್ರದೇಶಗಳಿಗೆ ಭೇಟಿ ನೀಡುತ್ತಾರೆ ಮತ್ತು ಆಧುನಿಕತೆಗೆ ಹೊಂದಿಕೊಂಡಂತೆ ಸಾಮಾನುಗಳು ಸರಂಜಾಮುಗಳನ್ನು ಬೆಟ್ಟದಲ್ಲಿ ಸಿಗುವಂತಹ ಆಹಾರ ಪದಾರ್ಥಗಳನ್ನು ಮಾರಾಟ ಮಾಡಲು ಅಥವಾ ಕೊಳ್ಳಲು ನಗರ ಪ್ರದೇಶಕ್ಕೆ ಭೇಟಿ ನೀಡುವಂತಹ ಸಂದರ್ಭಗಳು ಒದಗಿಬರುತ್ತವೆ. ಇಂತಹ ಸಂದರ್ಭದಲ್ಲಿ ಸ್ಥಳೀಯ ಕನ್ನಡದ ಪ್ರಭಾವ ಇವರ ಮೇಲಾಗಿವೆ.

ಸೋಲಿಗ ಸಮುದಾಯದ ಭಾಷೆ ಮುಖ್ಯವಾಗಿರುವುದರಿಂದ ಚಾಮರಾಜನಗರ ಜಿಲ್ಲೆಯ ಸುತ್ತಮುತ್ತ ವಾಸಿಸುತ್ತಿರುವ ಸೋಲಿಗರು ಹಬ್ಬ ಹರಿದಿನಗಳು ಜಾತ್ರೆಗಳಲ್ಲಿ ಒಂದಾಗಿ ಆಚರಣೆ ಮಾಡುವುದು ಕಂಡುಬರುತ್ತದೆ. ಇನ್ನಿತರ ನಗರ ಸಮುದಾಯದ ಜನರು ಬಿಳಿಗಿರಿ ರಂಗನಾಥಸ್ವಾಮಿಯ ಆರಾಧಕರಾಗಿರುವರು. ನಗರ ಸಮುದಾಯದ ಜನರು ಜಾತ್ರೆಗಳಲ್ಲಿ ಒಟ್ಟಾಗಿ ಸೇರುವುದನ್ನು ನೋಡಬಹುದಾಗಿದೆ. ಇಲ್ಲಿನ ಸ್ಥಳೀಯ ಭಾಷೆ ಇವರ ಮೇಲೆ ಅತಿ ಹೆಚ್ಚಿನ ರೀತಿಯಲ್ಲಿ ಪ್ರಭಾವ ಬೀರಿದೆ. ಕಾರಣ ಸೋಲಿಗರು ನೆಲೆನಿಂತ ಪ್ರದೇಶಕ್ಕೆ ಪ್ರವಾಸಿಗರು, ಸ್ಥಳೀಯರು ಹೋಗುವರು. ಇದರಿಂದ ಸೋಲಿಗರ ಮೇಲೆ ಸ್ಥಳೀಯ ಕನ್ನಡದ ಪ್ರಭಾವ ಬೀರುವ ಸಾಧ್ಯತೆಗಳು ಹೆಚ್ಚು.

ಸೋಲಿಗರು ಆದಿವಾಸಿ ಸಮುದಾಯವಾಗಿದ್ದು. ಈ ಜನಾಂಗಕ್ಕೆ ಸೋಲಿಗ ಎಂಬ ಹೆಸರು ಬರಲು ಕೆಲವು ಸ್ವಾರಸ್ಯಕರ ನಿರೂಪಣೆಗಳಿವೆ. ಸೋಲಿಗ ಭಾಷೆಯಲ್ಲಿ ಸೋಲು ಎಂದರೆ ಬಿದಿರು. ತಾವು ಬಿದಿರಿನಿಂದ ಬಂದವರೆಂದು ಸೋಲಿಗರು ಹೇಳಿಕೊಳ್ಳುತ್ತಾರೆ. ಸೋಲಿಗ–ಶೊಲಗ–ಸೊಲ್ಗ ಈ ಮೂರು ಪದಗಳ ಉಚ್ಚಾರಣೆಯ ನೆಲೆಯಲ್ಲಿ ಭಿನ್ನತೆಯಿದೆ. ಆದರೆ ಜನಾಂಗಿಕವಾಗಿ ಬೇರೆ ಬೇರೆಂಯಾಗಿರುವುದಿಲ್ಲ. ಇವರು ಹಳೆಗನ್ನಡದ ಧ್ವನಿಗಳನ್ನು ಈಗಲೂ ಸಹ ಉಳಿಸಿಕೊಂಡಿರುವುದರಿಂದ ಕನ್ನಡದ ಮಹತ್ವವಾದ ಸಾಮಾಜಿಕ ಉಪಭಾಷೆಯಾಗಿದೆ. ಅಂದರೆ ಹಳೆಯ ತಲೆಮಾರಿನವರ ಕನ್ನಡದಲ್ಲಿ 'ಕ'ರ ಧ್ವನಿ ಬಳಕೆಯಲ್ಲಿರುವುದು ತಿಳಿದುಬರುತ್ತದೆ. ಸಮಾಜದಲ್ಲಿ ವಿಭಿನ್ನ ವಯೋಮಾನದವರಿದ್ದು ಸೋಲಿಗ ಸಮುದಾಯದಲ್ಲೂ ಅದೇ ರೀತಿ ನೋಡಬಹುದಾಗಿದೆ. ವಿವಿಧ ವಲಯಗಳಲ್ಲಿ ಮತ್ತು ವಿಭಿನ್ನ ಆಲೋಚನೆ ಮತ್ತು ಭಾವನೆಗಳನ್ನು ನೋಡಬಹುದಾಗಿದೆ. ಇಲ್ಲಿ ಮೊದಲನೆ ತಲೆಮಾರಿನ ೫೬ ವರ್ಷಗಳಿಂದ ೭೫ ವರ್ಷಗಳವರೆಗಿನ, ಎರಡನೆ ತಲೆಮಾರಿನ ೩೬ ವರ್ಷದಿಂದ ೫೫ ವರ್ಷಗಳವರೆಗಿನ ಜನರು ಮತ್ತು ೧೬ ವರ್ಷದಿಂದ ೨೫ ವರ್ಷದವರೆಗೆ ವಿಂಗಡಣೆ ಮಾಡಿಕೊಳ್ಳಲಾಗಿದೆ.

ಸಮುದಾಯದ ಅನನ್ಯತೆಯನ್ನು ಗುರುತಿಸುವ ಸಾಧನಗಳಲ್ಲಿ ಭಾಷೆಯು ಒಂದು. ಭಾಷಿಕ ಆಕೃತಿಗಳ ಮೂಲಕ ಸೋಲಿಗ ಸಮುದಾಯವು ಒಂದು ದ್ವಿಭಾಷಿಕ ಸಮುದಾಯ. ಹೇಗೆಂದರೆ ಮನೆಯ ಆವರಣದಲ್ಲಿ ಸೋಲಿಗ ನುಡಿಯನ್ನು ಬಳಕೆ ಮಾಡುತ್ತಾರೆ. ಶೈಕ್ಷಣಿಕ ವಲಯದಲ್ಲಿ ಸೋಲಿಗ ಮಕ್ಕಳು ಸೋಲಿಗ ನುಡಿಯ ಮೂಲಕ ಕನ್ನಡವನ್ನು ಕಲಿಯುತ್ತಿದ್ದಾರೆ.

ಸೋಲಿಗ ಸಮುದಾಯದ ಭಾಷಿಕ ಪರಿಸರ ವಿಶಿಷ್ಟವಾಗಿದೆ. ಕನ್ನಡ ನುಡಿ ಚರಿತ್ರೆಗೆ ಸೋಲಿಗ ಭಾಷಿಕ ಆಕೃತಿಗಳು ವಿಶಿಷ್ಟವಾದ ಕೊಡುಗೆ ಆಗಿದೆ. ಕನ್ನಡ ನುಡಿ ಚರಿತೆಯನ್ನು ಕಟ್ಟುವಲ್ಲಿ ಸೋಲಿಗ ನುಡಿಯನ್ನು ಗಮನಿಸಬೇಕಾಗಿದೆ. ಕನ್ನಡ ಶಾಸ್ತ್ರೀಯ ಸ್ಥಾನಮಾನವನ್ನು ಕುರಿತು

ಚರ್ಚೆಮಾಡುವಾಗ ಸೋಲಿಗ ನುಡಿಯಲ್ಲಿರುವ ಈ ಧ್ವನಿಗಳನ್ನು ಉಲ್ಲೇಖ ಮಾಡಲಾಗುತ್ತಿದೆ. ಇದರಿಂದ ತಿಳಿದುಬರುವ ಸಂಗತಿ ಎಂದರೆ ಸೋಲಿಗ ಕನ್ನಡ ನುಡಿ ಬಳಕೆ ಪರಿಸರ ಒಂದೇ ರೀತಿಯಲಿಲ್ಲ. ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಸೋಲಿಗ ತಲೆಮಾರಿನವರು ಬಳಕೆ ಮಾಡುವ ಅನಿವಾರ್ಯತೆ ಇರುವುದರಿಂದ ಪ್ರಾದೇಶಿಕ ಒಳನುಡಿಯ ಪ್ರಭಾವ ಇತ್ತೀಚಿನ ಹೊಸ ತಲೆಮಾರಿನವರ ಮೇಲೆ ಆಗಿರುವುದು ಕೆಳಗೆ ನೀಡಿರುವ ನಿದರ್ಶನಗಳಿಂದಲೇ ತಿಳಿದುಬರುತ್ತದೆ.

| ಮೊದಲನೆ ತಲೆಮಾರು | ಎರಡನೆ ತಲೆಮಾರು | ಮೂರನೇ ತಲೆಮಾರು | ಬರಹದ ನುಡಿ |
|---|---|---|---|
| ಕೆಳಕ | ಕೆಲಕ | ಕೆಳಗೆ | ಕೆಳಗೆ |
| ಎನ್ನು | ಎಣ್ಣು | ಹೆಣ್ಣು | ಹೆಣ್ಣು |
| ಕೊಲ | ಕೊಳ | ಕೊಳ | ಬಾವಿ |
| ಮೊರ | ಗಿನಿ | ಗಿನಿ | ಗಿಣಿ |
| ಲದ್ದಿ | ಲದ್ದಿ | ಚಗಣಿ | ಸಗಣಿ |
| ಅವ್ವೆ | ಅವ್ವೆ | ಅವ್ವ | ಅವ್ವ |
| ಜಾತುರೆ | ಜಾತುರೆ | ಜಾತ್ರೆ | ಜಾತ್ರೆ |
| ಮಕ್ಕಗ | ಮಕ್ಕ | ಮಕ್ಳು | ಮಕ್ಕಳು |
| ಇಸಾ | ಇಸ | ವಿಸ | ವಿಷ |
| ಇಚ್ಚುಲು | ಇಚ್ಚೂಲು | ಇಸ್ಕೂಲು | ಶಾಲೆ |
| ಕುನ್ನಿ | ಕುನ್ನಿ | ಹುಡ್ಗಿ | ಹುಡುಗಿ |
| ಕುನ್ನ | ಕುನ್ನ | ಹುಡ್ಗ | ಹುಡುಗ |
| ಮಿಜು | ಮಿಂದು | ಇಜು | ಈಜು |
| ಕುಚು | ಕೂಚು | ಕೂಸು | ಮಗು |
| ಕರ್ರುಳು | ಕಳ್ಳು | ಕಳ್ಳು | ಕರುಳು |
| ಅತ್ತಕ | ಅತ್ಕ | ಅತ್ತಗೆ | ಆಕಡೆ |
| ಗೆಯ್ಯೆ | ಗೆಯ್ಯಿ | ಗೆಯಿ | ಕೆಲಸಮಾಡು |
| ಇತ್ತಕ | ಇತ್ಗ | ಇತ್ತಗೆ | ಈ ಕಡೆ |
| ಅತ್ತಕ | ಅತ್ಕ | ಅತ್ತಗೆ | ಆ ಕಡೆ |
| ಕುಬಸ | ಕುಬ್ಸ | ಕುಪ್ಸ | ರವಿಕೆ |
| ಅವ | ಅವಾ | ಅಂವ | ಅಮ |
| ಆಚ | ಆಚ | ಆಚೆ | ಹೊರಗೆ |
| ಎನಾಗಕು | ಏನಾಗಕೂ | ಎನ್ಗ್ಬೇಕು | ಏನಾಗಬೇಕು |
| ಎಸು | ಎಸ್ಟು | ಯೆಸ್ಟು | ಎಷ್ಟು |

| ನಿಮಗ | ನಿಮಕ | ನಿಮ್ಗ | ನಿಮಗೆ |
|---|---|---|---|
| ದೇನ | ದೇನ | ಎವ | ಏನು |
| ಮೊಚ್ಚೆ | ಮೊಸ್ಳೆ | ಮೊಸಲೆ | ಮೊಸಳೆ |
| ಒತು | ಓತು | ಒಯ್ತು | ಹೋಯ್ತು |
| ಚೆಲ | ಚೆಲ | ಸಿಲ | ಚೀಲ |
| ಎಳಿಕ | ಎಳ್ಳಿಕ | ಎಳಕ | ಬೆಳ್ಳಗೆ |
| ಬಾಡು | ಬಾಡು | ಮಾವ್ಸ | ಮಾಂಸ |
| ಬಾಚೆ | ಬಾಸೆ | ಬಾಸ್ಯ | ಭಾಷೆ |
| ಜಿಂಕ | ಜಿಂಕ | ಜಿಂಕೈ | ಜಿಂಕೆ |
| ನಾಳೆ | ನಾಳ | ನಾಳೈ | ನಾಳೆ |
| ಆಚ | ಆಸ | ಆಸೇ | ಆಸೆ |
| ಇವ | ಇಂವ | ಇವ | ಇವನು |
| ಅಳಬ | ಅಳ್ಬ | ಅಳಮ | ಹಿರಿಯ |
| ಚಂಗ | ಸಂಗ | ಸಂಗ | ಸಂಘ |
| ಮೆನೆ | ಮನ್ನೈ | ಮನ | ಮನೆ |
| ವಚಿ | ವಸಿ | ಸಲ್ಪ | ಕಡಿಮೆ |
| ಸೆನಿ | ಸ್ಯಾನೆ | ಬಾಳ | ಹೆಚ್ಚು |
| ತಂಗೆ | ತಂಗೆ | ತಂಗ್ಯಾ | ತಂಗಿ |
| ಮೊರಡದೆ | ಕೊಲ್ತದೆ | ಬೊಗಲ್ತವೆ | ಬೊಗಳುತ್ತವೆ |
| ಬಾನ | ಬಾನ | ಬಂದ | ಬಂದಳು |
| ಇಲೆ | ಎಲ್ಲೈ | ಯಲೆ | ಎಲೆ |
| ಬೆಳ್ಳ | ಕೊಟ್ಟಿ | ಬೆಕ್ಕ | ಬೆಕ್ಕು |
| ಕಿರ್ರಿಯವ | ಕಿರೆಮ | ಕಿರಿಮ | ಕಿರಿಯವ |
| ಮಾಗದೆ | ಮಾಗದೆ | ಅನ್ನಾಗದೆ | ಹಣ್ಣಾಗಿದೆ |
| ಬರಗಟ್ಟ | ಬರತಕ್ಕ | ಬರತನ್ಕ | ಬರುವತನಕ |
| ನೊ | ನೊವ | ನೊವು | ನೋವು |
| ನಮುಕೆ | ನಮಕೆ | ನಮ್ಮಕೆ | ನಂಬ್ಕೆ |
| ದೆಸ್ತಾನ | ದೇಸ್ತಾನ | ದೆವ್ಸ್ಥಾನ | ದೇವಸ್ಥಾನ |
| ತಾಲಿ | ತಾಲಿ | ತಾಳಿ | ತಾಳಿ |
| ತಾಮರ | ತಾಮರ | ತಮ್ರ | ತಾಮ್ರ |

| | | | |
|---|---|---|---|
| ಬೈಚಾರ | ಬೇಸ್ತಾರ | ಗುರವಾರ | ಗುರುವಾರ |
| ಬೆರ್ಚು | ಬೆರ್ಚಿ | ಬೆರಚು | ಬೆರಚು |
| ಬೆಚಗ | ಬೆಚ್ಗೆ | ಬೆಸ್ಗೆ | ಬೇಸಗೆ |
| ಹಿಟ್ಟುತ್ದೆ | ಹಿಟ್ಟುತದೆ | ಹುಟ್ತದೆ | ಹುಟ್ಟುತದೆ |
| ಅವರಗ | ಅವರ್ಕ | ಅವರ್ಕೆ | ಅವರಿಗೆ |
| ಚಾಮಿ | ಸಾಮಿ | ಸಾಮಿ | ಸ್ವಾಮಿ |
| ಚಾಮನು | ಚಾಮಾನು | ಸ್ವಾಮನು | ಸ್ವಾಮಾನು |
| ಚಂದಾ | ಬಂಡಾಗಿ | ಸಂದಾಕಿ | ಚಂದಾಕಿ |
| ಚಪ್ಪೆ | ಚಪ್ಪೆ | ಸಪ್ಪೆ | ಸಪ್ಪೆ |
| ಕೊಲೆ | ಕೊಲ್ತ | ಬೊಗ್ಳು | ಬೊಗಳು |
| ಮಿಂದು | ಮಿಜು | ಇಸು | ಈಜು |
| ಪೊಡ್ಗ | ಪೋಡ್ಗ | ಪೊಡೆಗೆ | ಪೋಡಿಗೆ |
| ಕಳ್ಳು | ಕಳ್ಳು | ಕರ್ರು | ಕರುಳು |
| ಇದ್ಯೆ | ಇದ್ಯೆ | ವಿದ್ಯೆ | ವಿದ್ಯೆ |
| ಬುಳ್ಕ | ಬುಳ್ಕ | ಬೆಳ್ಕು | ಬೆಳಕು |
| ಎವರೆ | ಅವ್ರೆ | ಅವರೆ | ಅವರೆ |
| ಇಟಲಿ | ಇಡಲಿ | ಇಡ್ಲಿ | ಇಡ್ಲಿ |
| ಮಾರುಣಿಗೆ | ಮಾರ್ಣಗೆ | ಉದುಕೊಳ್ವೆ | ಊದುಕೊಳವೆ |
| ಚುಲ್ಗಿತ್ತಿ | ಚೂಲಗಿತ್ತಿ | ಸೂಲ್ಗಿತ್ತಿ | ಸೂಲಗಿತ್ತಿ |
| ಚೂಟಕ | ಚೂಟ್ಕ | ಬುದ್ವಂತ | ಬುದ್ಧಿವಂತ |
| ಮರಗೆನ | ಮರ್ಗೇನ | ಬುದಿಗೇಡಿ | ಬುದ್ಧಿಗೇಡಿ |
| ಮಾತ್ನೆ | ಮಾತ್ನಮಲ್ಲಿ | ಮಾತಿನ್ಮಲ್ಲಿ | ಮಾತಿನಮಲ್ಲಿ |
| ಜಡಿತ | ಜಡ್ತಿ | ಪಟಕ್ಕನೆ | ಬೇಗ |
| ನಬರು | ನಬ್ಬರು | ರಬರು | ರಬ್ಬರ್ |
| ಕಾಗಜ | ಕಾಗ್ದ | ಕಾಗದ | ಕಾಗದ |
| ಪೇಪ್ರು | ಪೆಪರು | ಪೇಪರು | ಪೇಪರ್ |
| ಇಚುಗೂಲು | ಇಸ್ಕೂಲು | ಇಸ್ಕೂಲು | ಸ್ಕೂಲು |
| ಚಟ್ನಿ | ಸೆಟ್ನಿ | ಸೆಟ್ನಿ | ಚೆಟ್ನಿ |
| ಇಟ್ಟು | ಇಟ್ಟು | ಮುದ್ದೆ | ಮುದ್ದೆ |
| ಲವ್ವ | ಲೋಟ | ಲೋಟ | ಲೋಟ |

| ಬೆಲಚಣ್ಣು | ಬಾಲಸ್ನು | ಬಾಳೆಹಣ್ಣು | ಬಾಳೆಹಣ್ಣು |
|---|---|---|---|
| ಟಮಟ | ಟಮೆಟ | ಟಮಟ | ಟಮೋಟ |
| ಅಚೆಟು | ಅಸಿಟು | ಅಸಿಟು | ರಾಗಿಪಿಟ್ಟು |
| ಉಡಕ | ಸಾರು | ಸಾಂಬಾರ್ | ಸಾಂಬಾರ್ |
| ಅರ್ರೈಕೆ | ಅರ್ರೈಕೆ | ಆರ್ರೈಕೆ | ಹಾರ್ರೈಕೆ |
| ಅಯಿ | ಆಯಿಕ | ಆಯ್ಕೆ | ಆಯ್ಕೆ |
| ಅಚಾಮಿ | ಅಚಾಮಿ | ಅಸಾಮಿ | ವ್ಯಕ್ತಿ |
| ಅವುಕು | ಅವುಕು | ಅದ್ಮುಕು | ಅದುಮು |
| ಅಂತೆ | ಅಂತೆ | ಹಾಗೆ | ಹಾಗೆ |
| ಕಾಗಜ | ಕಾಗಜ | ಕಾಗದ | ಕಾಗದ |
| ಕಾಟಿ | ಕಾಟಿ | ಕಾಡೆಮ್ಮೆ | ಕಾಡೆಮ್ಮೆ |
| ಕೊಕ್ಕೆದನ | ಆನ | ಆನೆ | ಆನೆ |
| ಕೊರಮಿ | ಕೊರಮಿ | ಕಳ್ಳಿ | ಕಳ್ಳಿ |
| ಡಾಕ್ಕು | ಡಾಕು | ಪಡೆ | ಪಡೆ |
| ಡಾದು | ಒಡೆನ | ಒಡೆದ | ಒಡೆದ |
| ದೊಡ್ಡಿ | ದೊಡ್ಡಿ | ಕೊಟ್ಟಿಗೆ | ದನದಕೊಟ್ಟಿಗೆ |
| ಮನ್ಕು | ಮಂಕು | ದಂಗು | ದಂಗು |
| ಬರಗಲು | ಬರಗ್ಲು | ಬರಲು | ಕಸಪೊರಿಕೆ |
| ನಾಗ್ರವು | ನಾಗ್ರವು | ನಾಗರಾವು | ನಾಗರಹಾವು |
| ಪರಾಯ | ಪರಾಯ | ಪ್ರಾಯ | ಹದಿಹರೆಯ |
| ಪಾಚಿ | ಪಾಸಿ | ಪಾಚಿ | ಪಾಚಿ |
| ಬಾಳಿ | ಬಾಳಿ | ಬಳಿ | ಹತ್ತಿರ |
| ಎಟೆ | ಎಟೇ | ಎಟೆ | ಹೆಣ್ಣುಹುಂಜ |
| ಉಜ | ಉಜ | ಹುಂಜ | ಗಂಡುಹುಂಜ |
| ಗೆಲಸ | ಗೆಲಸ | ಗಣ್ಜು | ಗೆಣಸು |
| ಪುಟ್ಟೆ | ಪುಟ್ಟೆ | ಬುಟ್ಟಿ | ಬುಟ್ಟಿ |
| ಅರವಿ | ಅರವಿ | ಚಲಗೆ | ಬಿಂದಿಗೆ |
| ಏಳಿಕ | ಏಳಿಕ | ಬೆಳಗ್ಗೆ | ಬೆಳಿಗ್ಗೆ |
| ಗನಾಜು | ಗನಾಜು | ಗಾಜು | ಗಾಜು |
| ಬೆಗವೆ | ಬೆಗನೆ | ಬೇಗ್ನೆ | ಬೇಗನೆ |
| ಸನ್ದ | ಸನ್ದೆ | ಸಂಜೆ | ಸಂಜೆ |

| | | | |
|---|---|---|---|
| ಜಾವ | ಒತ್ತಂಟೆ | ಮುಂಜಾನೆ | ಮುಂಜಾನೆ |
| ಜಾಯಿ | ಸಾಯಿ | ಸಾಯಿ | ಸಹಾಯ |
| ಕೆಲಿದಲೆ | ಕೆಳಿದಲೆ | ಕೇಳಿದರೆ | ಕೇಳಿದರೆ |
| ಚಬೆ | ಸಬೆ | ಸಬೈ | ಸಭೆ |
| ಚೊಗೆ | ಸೊಗೆ | ಸೋಗೆ | ಶರ್ಟ್ |
| ಲಾಟನು | ಲಾಂದ್ರ | ಲಾಟೆನು | ಲಾಟೀನು |
| ಅವರುಗ | ಅವ್ರು | ಅವರು | ಅವರು |
| ಇವರುಗ | ಇವ್ರು | ಇವರು | ಇವರು |
| ಕುಪ್ಸ | ಕುಪ್ಸ | ರವುಕೆ | ರವಿಕೆ |
| ಇಂವ | ಇಮ | ಇವ್ನು | ಇವನು |
| ಅಂವಾ | ಅಮ | ಅವ್ನು | ಅವನು |
| ಐಕ | ಐದ | ಹುಡ್ಗ | ಹುಡುಗ |
| ಗೊಡ್ಡಿ | ಗೊಡ್ಡಿ | ಬಂಜೆ | ಬಂಜೆ |
| ಬಿಮ್ಮನ್ಸಿ | ಗಬ್ರಿನಿ | ಬಸ್ರಿ | ಗರ್ಭಿಣಿ |
| ಬಾನತಿ | ಬಾನತಿ | ಬಾಂತಿ | ಬಾಣಂತಿ |
| ಸಡ್ಕಮರು | ಸಡ್ಕ | ಸಡ್ಕ | ಷಡ್ಕ |
| ಸರಾಪು | ಸರಾಪು | ಸರಾಯಿ | ಸರಾಯಿ |
| ಪಂಚ | ಪಂಚೆ | ಪಂಚೆ | ಪಂಚೆ |
| ಕಿರಿಮ | ಕಿರಿವ | ಕಿರಿಯವ | ಕಿರಿಯವನು |
| ಬಾನ | ಆಕಾಸ | ಆಕಾಸ | ಆಕಾಶ |
| ಗಂಬು | ಬಿಲ | ಬಿಲ | ಬಿಲ |
| ಬಂಡಾಗಿ | ಸೆನ್ನಾಗಿ | ಚೆನ್ನಾಗಿ | ಚೆನ್ನಾಗಿ |
| ಕುಲಾಬಿ | ಗುಲಾಬಿ | ಗುಲಾಬಿ | ಗುಲಾಬಿ |
| ಕೂಡಾಕು | ಕೂಡ್ಸು | ಕೂಡಾಕು | ಸಂಗ್ರಹಿಸು |
| ದೆರಿಗ | ಯಾರಿಗೆ | ಯಾರಿಗೆ | ಯಾರಿಗೆ |
| ಅದ್ದ | ಅದ್ದ | ಎದ್ರು | ಎದುರು |
| ಬೆಲ್ಲ | ಕೊಟ್ಟ | ಬೆಕ್ಕು | ಬೆಕ್ಕು |
| ಗಡವ | ಗಡುವು | ಸಮಯ | ಅವಧಿ |
| ಕಂಡಲೆ | ಕಂಡ್ರೆ | ಕಂಡರೆ | ಕಂಡರೆ |
| ನಸ | ನಸೆ | ನಸೆ | ನಶೆ |
| ಎಳಿನ | ಐಳಿದ | ಹೇಳಿದ | ಹೇಳಿದ |

### ೫.೧. ಸೋಲಿಗರ ಮಾತಿನ ಮಾದರಿಗಳು

ಸೋಲಿಗರ ಮಾತಿನ ಬಳಕೆ ವಿಶಿಷ್ಟ ಮಾದರಿಯಲ್ಲಿದೆ. ಕನ್ನಡದ ಸಾಮಾಜಿಕ ಉಪಭಾಷೆಯಾದ ಇದು ಮೂಲ ಭಾಷೆಯನ್ನು ಗಮನಿಸಿದರೆ. ಇದೇ ಒಂದು ಪ್ರತ್ಯೇಕ ಭಾಷೆಯಾಗಿ ಕಂಡುಬರುತ್ತದೆ. ಕನ್ನಡ ಪರಿಸರದವರು ಸೋಲಿಗ ಸಮುದಾಯದ ಭಾಷೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಬೇಗನೆ ಅರ್ಥವಾಗಲಾರದು. ಇವರಲ್ಲಿ ಹೆಚ್ಚಾಗಿ ಸೋಲಿಗ ಕನ್ನಡದಲ್ಲಿ ಮಧ್ಯೆ ಸ್ವರ ಬಿಟ್ಟು ಹೋಗಿ ವ್ಯಂಜನ ದ್ವಿತವಾಗುತ್ತದೆ. 'ವ' ಕಾರಕ್ಕೆ 'ಇ' ಕಾರವಾಗಿ ಬದಲಾಗುತ್ತದೆ. ಶಿಷ್ಟಕನ್ನಡದ ಪದಾದಿ 'ಶ' 'ಷ' ಕಾರಗಳಿಗೆ 'ಸ'ಕಾರವು ಪಡೆದುಕೊಳ್ಳುತ್ತದೆ. ಪದಾಂತ್ಯ ಪರಿಸರದಲ್ಲಿ "ಎ' ಕಾರವು ವ್ಯವಹಾರಿಕ ಕನ್ನಡದಲ್ಲಿ "ಅ" ಕಾರವಾಗಿ ಉಚ್ಚಾರಣೆಯಾಗುತ್ತದೆ. ಸೋಲಿಗರ ಹಿರಿಯ ತಲೆಮಾರಿನವರಲ್ಲಿ ಅವಿದ್ಯಾವಂತ ಸ್ತ್ರೀ ಮತ್ತು ಪುರುಷರ ಭಾಷಾ ಬಳಕೆಯಲ್ಲಿ ಭಿನ್ನತೆ ಅಥವಾ ವ್ಯತ್ಯಾಸಗಳನ್ನು ಹೆಚ್ಚಾಗಿ ಕಾಣಬಹುದಾಗಿದೆ. ಇದಕ್ಕೆ ಕಾರಣ ಶಿಕ್ಷಣದ ಕೊರತೆ, ಆರ್ಥಿಕ ಮತ್ತು ಸಾಮಾಜಿಕ ಅಂಶಗಳ ಕೊರತೆಯಿಂದಾಗಿ ಸೋಲಿಗರ ಮಾತಿನಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆ.

ಉದಾ:

ಸೋ.ನು: ಅರ್ವೆಯ್ಲಿ ನಿರು ಎತ್ರುಬಾಮ್ಮಿ
ಬ.ನು : ಅರ್ವೆಯಲ್ಲಿ ನೀರು ಎತ್ತುಕೊಂಡು ಬಾರಮ್ಮ

ಸೋ.ನು: ಅಳ್ಳಕ್ಕೆ ಒಗಿ ಅರ್ವಿಲಿ ನಿರು ಎತ್ರು ಬಂದಿಯಮ್ಮ
ಬ.ನು: ಹಳ್ಳಕ್ಕೆ ಹೋಗಿ ಅರವಿಯಲ್ಲಿ ನೀರು ಎತ್ತಿಕೊಂಡು ಬಾರಮ್ಮ

ಸೋ.ನು: ಮುರು ಕಲ್ಲು ಎತ್ತು ಬಂದು ಒಲೆ ಕೂಡಮ್ಮಿ
ಬ.ನು: ಮುರು ಕಲ್ಲು ಎತ್ತಿ ತಂದು ಒಲೆ ಹಾಕಮ್ಮ

ಸೋ.ನು: ಕಿಚ್ಚು ಅಟ್ಟು ಒಲೆಲಿ ಸೊಪ್ಪು ಅಚಾಕು ಗೆಳಸು ಬೆಯ್ಸಾಕು
ಬ.ನು: ಸೊಪ್ಪು ಅಟ್ಟು ಗೆಣಸು ಬೇಯಿಸಲು ಒಲೆಯಲ್ಲಿ ಬೆಂಕಿ ಹಾಕು

ಸೊ.ನು: ಅರವಿಯಿಂದ ಕರ್ಗಕ್ಕೆ ನೀರು ತುಂಬಿರ್ಸಬಾರಿ
ಬ.ನು : ಅರವಿಯಿಂದ ಕರಗಕ್ಕೆ ನೀರು ತುಂಬಿಸು ಬನ್ನಿ

ಸೋನು: ಕವಲುಗಡ್ಡಿ ಎತ್ತಮ್ಮಿ ಹೆಸ್ರು ಕಾದಿತ್ತು
ಬ.ನು: ಕವೆಗೋಲು ಎತ್ತಿಕೊ ಸಂಬಾರು ಕಾದಿದೆ

'ಸೋ.ನು: ದೇವ್ರ ಕಳ್ಸವ ಎತ್ರ ಬಾಡೊ ಪೂಜೆವಾ ಮಾಡಾಕು
ಬ.ನು : ದೇವರು ಕಳಸವ ಎತ್ತಿಕೊಂಡು ಬಾರೋ ಪೂಜೆ ಮಾಡಬೇಕು

ಸೋನು: ಕಣಿಲಿ ನಿರು ಗಿರು ತಂದು ಕೊಟ್ಟು ಬುಡಿ
ಬ.ನು: ಚೆಂಬಿನಲ್ಲಿ ನೀರು ತಂದು ಕೊಡಿ

ಸೊ.ನು: ಮಾಂವಗೆ ನಿರು ಕುಡ್ಯಾಕು ಗಳಾಸು ತಂದು ಕೊಟ್ಟಿರ್ದಯಾ?
ಬ.ನು : ಮಾವನಿಗೆ ನೀರು ಕುಡಿಯುವ ಲೋಟ ಕೊಟ್ಟಿದ್ದೀಯಾ ಬೇಗನೆ ಎತ್ತುಕೊಂಡು ಬಾ

ಸೋ.ನು: ಚಣ್ಣದಾರ್ಗಿ ಸೆಂಬ ನೊಡಿ ಎತ್ರು ಬಾರಿಯಾಡ
ಬ.ನು : ಸಣ್ಣದಾಗಿರುವ ಚೆಂಬು ನೋಡಿ ಎತ್ತಿಕೊಂಡು ಬಾ

ಸೋನು: ಕಿಚ್ಚು ಕೆಟೊಗದ ಕೊಳವೆ ಎತ್ತ ಉರವಾಕು
ಬ.ನು : ಬೆಂಕಿ ಹಾರಿ ಹೋಗಿದೆ ಕಳವೆ ಎತ್ತಿಕೊಂಡು ಊದು

ಸೋನು: ಒಲೆ ಮೆಲಿ ಮಡಕೆಲಿ ಹಿಟ್ಟ ಎಸ್ರು ಮಡಗುರ್ದೆಯಾ
ಬ.ನು: ಒಲೆ ಮೇಲೆ ಪಾತ್ರೆಯಲ್ಲಿ ಮುದ್ದೆಗೆ ನೀರು ಮಡಗಿದ್ದೇಯಾ

ಸೊ.ನು: ಎಸ್ರು ಕಾದತು ಹಿಟ್ಟು ದೊಣ್ಣನಾ ಎತ್ತಮು ಬ್ಯಾಗನ ಹಿಟ್ಟ ಮಾಡಕು
ಬ.ನು: ನೀರು ಕಾದಿದೆ ಮುದ್ದೆ ಮಾಡಲು ಹಿಟ್ಟಿನದೊಣ್ಣೆ ಎತ್ತಿಕೊ ಬೇಗ ಮುದ್ದೆ ಮಾಡಲು

ಸೊ.ನು: ಹೊನ್ನೆ ರತ್ತ ಮನ್ಸನ ರತ್ತ ಕಂಡಾಗ ಅದೇ ಗಿಳಿಕೊಕ್ಕು
ಬ.ನು : ಹನ್ನೆ ಮರದ ರಕ್ತ ಮನಷ್ಯನ ರಕ್ತದಂತೆ ಗಿಳಿಕೊಕ್ಕು ಇದೆ.

ಸೋನು: ನಾ ಮೈಚೂರಿಗೆ ಒಂಟಿನಿ
ಬ.ನು : ನಾನು ಮೈಸೂರಿಗೆ ಹೋಗುತ್ತೇನೆ.

ಸೋ.ನು: ಕೇತ ನಿರಿನಗ ನೆಗೆನ
ಬ.ನು: ಕೇತ ನೀರಿನಲ್ಲಿ ನೆಗೆದ

ಸೊ.ನು: ಅಂವಾ ಜಡೆಮಾದನ ಕುನ್ನ
ಬ.ನು : ಅವನು ಜಡೆ ಮಾದನ ಮಗ

ಸೊ.ನು: ನಮ್ಮ ಪೊಡಲ್ಲಿ ಅಚ್ಪತ್ರೆ ಇಲ್ಲೆ
ಬ.ನು : ನಮಗೆ ಪೋಡಲ್ಲಿ ಆಸ್ಪತ್ರೆ ಇಲ್ಲ

ಸೊ.ನು: ಮರ್ರದ ಮ್ಯಾಲ ಎಡು ಬೆಳ್ಳ ಅದೆ
ಬ.ನು: ಮರದ ಮೇಲೆ ಎರಡು ಇಲಿ ಇದೆ
ಸೊ.ನು: ಇ ದಿವ್ಚ ನಾ ಕೆಲ್ಚಕ್ಕೆ ಬರಲಿಲಲ್ಲೆ
ಬ.ನು: ಈ ದಿವಸ ಕೆಲಸಕ್ಕ ಬರುವುದಿಲ್ಲ

ಸೊ.ನು: ಅವ~ ಇರುಳ ನಮ್ಮ ಮೆನೆಕ ಬಂದು ಒನ
ಬ.ನು: ಅವನು ಸಂಜೆ ನಮ್ಮ ಮನೆಗೆ ಬಂದು ಹೋದ

ಸೋ.ನು: ಅವ~ ಜಿನಾಲುವೆ ಉಣ್ಣೊಕೆ ಬತ್ತವೆನೆ
ಬ.ನು: ಅವನು ದಿನವು ಊಟಕ್ಕೆ ಬರುತ್ತಾನೆ

ಸೋ.ನು: ಇಬು ಸೋಲುಗ್ರ ಮೆನೆಗ
ಬ.ನು: ಇವು ಸೋಲಿಗರ ಮನೆಗಳು

ಸೋ.ನು: ನಾಯಿಗ ಕೊಲ್ತಾದೆ ಅನೆ-ಗಿನ ಬಂದಿದ್ವವ ನೊದ್ರಡೊ
ಬ.ನು: ನಾಯಿಗಳು ಬೊಗಳುತ್ತಿದ್ದಾವೆ ಆನೆ ಬಂದಿದ್ದಾವ ನೋಡು

ಸೋ.ನು: ಅಲ್ಸನ್ನು ಕಂಡಲೆ ಕಡಿಕ ಬಾರಿ ಇಚ್ಚ
ಬ.ನು : ಹಲಸಿನ ಹಣ್ಣು ಕಂಡರೆ ಕರಡಿಗೆ ತುಂಬ ಇಷ್ಟ

ಸೋ.ನು: ಮತ್ತ ಒಯ್ತಿವಿ ಕಾಡಿಕ ಜೆನ ಕಿಳದಕಾ ನಿಮು ಬಂದಾರೆಯಾ
ಬ.ನು: ಜೇನು ಕೀಳುವುದಕ್ಕೆ ಕಾಡಿಗೆ ಹೋಗುತ್ತೆವೆ ನೀವು ಬರುತ್ತೀರಾ

ಸೋ.ನು: ನಿ ಅಂವ್ಗೆ ಎಳೆನೆ ನಾಳ ಬರಾಕಿ
ಬ.ನು : ನಿ ಅವನಿಗೆ ಹೇಳು ನಾಳೆ ಅವನಿಗೆ ಬರುವುದಕ್ಕೆ

ಸೋ.ನು : ನಿ ಅವ್ವೆ ಜೆರುಕು ಒನೆ ನನೊಡಗ ಬರಬೇಡ
ಬ.ನು: ನೀನು ಅವ್ವನ ಜೊತೆಗೆ ಹೋಗು ನನ್ನ ಜೊತೆ ಬರಬೇಡ

ಸೋ.ನು: ಅಂವಾ ಯಳ್ನದೂರಗೆ ಸಂತೆಕ ಓನ
ಬ.ನು: ಅವನು ಯಳಂದೂರಿಗೆ ಸಂತೆಗೆ ಹೋದ

ಸೋ.ನು : ಅಂವಾ ಇರಳು ನಮ ಪೊಡ್ಗ ಬರ್ತಾರ
ಬ.ನು: ಅವನು ರಾತ್ರಿ ನಮ್ಮ ಪೋಡಿಗೆ ಬರುತ್ತಾನೆ

ಸೋ.ನು: ನೀ ಅವಾಂಗ ಏಳನಿ ನಾಳ ಬರಾಕೈ

ಬ.ನು : ನೀನು ಅವನಿಗೆ ಹೇಳು ನಾಳೆ ಬರುವುದಕ್ಕೆ

### ೫.೨. ಸೋಲಿಗ ನುಡಿಯ ಮೇಲೆ ಪ್ರಾದೇಶಿಕ ಒಳನುಡಿಯ ಪ್ರಭಾವ

ಒಂದು ಭಾಷೆ ಮತ್ತೊಂದು ಭಾಷೆಯ ಪ್ರಭಾವಕ್ಕೆ ಒಳಗಾದಾಗ ತನ್ನದೇ ಆದಂತಹ ಭಾಷೆಗೆ ಸೀಮಿತವಾಗಿರುವುದಿಲ್ಲ. ಪರಸ್ಪರ ಪ್ರಭಾವ ಆ ಭಾಷೆಗಳಲ್ಲಿ ಕಂಡುಬರುತ್ತದೆ. ಏಕೆಂದರೆ ಸಮುದಾಯದ ಜನರು ಸಾಮಾನ್ಯವಾಗಿ ಇತ್ತೀಚಿನ ದಿನಗಳಲ್ಲಿ ನಗರೀಕರಣ ಮತ್ತು ಶೈಕ್ಷಣಿಕವಾಗಿ ಮುಂದುವರೆಯುತ್ತಿದ್ದು. ಸಮುದಾಯದ ಜನರು ನಗರಗಳ ಕಡೆ ಆಕರ್ಷಿತರಾಗುತ್ತಿದ್ದಾರೆ. ಆ

ಕಾರಣದಿಂದ ಭಾಷೆಯು ಸಾಮಾನ್ಯವಾಗಿ ಆಧುನಿಕರಣಕ್ಕೆ ಹೊಂದಿಕೊಂಡಂತೆ ಬದಲಾವಣೆಗೊಳ್ಳುತ್ತದೆ. ಸೋಲಿಗ ನುಡಿಯ ಮೇಲೆ ಪ್ರಾದೇಶಿಕ ಒಳನುಡಿಯ ಪ್ರಭಾವದಿಂದ ಅದು ಬದಲಾವಣೆಗೊಳ್ಳುತ್ತಾ ಹೋಗುತ್ತವೆ.

| **ಸೋಲಿಗ ನುಡಿ** | **ಪ್ರಾದೇಶಿಕ ನುಡಿ** | **ಬರಹದ ನುಡಿ** |
|---|---|---|
| ಅವ~ | ಅಮ | ಅವನು |
| ಇವ~ | ಇಮ | ಇವನು |
| ಅವ | ಅವ | ಅವಳು |
| ಮಗ~ | ಮಗ | ಮಗನು |
| ಇಬ~ | ಇಬ | ಇವನು |
| ನನಗ | ನನ್ಗ | ನನಗೆ |
| ಒಟ್ಟೆಗ | ಒಟ್ಗ | ಹೊಟ್ಟೆಗೆ |
| ಪೊಡಿಗ | ಪೊಡ್ಗ | ಪೋಡಿಗೆ |
| ಕಾಡಿಗ | ಕಾಡ್ಗ | ಕಾಡಿಗೆ |
| ಕೆಂಚಿಗ | ಕೆಂಚ್ಗ | ಕೆಂಚಿಗೆ |
| ಗುಡಿಗ | ಗುಡ್ಗ | ಗುಡಿಗೆ |
| ಆನೆಗ | ಆನ್ಗೆ | ಆನೆಗಳು |

**೫.೩. ವಯೋಮಾನ ಆಧರಿತ ಸೋಲಿಗ ನುಡಿ ರಚನೆಯ ಸ್ವರೂಪ**

ಸೋಲಿಗರು ಪ್ರಾದೇಶಿಕವಾಗಿ (ಚಾಮರಾಜನಗರ ಪ್ರದೇಶದಲ್ಲಿ) ಅಲ್ಪಸಂಖ್ಯಾತರಾಗಿದ್ದು ಅವರು ಬಳಕೆಯ ಸೋಲಿಗರ ನುಡಿ ಮಾತನಾಡುವ ಕನ್ನಡಕ್ಕೆ ವಿಶೇಷವಾಗಿದ್ದು. ಅದು ಕನ್ನಡದ ಒಂದು ಉಪಭಾಷೆಯೆಂಬುದು, ಅವರು ಮಾತನಾಡುವ ಕನ್ನಡದ ನುಡಿ ರಚನೆಯಿಂದ ತಿಳಿದುಬರುತ್ತದೆ. ಸೋಲಿಗರ ಕನ್ನಡ ಕನ್ನಡದ ರಚನೆ ಒಂದೇ ರೀತಿಯಲ್ಲಿ ಬಳಕೆಯಲ್ಲಿಲ್ಲ, ಆಧುನಿಕತೆಯ ಪ್ರಭಾವದಿಂದ ಸೋಲಿಗರು ಬಳಸುವ ಕನ್ನಡ ರಚನೆಯಲ್ಲಿ ವ್ಯತ್ಯಾಸವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಹಳೆಯ ತಲೆಮಾರಿನವರ ಕನ್ನಡದ ಮಾತಿಗೂ ಹೊಸತಲೆಮಾರಿನವರ ಕನ್ನಡ ಮಾತಿಗೂ ವ್ಯತ್ಯಾಸವಿರುವುದು ಗಮನಾರ್ಹವಾಗಿದೆ. ಹಳೆಯ ತಲೆಮಾರಿನವರು ಹೆಚ್ಚಾಗಿ ಕನ್ನಡ ಸಮಾಜಕ್ಕೆ ತೆರೆದುಕೊಂಡಿಲ್ಲ ಅಂದರೆ ಕನ್ನಡಿಗರ ದಿನನಿತ್ಯ ವ್ಯವಹಾರಗಳೊಂದಿಗೆ ಬೆಳೆಯುವ ಸಮಯ, ಅನಿವಾರ್ಯತೆ ಕಡಿಮೆ ಎಂದು ಹೇಳಬಹುದು. ಹೊಸ ತಲೆಮಾರಿನ ಸೋಲಿಗರು ದಿನನಿತ್ಯ ಸ್ಥಳೀಯ ಕನ್ನಡಿಗರೊಂದಿಗೆ ವ್ಯವಹರಿಸಬೇಕಾದ ಅನಿವಾರ್ಯತೆ ಮತ್ತು ಒತ್ತಡದಿಂದ ಇವರು ಬಳಸುವ ಬರಹ ಕನ್ನಡವನ್ನು ಸಮೀಪವಾಗಿರುವುದು

ಗೋಚರಿಸುತ್ತದೆ. ಹಳೆಯ ತಲೆಮಾರಿನವರು ಕನ್ನಡದ ರಚನೆ ಮತ್ತು ಬರಹ ಕನ್ನಡದ ರಚನೆ ಪರಸ್ಪರ ತುಲನೆ ಮಾಡಿದಾಗ ಹೆಚ್ಚಿನ ಪ್ರಮಾಣದಲ್ಲಿ ವ್ಯತ್ಯಾಸವಿರುವುದು ಕಂಡಬರುತ್ತದೆ. ಅಂದರೆ ಉಪಭಾಷೆಗಳು ತಮ್ಮ ಅನನ್ಯತೆಯನ್ನು ಬಿಟ್ಟು ಕೊಡುವ ಸೂಚನೆಗಳು ಆಧುನಿಕರಣದ ಪ್ರಭಾವದಿಂದ ಬದಲಾವಣೆ ಆಗುತ್ತಿರುವುದು ಕಂಡುಬರುತ್ತದೆ. ಹೀಗೆ ನುಡಿ ಒಂದು ವಯೋಮಾನ ಆಧಾರಿತವಾಗಿ ಕನ್ನಡ ಬಳಕೆಯಲ್ಲಿ ವ್ಯತ್ಯಾಸವಾಗಿರುವುದನ್ನು ಈ ಉದಾಹರಣೆಗಳ ಮೂಲಕ ಸಾಧಿಸಲಾಗಿದೆ.

ಸೋಲಿಗರ ನುಡಿಯ ಮೇಲೆ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಪ್ರಾದೇಶಿಕ ಕಾರಣಗಳಿಂದ ಸಮುದಾಯದ ಜನರು ಆಧುನಿಕತೆಯ ಕಡೆಗೆ ತಮ್ಮನ್ನು ತೆರೆದುಕೊಂಡಂತೆ ಕನ್ನಡದ ಪ್ರಭಾವದ ಬಳಕೆ ಮಾಡಬೇಕಾಗಿರುತ್ತದೆ. ಸೋಲಿಗ ಕನ್ನಡದ ಪದಗಳು ಕನ್ನಡದ ಅದೇ ಅರ್ಥದಲ್ಲಿ ಬಳಕೆಯಾಗುತ್ತದೆ. ಸೋಲಿಗ ಕನ್ನಡಕ್ಕೂ ಬರಹದ ಕನ್ನಡಕ್ಕೂ ಸಾಕಷ್ಟು ಭಿನ್ನತೆಯನ್ನು ಹೊಂದಿದ್ದು ಸೋಲಿಗರ ನುಡಿಯು ಅಷ್ಟೊಂದು ಅರ್ಥಪೂರ್ಣವಾಗಿ ಅರ್ಥವಾಗುವುದಿಲ್ಲ. ಸೋಲಿಗರು ಅದಕ್ಕಾಗಿ ಇಲ್ಲಿನ ಪ್ರಾದೇಶಿಕ ಒಳನುಡಿಯನ್ನು ಬಳಸಿ ಮಾತನಾಡುತ್ತಾರೆ.

| **ಮೊದಲ ತಲೆಮಾರು** | **ಎರಡನೇ ತಲೆಮಾರು** | **ಪ್ರಾದೇಶಿಕ ಒಳನುಡಿ** | **ಬರಹದ ನುಡಿ** |
|---|---|---|---|
| ದೊಡ್ಡ ಆನೆಗ | ದೊಡ್ಡ ಆನೆಕ | ದೊಡ್ಡ ಆನೆಗಳು | ದೊಡ್ಡ ಆನೆಗಳು |

ಹಳೆಯ ತಲೆಮಾರಿನ ಸೋಲಿಗರ ಭಾಷೆಯಲ್ಲಿ ಆನೆಗ ಎಂಬ ಪದವು ಎರಡನೇ ತಲೆಮಾರಿನಲ್ಲಿ ಆನೆಕ ಎಂದು ಉಚ್ಚಾರಣೆ ಮಾಡುತ್ತಾರೆ. ಪ್ರಾದೇಶಿಕ. ಒಳನುಡಿಗಲ್ಲಿ ಬಳಸುವಾಗ ಆನೆಗಳು ಎಂದು ಬಳಕೆಯಲ್ಲಿದೆ. ಬರಹದ ನುಡಿಯ ರೂಪದಲ್ಲಿ ದೊಡ್ಡ ಆನೆಗಳು ಎಂದು ಬಳಕೆಯಲ್ಲಿವೆ. ಬಹುವಚನಗಳು ಇಲ್ಲಿ "ಗ" ಕಾರವಾಗಿ ಕಂಡಬರುತ್ತವೆ. ಎರಡನೇ ತಲೆಮಾರಿನಲ್ಲಿ 'ಕ' ಕಾರವಾಗಿ ವ್ಯತ್ಯಾಸ ಕಂಡುಬರುತ್ತದೆ.

**ಪ್ರಯೋಗ:** ಮೋ.ತ: ಅವಾ ದೊಡ್ಡ ಆನೆಗ

ಎ.ತ : ಅಬು ದೊಡ್ಡ ಆನೆಕ

ಪ್ರಾನು: ಅವು ದೊಡ್ಡ ಆನೆಗಳು

ಬ.ಕ: ಅವು ದೊಡ್ಡ ಆನೆಗಳು

| **ಮೊದಲ ತಲೆಮಾರು** | **ಎರಡನೇ ತಲೆಮಾರು** | **ಪ್ರಾದೇಶಿಕ ಒಳನುಡಿ** | **ಬರಹದ ನುಡಿ** |
|---|---|---|---|
| ನಾಯಿಗ ಮೊರಡದೆ | ನಾಯಿಕ ಬೊಗುಳುತ್ತಬೆ | ನಾಯ್ಗ್‌ಳು ಬೊಗಳ್ತಾವೆ | ನಾಯಿಗಳು ಬೊಗಳುತ್ತಾವೆ |

ಬರಹದ ಕನ್ನಡದಲ್ಲಿ ಬೊಗಳುತ್ತವೆ ಎಂಬ ಪದವು ಸೋಲಿಗರ ಹಳೆಯ ತಲೆಮಾರಿನಲ್ಲಿ ಮೊರಡದೆ ಎಂಬುದಾಗಿ ಬಳಸುತ್ತಾರೆ. ಎರಡನೇ ತಲೆಮಾರಿನಲ್ಲಿ ಬೊಗಳುತ್ತಬೆ ಮತ್ತು ಕೊಲ್ತಾದೆ ಎಂಬುದಾಗಿ ಉಚ್ಛಾರಣೆ ಮಾಡುತ್ತಾರೆ. ಹಾಗೆಯೇ ಪ್ರಾದೇಶಿಕ ಒಳನುಡಿಗಳಲ್ಲಿ ಬೊಗಳ್ತಾವೆ ಎಂಬುದಾಗಿ ಬಳಕೆಯಲ್ಲಿದೆ. ಗ>ಕ ಕಾ ರದಲ್ಲಿ ವ್ಯತ್ಯಾಸವಾಗುತ್ತದೆ. ನಾಯಿಗ ಎಂಬುದು ಬಹುವಚನ ರೂಪದಲ್ಲಿ ನಾಯಿಗಳು ಎಂಬುದಾಗಿ ಬಳಕೆಯಲ್ಲಿದೆ. ಹಾಗೆ ಬರಹ ಕನ್ನಡದಲ್ಲಿ ನಾಯಿಗಳು ಬೊಗುಳುತ್ತದೆ ಎಂಬುದಾಗಿ ಬಳಸುತ್ತಾರೆ.

ಉದಾ: **ಪ್ರಯೋಗ: ಕೇತ ನಾಯಿಗ ಮೊರಡದೆ ಇತ್ರ ಬಾ**

**ಎ.ತ : ಕೇತ ನಾಯಿಕ ಬೊಗಳುತ್ತಬೆ ಇತ್ರ ಬಾ**

**ಪ್ರಾನು : ಕೇತ ನಾಯ್ಗ್‌ಳು ಬೊಗಳ್ತಾವೆ ಇತ್ಕಡೆ ಬಾ**

**ಬ.ನು** : ಕೇತ ನಾಯಿಗಳು ಬೊಗಳುತ್ತವೆ ಈ ಕಡೆ ಬಾ

| **ಮೊದಲ ತಲೆಮಾರು** | **ಎರಡನೇ ತಲೆಮಾರು** | **ಪ್ರಾದೇಶಿಕ ಒಳನುಡಿ** | **ಬರಹದ ನುಡಿ** |
|---|---|---|---|
| ದೊಡ್ಡವ್ವೆ ಬಾನ | ದೊಡ್ಡವ್ವ ಬಂದ | ದೊಡ್ಡಮ್ಮ ಬಂದ್ಲು | ದೊಡ್ಡಮ್ಮ ಬಂದಳು |

ಬರಹದ ನುಡಿ ದೊಡ್ಡಮ್ಮ ಬಂದಳು ಎಂಬ ಪದವು ಸೋಲಿಗರ ಮೊದಲನೆ ತಲೆಮಾರಿನ ದೊಡ್ಡವ್ವೆ ಬಾನ ಎಂಬುದಾಗಿ ಬಳಕೆಯಲ್ಲಿದೆ. ಎರಡನೇ ತಲೆಮಾರಿನಲ್ಲಿ ದೊಡ್ಡವ್ವ ಬಂದ ಎಂಬುದಾಗಿ ಬಳಕೆ ಮಾಡುತ್ತಾರೆ. ಪ್ರಾದೇಶಿಕ ಒಳನುಡಿಯಲ್ಲಿ ದೊಡ್ಡವ್ವ /ದೊಡ್ಡಮ್ಮ ಎಂಬುದಾಗಿ ಬಳಕೆ ಮಾಡುತ್ತಾರೆ. ಇಲ್ಲಿ ಮೊದಲ ತಲೆಮಾರಿನ ಬಾನ, ಎರಡನೆ ತಲೆಮಾರಿನಲ್ಲಿ ಬಂದ ಎಂಬುದಾಗಿ ಉಚ್ಚಾರಣೆ ಮಾಡುವರು.

ಉದಾ: **ಮೊ.ತ** : ಹೊಸ ಪೋಡಿಂದೆ ದೊಡ್ಡವ್ವೆ ಬಾನ

**ಎ.ತ** : ಹೊಸ ಪೋಡ್ನಿಂದ ದೊಡ್ಡವ ಬಂದ

**ಪ್ರಾನು** : ಹೊಸ ಪೋಡ್ನಿಂದ ದೊಡ್ಡವ್ವ ಬಂದ್ಲು

**ಬ.ನು** : ಹೊಸ ಪೋಡಿನಿಂದ ದೊಡ್ಡಮ್ಮ ಬಂದಳು

| **ಮೊದಲ ತಲೆಮಾರು** | **ಎರಡನೇ ತಲೆಮಾರು** | **ಪ್ರಾದೇಶಿಕ ಒಳನುಡಿ** | **ಬರಹದ ನುಡಿ** |
|---|---|---|---|
| ಇದವ ಇಡಿ | ಇದ ಇಡಕ | ಇದ್ನ ಹಿಡಿ | ಇದನ್ನು ಹಿಡಿ |

ಮೊದಲ ತಲೆಮಾರಿನಲ್ಲಿ ಇದವ ಇಡಿ ಎಂಬುದನ್ನು ಬಳಸುತ್ತಾರೆ. ಎರಡನೆ ತಲೆಮಾರಿನಲ್ಲಿ ಇದ ಇಡಕ ಎಂಬುದಾಗಿ ಉಚ್ಚಾರಣೆಯನ್ನು ಮಾಡುತ್ತಾರೆ. ಪ್ರಾದೇಶಿಕ ಒಳನುಡಿಯಲ್ಲಿ ಇದ್ನ ಹಿಡಿ ಎಂದು ಬಳಕೆಯಲ್ಲಿದೆ ಇದನ್ನು ಹಿಡಿ ಎಂಬುದು ಬರಹದ ಭಾಷೆಯಾಗಿದ್ದು, ಇಲ್ಲಿ ಸೋಲಿಗರ ಮಾತಿನಲ್ಲಿ ಉಚ್ಚಾರಣೆಯಲ್ಲಿ ಅರ್ಥವ್ಯತ್ಯಾಸ ವಾಗುವುದನ್ನು ನೋಡಬಹುದು.

ಪ್ರಯೋಗ: **ಮೊ.ತ** : ಮಾದ ಇದವ ಇಡಿ ಒಗ್ದೊ

**ಎ.ತ** : ಮಾದ ಇದವ ಇಡಕ ಒಗೊಡೊ

**ಪ್ರಾನು:** ಮಾದ ಇದ್ನ ಹಿಡ್ಕ ಹೊಗೊನ

**ಬ.ನು** : ಮಾದ ಇದನ್ನು ಹಿಡಿ ಹೋಗೋಣ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಎತ್ತಕಾವ ಒದೊ | ಎತ್ತಹೊದ | ಎತ್ತಗೊದ | ಎಲ್ಲಿಗೆ ಹೋದರು |

ಎಲ್ಲಿಗೆ ಹೋದರು ಎಂಬುದು ಬರಹದ ನುಡಿಯಲ್ಲಿ ಎತ್ತಕಾವ ಒದೊ ಎಂಬ ಪದವಿದೆ. ಪ್ರಾದೇಶಿಕ ನುಡಿ ಬಳಕೆಯಲ್ಲಿ ಎತ್ತಗೊದ ಎಂಬ ಪದವಿದೆ. ಇದರ ಹಿನ್ನೆಲೆಯಲ್ಲಿ ಎರಡನೆ ತಲೆಮಾರಿನಲ್ಲಿ ಎತ್ತಹೊದ ಎಂಬುದಾಗಿ ಉಚ್ಚಾರಣೆಯಾಗುತ್ತದೆ. ಹೋದರು ಎಂಬುದು ಒದೊ>ಹೊದ>ಹೋದರು ಎಂಬುದಾಗಿದೆ.

ಪ್ರಯೋಗ: **ಮೊ ತ:** ಮಾವ ಎತ್ತಕಾವ ಒದೊ

**ಎ.ತ** : ಮಾವ ಎತ್ತ ಹೊದ

**ಪ್ರಾನು:** ಮಾವ ಎತ್ತಗೊದ

**ಬ.ನು:** ಮಾವ ಎಲ್ಲಿಗೆ ಹೋದರು

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಅವ ಬಂಡಾಗಿ ಅವಲೆ | ಅವಾ~ ಸಂದಾಕಿ | ಅವಳೆ ಅವ್ವು ಚೆನ್ನಾಗ್ವಳೆ | ಅವಳು ಸುಂದರವಾಗಿದ್ದಾಳೆ |

ಬರಹದ ಕನ್ನಡದ ಸುಂದರ ಎಂಬ ಪದವು ಸೋಲಿಗರ ಮೊದಲ ತಲೆಮಾರಿನಲ್ಲಿ ಬಂಡಾಗಿ ಎಂದು ಬಳಕೆಯಾಗುತ್ತಿದ್ದು. ಬಂಡಾಗಿ ಎಂಬುದು ಸುಂದರವಾದ ಎಂಬ ಅರ್ಥವನ್ನು ತಿಳಿಸುತ್ತದೆ. ಪ್ರಸ್ತುತ ಪ್ರಾದೇಶಿಕ ಒಳನುಡಿಯ ಚೆನ್ನಾಗ್ವಳೆ ಎಂಬ ಪದದಿಂದ ಸಂದಾಕಿ ಎಂಬುದನ್ನು ಬಳಸುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಸಂದಾಕಿ ಅನ್ನುವ ಪದವು ಬರಹದ ನುಡಿಯಲ್ಲಿ ಸುಂದರ ಎನ್ನುವ ಅರ್ಥವನ್ನು ತಿಳಿಸುತ್ತದೆ.

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಏವಮರ್ರದಲ್ಲಿ | ಏವಮರ್ದ್ಲಿ | ಯಾವ ಮರ್ದ್ಲಿ | ಯಾವ ಮರದಲ್ಲಿ |

ಮೊದಲ ತಲೆಮಾರಿನ ಸೋಲಿಗ ಭಾಷೆಯಲ್ಲಿ ಏವ ಮರ್ರ ಎನ್ನುವುದು ಎರಡನೇ ತಲೆಮಾರಿನಲ್ಲಿ ಏವಮರ್ದ್ಲಿಯಾಗಿದೆ. ಇಲ್ಲಿ ಸೋಲಿಗರು ರ ಕಾದ ಉಚ್ಚಾರಣೆಯು ಹಳೆಯ ತಲೆಮಾರಿನ ಹಳಕನ್ನಡ ರೂಪದಲ್ಲಿ ಉಚ್ಚಾರಣೆಯಾಗುತ್ತದೆ. ಹೊಸ ತಲೆಮಾರಿನ ಪ್ರಾದೇಶಿಕ ಒಳನುಡಿಯಲ್ಲಿ ಯಾವ ಮರ್ದ್ಲಿ ಎಂಬುದು ಬಳಕೆಯಾಗುತ್ತಿದ್ದು ಬರಹದ ನುಡಿಯ ಯ ಕಾರವು ಸೋಲಿಗ ನುಡಿಯಲ್ಲಿ ಏ ಆಗಿರುವುದು ಕಂಡುಬರುತ್ತದೆ.

ಪ್ರಯೋಗ:		**ಮೊ ತ:** ಏವ ಮರ್ರದಲ್ಲಿ ಜೆನು ಇದೊ

**ಎ ತ :** ಏವ ಮರ್ದಲಿ ಜೆನು ಇದೊ

**ಪ್ರಾನು:** ಯಾವ ಮರ್ದಲ್ಲಿ ಜೇನಯ್ತೆ

**ಬ.ನು :** ಯಾವ ಮರದಲ್ಲಿ ಜೇನು ಇದೆ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಇರುಳುಬಂದತ್ತು | ಇರುಳುಬಂತು | ಇರುಳಾಯ್ತು | ರಾತ್ರಿ ಆಯಿತು |

ಮೊದಲನೆ ತಲೆಮಾರಿನ ಸೋಲಿಗ ನುಡಿಯಲ್ಲಿ ಇರುಳು ಬಂದತ್ತು ಎಂಬುದಾಗಿ ಬಳಕೆಯನ್ನು ಮಾಡುತ್ತಿದ್ದು ಈ ಪದವು ಪ್ರಾದೇಶಿಕ ಒಳನುಡಿಯ ಪ್ರಭಾವದಿಂದ ಇರುಳಾಯ್ತು ಎಂಬುದು ಎರಡನೇ ತಲೆಮಾರಿನಲ್ಲಿ ಇರುಳು ಬಂತು ಎಂಬುದಾಗಿ ಬದಲಾವಣೆಯಾಗಿದೆ ಬರಹ ಕನ್ನಡದಲ್ಲಿ ಇರುಳು ಎಂಬುದು ರಾತ್ರಿ ಎಂಬುದಾಗಿ ಬಳಕೆಯಲ್ಲಿದೆ.

**ಪ್ರಯೋಗ :**		**ಮೊತ:** ಇರುಳು ಬಂದತ್ತು ಬ್ಯಾಗ ಮೆನೆಗ ಒನ

**ಎ.ತ :** ಇರುಳು ಬಂತು ಬೆಗ ಮೆನೆಗೆ ಒನ

**ಪ್ರಾನು:** ಇರುಳಾಯ್ತು ಬೆಗ ಮನ್ಗೊಗು

**ಬ.ನು :** ರಾತ್ರಿ ಆಯಿತು ಬೇಗ ಮನೆಗೆ ಹೋಗು

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಅಚೆಮೆನೆ | ಆಚೆಮೆನೆ | ಮುಂದ್ಲುಮನೆ | ಮುಂದಿನ ಮನೆ |

ಬರಹದ ನುಡಿಯಲ್ಲಿ ಮುಂದಿನ ಮನೆ ಎನ್ನುವುದು. ಸೋಲಿಗರ ಮೊದಲ ತಲೆಮಾರಿನಲ್ಲಿ ಅಚೆ ಮನೆ ಎಂದು ಬಳಕೆ ಮಾಡುತ್ತಾರೆ. ಎರಡನೆ ತಲೆಮಾರಿನವರಲ್ಲಿ ಆಚೆಮೆನೆ ಎಂದು ಸ್ವರದಲ್ಲಿ ಮಾತ್ರ ಬದಲಾವಣೆಗೊಳ್ಳುತ್ತದೆ. ಪ್ರಾದೇಶಿಕ ನುಡಿಯಲ್ಲಿ ಮುಂದ್ಲುಮನೆ ಎಂಬುದಾಗಿ ಉಚ್ಚಾರಣೆಯಾಗುತ್ತದೆ. ಈ ಪದವು ಅ–ಆ ಕಾರದಲ್ಲಿ ವ್ಯತ್ಯಾಸವಾಗುತ್ತದೆ. ಬರಹದ ನುಡಿಯಲ್ಲಿ ಆಚೆ ಎನ್ನುವುದು ಅರ್ಥವ್ಯತ್ಯಯವಾಗುತ್ತದೆ. ಹಾಗೆಯೇ ಮೆನೆ ಎಂಬುದು ಅ ಕಾರಕ್ಕೆ–ಎ ಕಾರ ಬದಲಾವಣೆಗೊಳ್ಳುತ್ತದೆ.

ಪ್ರಯೋಗ:		ಮೊ ತ : ರಂಗಾ ಅಚೆಮನೆಕ ಒನಾ

ಎ ತ : ರಂಗಾ ಆಚೆ ಮೆನೆಗ ಒಗಾ

ಪ್ರಾ. ನು : ರಂಗ ಮುಂದ್ಲುಮನೆಗೆ ಹೊಗೊ

ಬ ನು : ರಂಗ ಮುಂದಿನ ಮನೆಗೆ ಹೋಗು

| **ಮೊದಲ ತಲೆಮಾರು** | **ಎರಡನೇ ತಲೆಮಾರು** | **ಪ್ರಾದೇಶಿಕ ಒಳನುಡಿ** | **ಬರಹದ ನುಡಿ** |
|---|---|---|---|
| ಕಾತು | ಕಾದು | ಕಾಯು | ಕಾಯುವುದು |

ಸೋಲಿಗ ನುಡಿಯಲ್ಲಿ ಕಾತು ಎಂಬ ಪದದ ಅರ್ಥವು ಕಾಯುವುದು ಎಂದರ್ಥವಾಗುತ್ತದೆ. ಮೊದಲ ತಲೆಮಾರಿನಲ್ಲಿ ಕಾತು ಎಂಬ ಪದವನ್ನು ಬಳಕೆ ಮಾಡುತ್ತಾರೆ. ಈ ಪದವು ಸೋಲಿಗ ನುಡಿಯಲ್ಲಿ ಬಿಟ್ಟರೆ ಬೇರೆ ಎಲ್ಲೂ ಬಳಕೆಯಾಗಿಲ್ಲ. ಕಾತು ಪದವು ಬರಹದ ನುಡಿಯಲ್ಲಿ ಕಾಯುವುದು ಎಂದು ಅರ್ಥವನ್ನು ತಿಳಿಸುತ್ತದೆ. ಆದರೆ ಎರಡನೇ ತಲೆಮಾರಿನವರಲ್ಲಿ ಕಾದು ಎಂಬ ಪದವನ್ನು ಬಳಕೆ ಮಾಡುತ್ತಾರೆ. ಇಲ್ಲಿ ಪ್ರಾದೇಶಿಕ ಒಳನುಡಿಯಲ್ಲಿ ಕಾಯು ಎಂಬ ಪದವನ್ನು ಬಳಸುತ್ತಾರೆ. ಇಲ್ಲಿ ತ ಕಾರವು ದ ಕಾರವಾಗಿ ಗುರುತಿಸಿಕೊಂಡಿದೆ.

ಪ್ರಯೋಗ:	**ಮೊ ತ** : ಅವಂಗ ಕಾತುಕ ಎಳೆನಾ

**ಎ ತ** : ಅವನ್ಗೆ ಕಾದುಕ ಎಳ್ದಾ

**ಪ್ರಾ ನು** : ಅವನ್ಗೆ ಕಾಯೋಕೆಳು

**ಬ ನು** : ಅವನಿಗೆ ಕಾಯುವುದಕ್ಕೆ ಹೇಳು

| **ಮೊದಲ ತಲೆಮಾರು** | **ಎರಡನೇ ತಲೆಮಾರು** | **ಪ್ರಾದೇಶಿಕ ಒಳನುಡಿ** | **ಬರಹದ ನುಡಿ** |
|---|---|---|---|
| ಮೆಳೆಬಂದಿಯದೆ | ಮಳೆಬತ್ತದೆ | ಮಳೆಬರ್ತ್ತೆ | ಮಳೆ ಬರುತ್ತದೆ |

ಬರಹದ ನುಡಿಯಲಿ ಮಳೆ ಬರುತ್ತದೆ ಎಂಬ ಪದವು ಸೋಲಿಗರ ಮೊದಲ ತಲೆಮಾರಿನಲ್ಲಿ ಮೆಳೆಬಂದಿಯದೆ ಎಂಬುದಾಗಿ ಬಳಕೆ ಮಾಡುತ್ತಾರೆ. ಇಲ್ಲಿ ಮಳೆ-ಮೆಳೆ ಯಾಗಿದೆ ಎರಡನೆ ತಲೆಮಾರಿನಲ್ಲಿ ಪ್ರಾದೇಶಿಕ ಒಳನುಡಿಯ ಪ್ರಭಾವದಿಂದಾಗಿ ಮಳೆ ಬತ್ತದೆ ಎಂಬುದಾಗಿ ಬಳಸುವುದು ಕಂಡುಬರುತ್ತದೆ. ಅ ಕಾರಕ್ಕೆ ಬದಲಾಗಿ ಎ ಕಾರ ಉಚ್ಚಾರಣೆಯಾದರೆ ಮೆಳೆಯಾಗುತ್ತದೆ. ಸೋಲಿಗ ನುಡಿಯಲ್ಲಿ ಬಂದಿಯದೆ ಎಂಬ ಅರ್ಥ ವ್ಯತ್ಯಾಸ ಆಗುವುದನ್ನು ಗಮನಿಸಲಾಗಿದೆ. ಪ್ರಾದೇಶಿಕ ನುಡಿಯಲ್ಲಿ ಮಳೆ ಬತ್ತದೆ ಎಂದಾಗುತ್ತದೆ. ಇಲ್ಲಿ ಬಂದಿಯದೆ ಎನ್ನುವುದು ಬತ್ತದೆ ಎಂದು ಗುರುತಿಸಿಕೊಂಡಿದ್ದಾರೆ.

ಪ್ರಯೋಗ:	**ಮೊ.ತ** : ಮೆಳೆ ಬಂದಿಯದೆ ಕೆಲ್ಚವ ಪೂರ ಮಾಡಿನ

**ಎ.ತ** : ಮಳೆ ಬತ್ತದೆ ಕೆಲ್ಚವ ಪೂರ್ತ ಮಾಡುಡೊ

**ಪ್ರಾ ನು** : ಮಳೆ ಬರ್ತದೆ ಕೆಲ್ಸವ ಪೂರ್ತಿಮಾಡಿ

**ಬ.ನು** : ಮಳೆ ಬರುತ್ತ ಕೆಲಸವನ್ನು ಪೂರ್ತಿಯಾಗಿ ಮಾಡಿ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಬಾನ | ಬನ್ನ | ಬಂದ | ಬಂದನು |

ಬರಹದ ನುಡಿಯಲ್ಲಿ ಬಂದನು ಎಂಬ ಪದದ ಅರ್ಥವು ಸೋಲಿಗ ನುಡಿಯಲ್ಲಿ ಬಾನ ಎಂಬ ಅರ್ಥವನ್ನು ತಿಳಿಸುತ್ತದೆ. ಬಾನ ಎಂದರೆ ಬರಹದಲ್ಲಿ ಬಂದನು ಎಂದು. ಅರ್ಥವನ್ನು ತಿಳಿಸುತ್ತದೆ. ಮೊದಲ ತಲೆಮಾರಿನಲ್ಲಿ ಬಾನ ಎಂಬುದಾಗಿ ಬಳಕೆ ಮಾಡುತ್ತಾರೆ. ಎರಡನೆ ತಲೆಮಾರಿನಲ್ಲಿ ಪ್ರಾದೇಶಿಕ ಒಳನುಡಿಯ ಪ್ರಭಾವದಿಂದ ಬನ್ನ ಎಂದು ಉಚ್ಚಾರಣೆಯನ್ನು ಮಾಡುತ್ತಾರೆ.

ಪ್ರಯೋಗ: **ಮೊ.ತ:** ಅವಾಂ ಮೈಚೂರಿಗೆ ಒಗ ಬಾನಾ

**ಎ.ತ** : ಅವಾ ಮೈಸುರ್‌ಗೆ ಓಗಿ ಬನ್ನ

**ಪ್ರಾನು:** ಅವ್ನು ಮೈಸೂರಿಗೆ ಹೋಗ್ಬಂದ

**ಬ.ನು** : ಅವನು ಮೈಸೂರಿಗೆ ಹೋಗಿ ಬಂದನು

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ತಿನ್ಗ | ತಿಂಗ | ತಿಂಗ್ಳು | ತಿಂಗಳು |

ಸೋಲಿಗರ ಮೊದಲನೆ ತಲೆಮಾರಿನಲ್ಲಿ ಬಳಕೆಯಲ್ಲಿ ತಿನ್ಗ ಎಂಬ ಪದವು ಬರಹದ ನುಡಿಯಲ್ಲಿ ತಿಂಗಳು ಎಂದು ಬಳಕೆಯಾಗುತ್ತಿದೆ. ಪ್ರಸ್ತುತ ಸಂದರ್ಭದಲ್ಲಿ ಸ್ಥಳೀಯ ನುಡಿಯ ಪ್ರಭಾವದಿಂದಾಗಿ ಎರಡನೇ ತಲೆಮಾರಿನವರಲ್ಲಿ ತಿಂಗ ಎಂದು ಬಳಸುತ್ತಾರೆ ತಿನ್ಗ>ತಿಂಗ>ತಿಂಗ್ಳು> ತಿಂಗಳು ಆಗಿರುವುದನ್ನು ಗಮನಿಸಬಹುದಾಗಿದೆ.

ಪ್ರಯೋಗ: **ಮೊ.ತ** : ಮುದಿನ ತಿನ್ಗ ಬರ್ಲ್ಲಿಲೆ

**ಎ.ತ** : ಮುದಿನ ತಿಂಗ ಬರ್ಲ್ಲಿಲೆ

**ಪ್ರಾನು** : ಮುಂದಿನ ತಿಂಗ್ಳು ಬರ್ಲಿ

**ಬ.ನು** : ಮುಂದಿನ ತಿಂಗಳು ಬರಲಿ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಅಬುಎಟೆಗ | ಅಬುಹುಜ | ಅವುಹುಂಜ | ಅವುಹುಂಜ |

ಬರಹದ ನುಡಿಯ ಅವು ಹುಂಜಗಳು ಎಂಬ ಪದವು ಮೊದಲ ತಲೆಮಾರಿನ ಸೋಲಿಗ ನುಡಿಯಲ್ಲಿ ಅಬು ಎಟೆಗ ಎಂದು ಬಳಕೆಯಾಗುತ್ತಿದೆ. ಅಬು–ಅವು ಆಗಿದೆ ಎಟೆಗ–ಹುಂಜಗಳು ಎಂಬುದಾಗಿ ಬಳಕೆಯಲ್ಲಿದೆ. ಪ್ರಸ್ತುತ ಸಂದರ್ಭದಲ್ಲಿ ಪ್ರಾದೇಶಿಕ ನುಡಿ ಬೆರೆಕೆಯಿಂದ ಹುಂಜವು ಹುಜವಾಗಿ ಎರಡನೆ ತಲೆಮಾರಿನಲ್ಲಿ ಬಳಕೆಯಲ್ಲಿದೆ. ಇಲ್ಲಿ ಪದಾದಿಯಲ್ಲಿ ವ ಕಾರ ಬ ಕಾರವಾಗಿ ಅಬು ಆಗಿದೆ. ಎಟೆಗ–ಹುಜ–ಹುಂಜವಾಗಿರುವುದನ್ನು ಕಾಣಬಹುದಾಗಿದೆ.

ಪ್ರಯೋಗ:	**ಮೊ.ತ** : ಅಬು ಎಡು ಏಟೆಗ

**ಎ.ತ:** ಅಬು ಎರ್ಡು ಹುಜ

**ಪ್ರಾನು:** ಅವು ಎರ್ಡು ಹುಂಜ

**ಬ.ನು** : ಅವು ಎರಡು ಹುಂಜಗಳು

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಅಲಚಿನನ್ನು | ಅಲಸ್ನಣು | ಹಲಸ್ನಣ್ಣು | ಹಲಸಿನ ಹಣ್ಣು |

ಬರಹದ ನುಡಿಯ ಹಲಸಿನ ಹಣ್ಣು ಎಂಬ ಪದವು ಸೋಲಿಗರ ಮೊದಲ ತಲೆಮಾರಿನಲ್ಲಿ ಅಲಚಿನನ್ನು ಎಂದು ಬಳಕೆಯಾಗುತ್ತಿದ್ದು ಪ್ರಾದೇಶಿಕ ಒಳನುಡಿಯ ಪ್ರಭಾವದಿಂದ ಅಲಸ್ನಣು ಎಂಬುದಾಗಿ ಎರಡನೇ ತಲೆಮಾರಿನಲ್ಲಿ ಬಳಕೆಯಾಗುತ್ತಿದೆ ಇಲ್ಲಿ ಪದಾದಿಯಲ್ಲಿ ಅ ಕಾರ ಹ ಕಾರವಾಗಿ ಮತ್ತು ಪದಮಮಧ್ಯ ಪರಿಸರದಲ್ಲಿ ಸ ಕಾರಕ್ಕೆ ಚ ಕಾರ ಬಳಕೆಯಾಗುತ್ತಿದೆ.

**ಪ್ರಯೋಗ:**	**ಮೊ.ತ** : ಎವ ಮರ್ರದ ಅಲಚಿನನ್ನು

**ಎ.ತ** : ಎವ ಮರದ ಅಲಸ್ನಣು

**ಪ್ರಾ. ನು:** ಯಾವ ಮರ್ದ ಹಲಸ್ನಣ್ಣು

**ಬ. ನು:** ಯಾವ ಮರದ ಹಲಸಿನ ಹಣ್ಣು

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಕೂತನು | ಕುತ್ಕ | ಕುನ್ತಕೊ | ಕುಳಿತುಕೊ |

ಮೊದಲ ತಲೆಮಾರಿನ ಸೋಲಿಗರ ಮಾತಿನಲ್ಲಿ ಕೂತನು ಎಂಬ ಪದವು ಬರಹದ ನುಡಿಯಲ್ಲಿ ಕುಳಿತುಕೊ ಎಂದು ಬಳಕೆ ಮಾಡುತ್ತಾರೆ. ಪ್ರಸ್ತುತ ಸಂದರ್ಭದ ಪ್ರಾದೇಶಿಕ ಒಳ ನುಡಿಯಲ್ಲಿ ಕುನ್ತಕೊ ಎಂಬುದಾಗಿ ಬಳಕೆಯಲ್ಲಿದ್ದು ಎರಡನೇ ತಲೆಮಾರಿನಲ್ಲಿ ಕುತ್ಕ- ಕುತುಕವಾಗಿ ಬಳಕೆಯಲ್ಲಿದೆ. ನ ಕಾರವು ಕ ಕಾರವಾಗಿ ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ.

ಪ್ರಯೋಗ:	**ಮೊ ತ** : ಮಾದ ಬಾ ಲೆ ಕುತನು

**ಎ ತ** : ಮಾದ ಬಾ ಲೆ ಕುತ್ಕ

**ಪ್ರಾನು** : ಮಾದ ಬಾರ್ಲೆಲಿ ಕುನ್ತಕೊ

**ಬ ನು** : ಮಾದ ಬಾ ಇಲ್ಲಿ ಕುಳಿತುಕೊ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ನಿಮು ಬಂದಾರಯ | ನಿಮು ಬರ್‍ತಿರಾ | ನಿವ್ ಬರ್ತಿರ | ನೀವು ಬರುತ್ತೀರಾ |

ಸೋಲಿಗ ನುಡಿಯ ಮೊದಲ ತಲೆಮಾರಿನಲ್ಲಿ ನಿಮು ಬಂದಾರಯ ಎಂಬುದಾಗಿ ಬಳಕೆ ಮಾಡುತ್ತಾರೆ. ಬರಹದ ನುಡಿಯಲ್ಲಿ ನೀವು ಬರುತ್ತೀರಾ ಎಂಬುದಾಗಿ ಬಳಕೆಯಲ್ಲಿದೆ. ಪ್ರಸ್ತುತ ಸಂದರ್ಭದಲ್ಲಿ ಪ್ರಾದೇಶಿಕ ನುಡಿಯ ನಿವ್ ಬರ್‍ತಿರ ಎಂಬ ಪದದ ಪ್ರಭಾವದಿಂದಾಗಿ ಎರಡನೇ ತಲೆಮಾರಿನಲ್ಲಿ ನಿಮು ಬರ್‍ತಿರಾ ಎಂಬುದಾಗಿ ಬಳಕೆಯನ್ನು ಮಾಡುತ್ತಾರೆ.

ಪ್ರಯೋಗ: **ಮೊ.ತ:** ಪೋಡಿಗೆ ಒಯ್ತಿವಿ ನಿಮು ಬಂದಾರಯ

**ಎ.ತ:** ಪೋಡಿಗೆ ಒಂಟಿವಿ ನಿವು ಬರ್‍ತಿರಾ

**ಪ್ರಾನು:** ಪೋಡ್ಗೆ ಒಯ್ತನಿ ನಿವು ಬರ್‍ತಿರ

**ಬ.ನು:** ಪೋಡಿಗೆ ಹೋಗುತ್ತೇವೆ ನೀವು ಬರುತ್ತೀರಾ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಗುಣಿಗೆ | ಗುಳಿಗೆ | ಗುಳಿಗೆ | ಗುಳಿಗೆ |

ಬರಹದ ನುಡಿಯ ಗುಳಿಗೆ ಎಂಬ ಪದವು ಸೋಲಿಗರ ಮೊದಲ ತಲೆಮಾರಿನ ಮಾತಿನಲ್ಲಿ ಗುಣಿಗೆ ಎಂದು ಬಳಕೆಯನ್ನು ಮಾಡುತ್ತಾರೆ. ಪದ ಮಧ್ಯದಲ್ಲಿ ಳ ಕಾರಕ್ಕೆ ಬದಲಾಗಿ ಣ ಕಾರ ಬರುತ್ತದೆ. ಹಾಗೆಯೇ ಪ್ರಾದೇಶಿಕ ಒಳ ನುಡಿಯ ಪ್ರಭಾವದಿಂದಾಗಿ ಗುಳಿಗೆ ಎಂದು ಎರಡನೇ ತಲೆಮಾರಿನಲ್ಲೂ ಸಹ ಉಚ್ಚಾರಣೆ ಮಾಡುತ್ತಾರೆ.

ಪ್ರಯೋಗ: **ಮೊ.ತ** : ಕೇತ ನಗ್ರಕೊದ್ರೆ ಜರಕ್ಕೆ ಗುಣಿಗೆ ತೆಕ್ಕೊಬಾ

**ಎ.ತ** : ಕೇತ ನಗ್ರಕ್ಕ ಒದ್ರೆ ಜರಕ್ಕೆ ಗುಳಿಗೆ ತೆಕ್ಕೊಂಡು ಬಾ

**ಪ್ರಾನು** : ಕೇತ ನಗ್ರಕ್ಕೆ ಒದ್ರೆ ಜ್ವರಕೆ ಗುಳ್ಗೆ ತಗೊಂಡು ಬಾ

**ಬ ನು** : ಕೇತ ನಗರಕ್ಕೆ ಹೋದಾಗ ಜ್ವರಕ್ಕೆ ಮಾತ್ರೆ ತೆಗೆದುಕೊಂಡು ಬಾ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಕೈಮದ್ದು | ಕೈ ಔಸ್ದ | ನಾಟಿ ಔಸ್ತಿ | ನಾಟಿ ಔಷಧಿ |

ಬರಹದ ನುಡಿಯ ನಾಟಿ ಔಷಧಿ ಎಂಬ ಪದವು ಸೋಲಿಗರ ಮೊದಲನೆ ತಲೆಮಾರಿನಲ್ಲಿ ಮಾತಿನಲ್ಲಿ ಕೈಮದ್ದು ಎಂದು ಬಳಕೆಯಲ್ಲಿದೆ. ಹಾಗೆಯೇ ಪ್ರಸ್ತುತ ಸಂದರ್ಭದಲ್ಲಿ ಪ್ರಾದೇಶಿಕ ನುಡಿಯ ನಾಟಿ ಔಸ್ತಿ ಎಂಬ ಉಚ್ಚಾರಣೆಯ ಪ್ರಭಾವದಿಂದ ಎರಡನೇ ತಲೆಮಾರಿನಲ್ಲಿ ಕೈ ಔಸ್ದ ಎಂದು ಬಳಕೆಯನ್ನು ಮಾಡುತ್ತಾರೆ. ಷ ಕಾರಕ್ಕೆ ಸ ಕಾರ ವ್ಯತ್ಯಾಸವಾಗಿರುವುದನ್ನು ಕಾಣಬಹುದು.

ಪ್ರಯೋಗ: **ಮೊ ತ** : ಇ ಕಾಯ್ಲಿಗ ಕೈ ಮದ್ದು ಕೊಡ್ರೊಡೊ

**ಎ. ತ** : ಇ ಕಾಯಿಲೆಗೆ ಕೈ ಔಸದ ಕೊಡ್ರೊಡೊ

**ಪ್ರಾ. ನು** : ಇ ಕಾಯ್ಲೆಗೆ ನಾಟಿ ಔಸ್ತಿ ಕೊಡ್ರಿ

**ಬ ನು** : ಈ ಕಾಯಿಲೆಗೆ ನಾಟ ಔಷಧ ಕೊಡಬೇಕು.

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಮಿಂದ್‌ವರೆ | ಇಜ್ತಬೆ | ಈಜ್ತಾರೆ | ಈಜುತ್ತಿದ್ದಾರೆ |

ಸೋಲಿಗರ ಮೊದಲ ತಲೆಮಾರಿನಲ್ಲಿ ಮಿಂದ್‌ವರೆ ಎನ್ನುವಂತಹ ಪದದ ಅರ್ಥವು ಬರಹದ ನುಡಿಯಲ್ಲಿ ಈಜುತ್ತಿದ್ದಾರೆ ಎನ್ನುವಂತಹ ಅರ್ಥವನ್ನು ಕೊಡುತ್ತದೆ. ಪ್ರಾದೇಶಿಕ ಒಳನುಡಿಯ ಪ್ರಭಾವದಿಂದಾಗಿ ಎರಡನೇ ತಲೆಮಾರಿನಲ್ಲಿ ಇಜ್ತಬೆ>ಮೀಜು ಎಂಬುದಾಗಿ ಬಳಕೆಯನ್ನು ಮಾಡುತ್ತಾರೆ. ಇಲ್ಲಿ ಸೋಲಿಗ ನುಡಿಗೂ ಬರಹದ ನುಡಿಗೂ ಸಾಕಷ್ಟು ವ್ಯತ್ಯಾಸ ಕಂಡು ಬರುತ್ತದೆ.

ಪ್ರಯೋಗ: **ಮೊ.ತ.** : ಲೆ ಕೇತ ಐಕ್ಳಲೆ ನಿರ ಮಿಂದ್‌ವರೆ

**ಎ.ತ** : ಲೇ ಕೇತ ಮಕ್ಕಗ ಇಜ್ತಾಬೆ

**ಪ್ರಾನು:** ಲೇ ಕೇತ ಮಕ್ಳೆಲ್ಲಾ ಈಜ್ತಾರೆ

**ಬ.ನು:** ಲೇ ಕೇತ ಮಕ್ಕಳೆಲ್ಲಾ ಈಜುತ್ತಿದ್ದಾರೆ.

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಓಡಿಕಿತ್ತು | ಒಡೊತು | ಒಡ್ತು | ಓಡಿ ಹೋಯಿತು |

ಬರಹದ ನುಡಿಯ ಓಡಿ ಹೋಯಿತು ಎನ್ನುವ ಪದವು ಸೋಲಿಗರ ಮೊದಲ ತಲೆಮಾರಿನ ಮಾತಿನಲ್ಲಿ ಓಡಿಕಿತ್ತು ಎಂಬುದಾಗಿ ಬಳಕೆಯನ್ನು ಮಾಡುತ್ತಾರೆ. ಓಡಿಕಿತ್ತು ಎನ್ನುವ ಪದವು ಬರಹದ ನುಡಿಗಿಂತ ಭಿನ್ನವಾಗಿರುವುದು ಕಂಡುಬರುತ್ತದೆ. ಪ್ರಾದೇಶಿಕ ಒಳನುಡಿಯಲ್ಲಿ ಒಡ್ತು ಎಂಬುದಾಗಿ ಬಳಸಲಾಗುತ್ತದೆ. ಇದರ ಪ್ರಭಾವದಿಂದ ಎರಡನೇ ತಲೆಮಾರಿನಲ್ಲಿ ಒಡೊತು ಎಂಬುದಾಗಿ ಬಳಕೆಯಲ್ಲಿದೆ.

ಪ್ರಯೋಗ: **ಮೊ.ತ.:** ಅವಾ ನೊಡ್ದ ಬೆಳ್ಳ ಅತ್ತಕ ಇತ್ತಕ ಓಡಿಕಿತ್ತು

**ಎ.ತ** : ಅವಾಂ ನೊಡ್ದ ಎಲಿ ಅತ್ತಕ ಇತ್ತಾಗ ಒಡ್ತಿತ್ತು

**ಪ್ರಾನು** : ಅವನು ನೊಡ್ದ ಇಲಿ ಆತ್ತಗ ಇತ್ತಗ ಓಡ್ತಿತ್ತು

**ಬ.ನು** : ಅವನು ನೋಡಿದ ಇಲಿ ಆ ಕಡೆ ಈ ಕಡೆ ಓಡುತ್ತಿತ್ತು

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಎಂಗ್ಚು | ಎಂಗಚ್ರು | ಹೆಂಗ್ಸರು | ಹೆಂಗಸರು |

ಸೋಲಿಗ ನುಡಿಯ ಮೊದಲನೆ ತಲೆಮಾರಿನಲ್ಲಿ ಎಂಗ್ಚು ಎನ್ನುವಂತಹ ಪದದ ಉಚ್ಚಾರಣೆಯು ಬರಹದ ನುಡಿಯ ಹೆಂಗಸು ಎಂಬ ಅರ್ಥವನ್ನು ನೀಡುತ್ತದೆ. ಇಲ್ಲಿ ಚ ಕಾರಕ್ಕೆ

ಸ ಕಾರ ಉಚ್ಚಾರಣೆಯಾಗುವುದನ್ನು ತಿಳಿದುಬರುತ್ತದೆ. ಇಲ್ಲಿ ಎಂಗಚು ಎನ್ನುವುದು ಎರಡನೆ ತಲೆಮಾರಿನ ಪ್ರಾದೇಶಿಕ ಒಳನುಡಿಯ ಪ್ರಭಾವದಿಂದಾಗಿ ಹೆಂಗ್ಸು ಎನ್ನುವ ಅರ್ಥವು ಎಂಗಚು ಎಂದು ಬಳಕೆಯನ್ನು ಮಾಡುತ್ತಾರೆ.

ಪ್ರಯೋಗ: **ಮೊ.ತ.:** ಎಂಗ್ಚ್ರು ಕೊಳ್ಗೊಗ ನಿರ ತಂದಿಯಾರೆ

**ಎ.ತ.:** ಎಂಗಚ್ರು ಕೊಳಕ ಒಗ ನೀರ ತಂದಿಯವರೆ

**ಪ್ರಾನು:** ಹೆಂಗ್ಸರು ಕೊಳೆಕ್ಕೊಗಿ ನೀರ ತಂದ್ವರೆ

**ಬ.ನು:** ಹೆಂಗಸರು ಕೊಳಕ್ಕೆ ಹೋಗಿ ನೀರು ತರುತ್ತಾರೆ.

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ನೆನೆತುಮಾಕು | ನೆನೆತುಮಾಡು | ನೆನಪ್ಮಾಡ್ಕೊ | ನೆನಪು ಮಾಡಿಕೊ |

ಮೊದಲನೆ ತಲೆಮಾರಿನ ಸೋಲಿಗ ಕನ್ನಡ ನುಡಿಯಲ್ಲಿ ನೆನೆತುಮಾಕು ಎನ್ನುವ ಪದವು ಬರಹದ ನುಡಿಯ ನೆನಪು ಮಾಡಿಕೊ ಎಂಬ ಅರ್ಥವನ್ನು ಸೂಚಿಸುತ್ತದೆ. ಇಲ್ಲಿ ಎ ಕಾರ ಅ ಕಾರ ವಾಗಿರುವುದು ಪದದಲ್ಲಿ ಪ ಕ್ಕೆ ಬದಲಾಗಿ ತ ಉಚ್ಚಾರಣೆಯಾಗಿ ಅರ್ಥವ್ಯತ್ಯಾಸವಾಗುತ್ತದೆ. ನೆನೆತು ಮಾಕು ಎನ್ನುವುದು ಬರಹದ ನುಡಿಗಿಂತ ಭಿನ್ನ ಸ್ವರೂಪದಲ್ಲಿರುವುದನ್ನೂ ಕಾಣಬಹುದಾಗಿದೆ. ಪ್ರಾದೇಶಿಕ ಒಳನುಡಿಯಲ್ಲಿ ನೆನಪ್ಮಾಡ್ಕೊ ಎಂಬ ಪದವನ್ನು ಬಳಕೆಯಲ್ಲಿದ್ದು ಎರಡನೆ ತಲೆಮಾರಿನವರಲ್ಲಿ ನೆನೆತುಮಾಡು ಎಂಬುದಾಗಿ ಬಳಸುತ್ತಾರೆ. ಕ ಕಾರಕ್ಕೆ ಬದಲಾಗಿ ಡ ಕಾರವನ್ನು ಉಚ್ಚಾರಣೆ ಮಾಡುತ್ತಾರೆ.

ಪ್ರಯೋಗ: **ಮೊ.ತ :** ಅವ್ವೆ ನಿನ್ಗುವೆ ಕೊಟ್ಟ ಕಸ್ಪ ನೆನೆತುಮಾಕು

**ಎ. ತು :** ಅವ್ವಾಂ ನಿನಗುವೆ ಕೊಟ್ಟ ಕಸ್ಪವ ನೆನತುಮಡು

**ಪ್ರಾ. ನು :** ಅವ್ವ ನಿನ್ಗೆ ಕೊಟ್ಟ ಕಸ್ಟವಾ ನೆನಪ್ಮಾಡ್ಕೊ

**ಬ. ನು :** ಅವ್ವ ನಿನಗೆ ಕೊಟ್ಟ ಕಷ್ಟವನ್ನು ನೆನೆಪು ಮಾಡಿಕೊ

| ಮೊದಲ ತಲೆಮಾರು | ಎರಡನೇ ತಲೆಮಾರು | ಪ್ರಾದೇಶಿಕ ಒಳನುಡಿ | ಬರಹದ ನುಡಿ |
|---|---|---|---|
| ಗೈಯಾಕತೆ | ಗೈಯಾಕನು | ಗೆಯ್ಯ | ಕೆಲಸವನ್ನು ಮಾಡು |

ಬರಹದ ನುಡಿಯಲ್ಲಿ ಕೆಲಸವನ್ನು ಮಾಡು ಎಂಬುದನ್ನು ಸೋಲಿಗರ ಮೊದಲನೆ ತಲೆಮಾರಿನಲ್ಲಿ ಗೈಯಾಕತೆ ಎಂಬುದಾಗಿ ಬಳಸುತ್ತಾರೆ. ಗೆಯ್ ಎಂಬುದು ಕೆಲಸ ಎಂಬ ಅರ್ಥವನ್ನು ಸೂಚಿಸುತ್ತದೆ. ಸೋಲಿಗರ ಮಾತಿನಲ್ಲಿ ಐ ಕಾರ ಸೇರ್ಪಡೆಗೊಳ್ಳುತ್ತದೆ. ಪ್ರಾದೇಶಿಕ ಒಳನುಡಿಯಲ್ಲಿ ಗೆಯ್ಯ ಎಂಬ ಶಬ್ದವನ್ನು ಬಳಸುತ್ತಾರೆ. ಗೆಯ್ಯ ಎಂದರೆ ಕೆಲಸ ಮಾಡು, ಉಳುಮೆ

ಮಾಡು ಎಂಬ ಅರ್ಥವನ್ನು ಕೊಡುತ್ತದೆ. ಎರಡನೇ ತಲೆಮಾರಿನ ಸೋಲಿಗರ ಮಾತಿನಲ್ಲಿ ಗೈಯಾಕನು ಎಂದು ಬಳಕೆ ಮಾಡುತ್ತಾರೆ. ಪದಾಂತ್ಯ ಪರಿಸರದಲ್ಲಿ ತ ಕಾರಕ್ಕೆ ಬದಲಾಗಿ ನಕಾರ ಬಳಕೆ ಮಾಡುತ್ತಾರೆ.

ಪ್ರಯೋಗ: ಮೊ.ತ.: ಜಡೇಯಾ ಇನ್ನುವೆ ಒಂದರ್ಸ ಗೈಯಾಕತೆ

ಎ.ತ : ಜಡೇಯಾ ಇನ್ನುವ ಒಂದರ್ಸ ಗೈಯಾಕನು

ಪ್ರಾನು : ಜಡೇಯಾ ಇನ್ನೂ ಒಂದೊರ್ಷ ಗೆಯ್ಬೇಕು

ಬ. ನು: ಜಡೇಯಾ ಇನ್ನೂ ಒಂದು ವರ್ಷ ಕೆಲಸ ಮಾಡಬೇಕು

ಹೀಗೆ ಸೋಲಿಗರಲ್ಲಿ ತಲೆಮಾರುಗಳಿಂದ ತಲೆಮಾರಿಗೆ ಭಾಷಾ ಬಳಕೆಯಲ್ಲಿ ಬದಲಾಗಿರುವುದನ್ನು ಈ ಮೇಲಿನಂತೆ ಕಾಣಬಹುದಾಗಿದೆ. ಸೋಲಿಗರ ಸಮಾಜಕ್ಕೆ ಪ್ರಾರಂಭದಲ್ಲಿ ಹೊರಗಿನ ಜನಸಂಪರ್ಕ ಕಡಿಮೆ ಇದ್ದ ಕಾರಣ ಮೂಲ ಸೋಲಿಗ ನುಡಿ ಹಾಗೇನೆ ಬಳಕೆಯಾಗುತ್ತಿತ್ತು. ಆದರೆ ಸೋಲಿಗ ಸಮುದಾಯ ಆಧುನಿಕತೆಯ ವಾಹಿನಿ ಕಡೆಗೆ ಅಂಬೆಗಾಲಿಡುತ್ತಿದೆ, ಶಿಕ್ಷಣ ಮಾಧ್ಯಮದಂತ ಶೈಕ್ಷಣಿಕ ಅಭಿರುಚಿಯ ಕಡೆಗೆ ಇವರು ವಾಲುವಂತವರಾಗಿದ್ದಾರೆ. ಇದರಿಂದ ಮೂಲ ಸೋಲಿಗ ನುಡಿಯ ಬಳಕೆಯಲ್ಲಿ ಸೂಕ್ಷ್ಮವಾದ ಬದಲಾವಣೆ ಗೋಚರಿಸತೊಡಗಿದೆ.

**೫.೩.೧. ವಚನಗಳು**

ಬರಹ ಕನ್ನಡದಲ್ಲಿರುವ ವಚನ ವ್ಯವಸ್ಥೆಯು ಸೋಲಿಗ ಕನ್ನಡದಲ್ಲಿಯೂ ಸಹ ಕಂಡುಬರುತ್ತದೆ. ಅಂತೆಯೇ ಯಾವುದೇ ಪ್ರತ್ಯೇಕ ಪ್ರತ್ಯಯವನ್ನು ಹೊಂದುವುದಿಲ್ಲ. ನಾಮಪದದ ಮೂಲರೂಪವೇ ಏಕವಚನದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಆದ್ದರಿಂದ ಏಕವಚನದ ಪ್ರತ್ಯಯವೆಂಬುದು ಪ್ರತ್ಯೇಕವಾಗಿಲ್ಲ. ಬಹುವಚನದ ಪ್ರತ್ಯಯ ಪ್ರತ್ಯಕವಾದಂತಹ ಪ್ರತ್ಯಯಗಳನ್ನು ಪಡೆಯುವುದರ ಮೂಲಕ ಬಹುವಚನದ ರೂಪವನ್ನು ಪಡೆಯುತ್ತವೆ. ಸೋಲಿಗ ಸಮುದಾಯದ ಹಿರಿಯ ತಲೆಮಾರಿನವರಲ್ಲಿ ಬಹುವಚನದ ಪ್ರತ್ಯಯ ಪ್ರತ್ಯೇಕವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಸೋಲಿಗ ಸಮುದಾಯದ ಸಾಮಾಜಿಕ ಭಿನ್ನಾಂಶದವರಲ್ಲಿ ಬಹುವಚನ ಪ್ರತ್ಯಯವು ಗ/ದಿರು/ರು/ಕ ಈ ರೀತಿಯಾಗಿ ಬಳಕೆಯಾಗುವುದನ್ನು ಕಾಣಬಹುದಾಗಿದೆ. ಇತ್ತೀಚಿನ ತಲೆಮಾರಿನವರಲ್ಲಿ ಬದಲಾವಣೆಯ ರೂಪವನ್ನು ಪಡೆದುಕೊಂಡಿದೆ.

**ಸೋಲಿಗ ಕನ್ನಡದಲ್ಲಿನ ಬಹು ವಚನ ಪ್ರತ್ಯಯಗಳು**

ಪ್ರತ್ಯಯ– /ದಿರು/

ಉದಾ: ಸೋ.ಕ. ಶಿ.ಕ

| | |
|---|---|
| ಅಕ್ಕದಿರು | ಅಕ್ಕಂದಿರು |
| ಮಾವದಿರು | ಮಾವಂದಿರು |
| ಅಣ್ಣದಿರು | ಅಣ್ಣಂದಿರು |
| ತಮ್ಮದಿರು | ತಮ್ಮಂದಿರು |

ಪ್ರತ್ಯಯ /ಗ/

| ಉದಾ: ಸೋ.ಕ. | ಶಿ.ಕ |
|---|---|
| ಮರಗ | ಮರಗಳು |
| ಆನೆಗ | ಆನೆಗಳು |
| ಮೆನೆಗ | ಮನೆಗಳು |
| ದನಗ | ದನಗಳು |
| ಕುರಿಗ | ಕುರಿಗಳು |

ಪ್ರತ್ಯಯ– /ಕ/

| ಉದಾ: ಸೋ.ಕ. | ಶಿ.ಕ |
|---|---|
| ಮಕ್ಕ | ಮಕ್ಕಳು |
| ಮೆನೆಕ | ಮನೆಗಳು |

ಪ್ರತ್ಯಯ– /ರು/

| ಉದಾ: ಸೋ.ಕ. | ಶಿ.ಕ |
|---|---|
| ತಂದೆರು | ತಂದೆಯರು |
| ಬೀಗರು | ಬೀಗರು |
| ಅತ್ತೇರು | ಅತ್ತೆಯರು |
| ತಂಗೆರು | ತಂಗಿಯರು |

**೫.೩.೨. ವಿಭಕ್ತಿ ಪ್ರತ್ಯಯಗಳು**

ಕನ್ನಡ ಭಾಷೆಯ ರಚನೆಯಲ್ಲಿ ಪ್ರತ್ಯಯಗಳು ಪ್ರಮುಖ ಸ್ಥಾನವನ್ನು ಹೊಂದಿದೆ. ಕನ್ನಡ ಭಾಷೆಯ ವ್ಯಾಕರಣದಲ್ಲಿ ಪ್ರತ್ಯಯಗಳು ಎರಡು ರೀತಿಯಲ್ಲಿ ಕಂಡುಬರುತ್ತವೆ. ಒಂದು ವಿಭಕ್ತಿ ಪ್ರತ್ಯಯಗಳು ಇನ್ನೊಂದು ಅಖ್ಯಾತ ಪ್ರತ್ಯಯಗಳು. ಕ್ರಿಯಾಪದಗಳಿಗೆ ಸೇರಿ ಕರ್ತೃವಿನ ಲಿಂಗ, ವಚನ, ಮತ್ತು ಕಾಲವನ್ನು ನಿರ್ಧರಿಸುತ್ತವೆ. ವಿಭಕ್ತಿ ಪ್ರತ್ಯಯಗಳು ನಾಮಪದ ಮತ್ತು ಕ್ರಿಯಾಪದಗಳ ಮಧ್ಯೆ ಇರುವ ಕಾರ್ಯವನ್ನು ಗುರುತಿಸುತ್ತವೆ. ಒಂದು ಪದವನ್ನು ಎಷ್ಟು ಬಗೆಯಲ್ಲಿ ವಾಕ್ಯಗಳನ್ನು ಬಳಸಬಹುದು ಎಂಬುದನ್ನು ತಿಳಿಸುವುದಕ್ಕೆ ವಿಭಕ್ತಿ ಪ್ರತ್ಯಯ ಎನ್ನುವರು. ನಾಮ ಪ್ರಕೃತಿಗೆ

ಇ) ಚತುರ್ಥಿ ವಿಭಕ್ತಿ: ಈ ವಿಭಕ್ತಿಯು ಗೆ, ಅಗೆ, ಇಗೆ, ಕೆ, ಅಕ್ಕೆ, ಹೀಗೆ ಹಲವು ರೂಪಗಳನ್ನು ಪಡೆದುಕೊಂಡಿವೆ. ಸೋಲಿಗ ಕನ್ನಡದಲ್ಲಿ ಇಗ/ಕ/-ಅಕ/-ಗ/ ಪ್ರತ್ಯಯಗಳನ್ನು ಪಡೆಯುತ್ತವೆ.

/ಉ/ ಸ್ವರಾಂತ್ಯದಿಂದ ಕೂಡಿದ ಪದಗಳ /ಇಗ/ ಪ್ರತ್ಯಯ ಪಡೆಯುತ್ತದೆ

| ಉದಾ: | ಬ.ಕ | ಸೋ.ಕ |
|---|---|---|
| | ಕಾಡಿಗೆ | ಕಾಡು-ಇಗ=ಕಾಡಿಗ |
| | ನಾಡಿಗೆ | ನಾಡು-ಇಗ=ನಾಡಿಗ |
| | ನವಿಲಿಗೆ | ನವಿಲು-ಇಗ=ನವಿಲಿಗ |

/ಇ/ ಮತ್ತು /ಈ/ ಎ/ ಸ್ವರಾಂತ್ಯದಿಂದ ಕೂಡಿದ ಪದಗಳು /ಕ/ ಪ್ರತ್ಯಯವನ್ನು ಪಡೆದುಕೊಳ್ಳುತ್ತದೆ.

| ಉದಾ: | ಬ.ಕ | ಸೋ.ಕ |
|---|---|---|
| | ಹುಲಿಗೆ | ಉಲಿ-ಕ=ಉಲಿಕ |
| | ಕರಡಿಗೆ | ಕರಡಿ-ಕ=ಕರಡಿಕ |
| | ಆನೆಗೆ | ಆನೆ-ಕ= ಆನೆಕ |
| | ಅವ್ವನಿಗೆ | ಅವ್ವ-ಕ= ಅವ್ವಕ |
| | ಕೈಗೆ ಅಕ | ಕೈ-ಕ = ಕೈಕ |
| | ಅದಕೆ | ಅದ-ಅಕ=ಅದಕ |
| | ಇವುಗಳಿಗೆ | ಇವ-ಅಕ=ಇವಕ |
| | ಯಾವುದಕ್ಕೆ | ಎವ-ಅಕ=ಎವದಕ |

/ಗ/ ಪ್ರಥಮ ಪುರುಷ ಸರ್ವನಾಮ ಮತ್ತು ಆತ್ಮಾರ್ಥಕ ಸರ್ವನಾಮ ಪದದಲ್ಲಿ ಬರುತ್ತದೆ.

| ಉದಾ: | ಬ.ಕ | ಸೋ.ಕ |
|---|---|---|
| | ನನಗೆ | ನನ-ಗ=ನನಗ |
| | ನಮಗೆ | ನಮ-ಗ=ನಮಗ |
| | ಅವನಿಗೆ | ಅವನಿ-ಗ=ಅವನಿಗ |

**ಈ) ಷಷ್ಠಿ ವಿಭಕ್ತಿ**

ಷಷ್ಠಿ ವಿಭಕ್ತಿಯು ಮತ್ತು ದ್ವಿತಿಯಾ ವಿಭಕ್ತಿಯು ಒಂದೇ ರೂಪದಲ್ಲಿ /ಅ/ಕಾರವನ್ನು ಪಡೆದುಕೊಳ್ಳುತ್ತದೆ.

ಉದಾ: ಬ.ಕ ಸೋ.ಕ

| ಬ.ಕ | ಸೋ.ಕ |
|---|---|
| ಮರ | ಮರ |
| ಹಾಲಿನ | ಆಲಿನ |
| ಕೂಸಿನ | ಕೂಚಿನ |
| ನಡುವಿನ | ನಡುವಿನ |
| ಯಾರ | ಏರ |

**ಉ) ಸಪ್ತಮಿ ವಿಭಕ್ತಿ**

ಇದು ಬರಹ ಕನ್ನಡದಲ್ಲಿರುವ ಸಪ್ತಮಿ ವಿಭಕ್ತಿ ಪ್ರತ್ಯಯವು /ಅಲ್ಲಿ/ ಎಂಬುದು ಸೋಲಿಗ ಕನ್ನಡದಲ್ಲಿ /–ಲಿ/ ಎಂಬ ವಿಭಕ್ತಿ ಪ್ರತ್ಯಯವನ್ನು ಹೊಂದಿದೆ.

ಉದಾ:

| ಬ.ಕ | ಸೋ.ಕ |
|---|---|
| ಗಿಣಿಯಲ್ಲಿ | ಗಿನಿಲಿ |
| ನಾಯಿಯಲ್ಲಿ | ನಾಯಿಲಿ |
| ರೆಕ್ಕೆಯಲ್ಲಿ | ರೆಕ್ಕಲಿ |
| ಆನೆಯಲ್ಲಿ | ಆನೆಲಿ |

**೫.೩.೩. ಸಂಖ್ಯಾವಾಚಕಗಳು**

ಭಾಷೆಯು ಮನುಷ್ಯನ ಅತಿಮುಖ್ಯ ಸಂವಹನ ಮಾಧ್ಯಮ ಈ ಮಾದ್ಯಮವೇ ಮನುಷ್ಯನ ಬೆಳವಣಿಗೆಯ ಮೂಲ ಕಾರಣವಾಗಿದೆ, ಇದು ನಿತ್ಯ ಪರಿವರ್ತನಾಶೀಲ ಗುಣವನ್ನು ಹೊಂದಿರುತ್ತದೆ. ಹೀಗೆ ಭಾಷೆಯು ಬದಲಾವಣೆ ಹೊಂದಿರುತ್ತಿರುವ ನಿಟ್ಟಿನಲ್ಲಿ ಭಾಷೆಯ ಕೂಡುವಿಕೆ ಪ್ರಕ್ರಿಯೆಯು ನಿರಂತರವಾಗಿರುತ್ತದೆ. ಹೀಗೆ ಭಾಷಾ ರಚನಕ್ರಮವು ಬದಲಾವಣೆ ಹೊಂದುತ್ತಾ ಹೋಗುತ್ತದೆ. ಭಾಷೆಯ ಬದಲಾವಣೆ ಪ್ರಕ್ರಿಯೆಯು ಧ್ವನಿ ಹಾಗೂ ಪದಗಳ ರಚನೆಯಲ್ಲಿ ವ್ಯತ್ಯಾಸ ಕಾಣಿಸಿಕೊಂಡ ನಂತರ ಅನೇಕ ಉಪಭಾಷೆಗಳು ಉಗಮಕ್ಕೆ ಕಾರಣವಾಗಿರುತ್ತದೆ, ಈ ಕಾರಣಕ್ಕೆ ಭಾಷೆಯು ನೆರೆಹೊರೆ ಹಾಗೂ ಸಾಮಾಜಿಕ ಸಂದರ್ಭ, ಸಮಾಜದ ಭಾಷೆ ಮುಂತಾದವುಗಳಿಂದ ಧ್ವನಿಯಲ್ಲಿ ವ್ಯತ್ಯಾಸಗಳುಂಟಾಗುತ್ತದೆ. ಇದರಿಂದಾಗಿ ಭಾಷೆಗಳನ್ನು ಬಳಸುವಂತಹ ಸಂದರ್ಭದಲ್ಲಿ ಪ್ರಭೇದಗಳಾಗಿ ಕಾಣಿಸುವವು. ಬುಡಕುಟ್ಟು ಸಮುದಾಯಗಳು, ಆದಿವಾಸಿಗಳು ಹಾಗೂ ಗಿರಿಜನರು ಆಡುವ ನುಡಿಯು ಪ್ರಕೃತಿ ಮತ್ತು ಮಾನವ ಸಹಸಂಬಂಧವನ್ನು ಹೊಂದಿದ ಭಾಷೆಯಾಗಿರುವುದು ಕಂಡುಬರುತ್ತದೆ. ಸೋಲಿಗರು ಆದಿವಾಸಿಗಳು ಇವರು ದಟ್ಟವಾದ ಅರಣ್ಯ ಪ್ರದೇಶದಲ್ಲಿ ವಾಸವಾಗಿದ್ದು ತದನಂತರದಲ್ಲಿ ಕಾಡುಗಳಲ್ಲಿ ಸಂಚಾರ ಮಾಡಿ ಗೆಡ್ಡೆ ಗೆಣಸು, ಹಾಗೂ ಜೇನು ಇತ್ಯಾದಿಗಳನ್ನು ಸಂಗ್ರಹಿಸಿ ಜೀವನ ನಡೆಸುತ್ತಿದ್ದು ಅನಂತರ ದಿನಗಳಲ್ಲಿ ಒಂದು ಕಡೆ ನೆಲೆಯೂರಿ

ಅನುಕೂಲಕರವಾದ ಜಾಗವನ್ನು ಆಯ್ಕೆಮಾಡಿಕೊಂಡು ಜೀವನ ಪ್ರಾರಂಭಿಸಿದವರು. ಸೋಲಿಗ ಸಮುದಾಯದಲ್ಲಿ ಪರಿಮಾಣ ಅಳತೆ, ಹಾಗೂ ಸಂಖ್ಯೆಗಳನ್ನು ಗುರುತಿಸಲು ಬಳಕೆಯಲ್ಲಿರುವ ಸೋಲಿಗರ ಕನ್ನಡದ ಸಂಖ್ಯಾವಾಚಕಗಳನ್ನು ಕುರಿತು ಈ ಲೇಖನದಲ್ಲಿ ವಿವರಿಸಲಾಗಿದೆ.

ಸೋಲಿಗ ಕನ್ನಡ ಭಾಷೆಯಲ್ಲಿ ಸಂಖ್ಯಾವಾಚಿಗಳು ತುಂಬಾ ವಿಶಿಷ್ಟ. ನಾಮಪದಗಳಲ್ಲಿ ಸಂಖ್ಯಾನಾಮಗಳೆಂದು ಕರೆಯಲಾಗುತ್ತದೆ. ನಾಮಪದಗಳಲ್ಲಿ ಒಂದಾದ ಸಂಖ್ಯಾವಾಚಗಳು ಮುಖ್ಯವಾಗಿ ವಿಭಕ್ತಿ ಪ್ರತ್ಯಯ, ವಿಶೇಷಣ, ಕ್ರಿಯಾವಿಶೇಷಣಗಳು ಭಾಷೆಯಲ್ಲಿ ಪ್ರಸಾರ ಆಗುತ್ತವೆ. ಆದರೆ ಸೋಲಿಗ ಕನ್ನಡದಲ್ಲಿ ಒಂದರಿಂದ ಹತ್ತು, ಸಂಖ್ಯಾವಾಚಿಗಳು ಬಳಕೆಯಾಗುವುದರಲ್ಲಿ ಪ್ರಾದೇಶಿಕತೆ ಮತ್ತು ಸಾಮಾಜಿಕ ಹಿನ್ನೆಯನ್ನು ಹೊಂದಿವೆ.

ಸರಳ ಸಂಖ್ಯಾವಾಚಿಗಳು (ಮೂಲ ಸಂಖ್ಯಾವಾಚಕಗಳು)

| **ಬರಹದ ಕನ್ನಡ** | **ಸೋಲಿಗ ನುಡಿ** |
|---|---|
| ಒಂದು | ವನ್ದು/ಒನ್ದು |
| ಎರಡು | ಎರ್ಡು/ಇರ್ಡು |
| ಮೂರು | ಮೂರು |
| ನಾಲ್ಕು | ನಾಕು |
| ಐದು | ಅಯ್ದು |
| ಆರು | ಆರು |
| ಏಳು | ಎಳು |
| ಎಂಟು | ಎನ್ಟು |
| ಒಂಭತ್ತು | ವಂಬತ್ತು |
| ಹತ್ತು | ಅತ್ತು |

**ವ** > ಒ : ಬರಹದ ಕನ್ನಡದಲ್ಲಿ ಒಂದು, ಒಂಬತ್ತು ಈ ಸಂಖ್ಯಾವಾಚಿಗಳು ಸೋಲಿಗ ಕನ್ನಡದಲ್ಲಿ ವ್ಯಂಜನ '**ವ**'ದಿಂದ(ವನ್ದು>ಒಂದು) ಆರಂಭಗೊಳ್ಳುತ್ತವೆ. ಇದರಂತೆ **ಅತ್ತು>ಹತ್ತು** ಎಂದಾಗುತ್ತದೆ. **ಐದು>ಅಯ್ದು** ಈ ಸಂಖ್ಯಾವಾಚಿ ಪ್ರಸಾರವು ಕನ್ನಡದ ಆಡುನುಡಿಗಳಲ್ಲಿ ಬಳಕೆಯಂತೆಯೇ ಪ್ರಸಾರಗೊಳ್ಳುತ್ತಿರುವುದು ವಿಶೇಷ. ಐ ಮತ್ತು ಔ ವರ್ಣಗಳು ಕನ್ನಡದಲ್ಲಿ ಸಂಧ್ಯಾಕ್ಷರಗಳು ಎಂದು ಕರೆಯಲಾಗುತ್ತದೆ. ಈ ವರ್ಣಗಳು ಅಯ್ (ಐ) ಮತ್ತು ಅವ್ (ಔ) ಹೀಗೂ ಬಳಕೆ ಮಾಡಬಹುದು ಎನ್ನುವ ನಿಯಮವಿದೆ. ಹಾಗಾಗಿ ಈ ಸಂಖ್ಯಾವಾಚಿಗಳು ಸೋಲಿಗ ಕನ್ನಡದಲ್ಲಿ ಈ ರೂಪದಲ್ಲಿ ಬಳಕೆ ಆಗುತ್ತಿರುವವುದು ಮೂಲ ದ್ರಾವಿಡ ಭಾಷೆಯ ಸುಳಿವುಗಳು ಪ್ರಸ್ತುತದಲ್ಲಿಯೂ ಕೂಡಾ ಬುಡಕಟ್ಟು ಸಮುದಾಗಳಲ್ಲಿ ಕಾಣುವುದು ವೈಶಿಷ್ಟ್ಯ ಪೂರ್ಣವಾದದ್ದು. **ಎಂಟು>ಎನ್ಟು**ಕನ್ನಡದಲ್ಲಿ ಈ ರೂಪಗಳು ಬಹುಮುಖ್ಯವಾಗಿ ಆಡು ಭಾಷೆಯಲ್ಲಿ ಮತ್ತು

ಸಮುದಾಯಿಸಿಷ್ಟ ಭಾಷೆಯಲ್ಲಿ ಕಂಡುಬರುತ್ತವೆ. **ಅಂಕ, ಚಂಡ, ಪಂದ್ಯ** ಈ ಸಬಿಂದುಕಗಳು ಅಬಿಂದುಕಗಳಾಗಿ ಅದೇ ವರ್ಗದ ಐದನೆಯ ವರ್ಣವನ್ನು ಸಬಿಂದಿವಿನ ರೂಪದಲ್ಲಿ ಪ್ರಸಾರಗೊಳ್ಳುತ್ತವೆ.

**ಎಂಟು**> ಎನ್ಟು

**ಅಂಕ**> ಅನ್ಕ

**ಚಂಡ**> ಚನ್ಡ

**ಪಂದ್ಯ**> ಪನ್ದ್ಯ

ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು ಇವುಗಳು ಉಪ ಆಕೃತಿಮಾಗಳನ್ನು ಪಡೆಯುವುದರ ಜೊತೆಗೆ ದಶಮಾನ ಅಂಕಿಗಳಾಗಿ ಬದಲಾಗುತ್ತವೆ. ಹತ್ತು ಸಂಖ್ಯಾವಾಚಕದಲ್ಲಿ ಉಪ ಆಕೃತಿಮಾ ಎಂಬಂತೆ ಬಳಕೆಯಾಗುವುದನ್ನು ಸಾಮಾನ್ಯವಾಗಿ ಭಾಷೆಯಲ್ಲಿ ಕಂಡುಬರುತ್ತದೆ. ಈ ಸ್ವರೂಪಗಳು ಸೋಲಿಗರ ಬದುಕಿನಲ್ಲಿ ಬಳಕೆ ಬಹಳ ವಿಶಿಷ್ಟ. ಕೃಷಿ ಚಟುವಟಿಕೆಗಳನ್ನು ಉದ್ದೇಶಿಸಿ ಕೆಲವೊಂದು ಉಪಕರಣಗಳ ಬಗ್ಗೆ ಅವರ ಆಡುನುಡಿಯಲ್ಲಿ ಸಂಖ್ಯಾವಾಚಗಳು ಬಳಕೆ ಆಗುತ್ತವೆ. ಕೊಂಡುಕೊಳ್ಳಿಕೆಯಂತಹ ವ್ಯವಹಾರದಲ್ಲಿ ಅವರು ಬಳಸುವ ಸಂಖ್ಯಾವಾಚಗಳನ್ನು ಗಮನಿಸಬಹುದು. ಚೇರು, ಚಟಾಕು, ಪಾವು, ಅಚ್ಚೇರು, ಇಬ್ಬಳಿಗೆ ಇವು ಧಾನ್ಯಗಳನ್ನು ಅಳೆಯುವ ಮಾಪನಗಳಾಗಿವೆ. ಧಾನ್ಯಗಳ ತೂಕವನ್ನು ಕಾಲುಭಾಗ, ಅರ್ಧಭಾಗ, ವಂದುಭಾಗ ಎಡುವರೆ ಎಂದು ಪರಿಮಾಣಿಸಲಾಗುತ್ತದೆ.

| **ಬರಹ ಕನ್ನಡ** | **ಸೋಲಿಗ ನುಡಿ** |
|---|---|
| ಕಾಲುಭಾಗ | ಪಾವು |
| ಅರ್ಧಭಾಗ | ಅಚ್ಚೇರು/ಅಸ್ಸೇರು |
| ಅರ್ಧ | ಅರೆ |
| ಕಾಲು | ಚಟಾಕು |
| ಕಾಲು | ಕಾಲ್ |
| ಒಂದುಕಾಲು | ವಂದುಕಾಲು |
| ಒಂದು ಮುಕ್ಕಾಲು | ವಂದುಮುಕ್ಕಾಲು |
| ಒಂದುವರೆಕ್ವಿಂಟಾಲು | ವಂದ್ವರೆ ಕಿಂಟಾಲು |
| ಐದು ಸೇರು | ಇಬ್ಬಳಿಗೆ |
| ಇನ್ನೂರು ಸೇರು | ಕಂಡ್ಗ |

ಹಾಗೆಯೇ ಇಲ್ಲಿ ಸಂಖ್ಯೆಗಳಿಗೆ ನಾಮಪದಗಳು ಸೇರಿಕೊಂಡು ಇಂದು ನಿರ್ದಿಷ್ಟ ಅಳತೆ ಮತ್ತು ವಸ್ತುವನ್ನು ಸಾಂಕೇತಿಸುತ್ತವೆ.

ಇಪ್ಪತ್ತು ಸೇರು

ಮುಕ್ಕಾಲುಸೇರು

ಅರ್ಧಸೇರು

**ಸಾಧಿತ ಸಂಖ್ಯಾವಾಚಕಗಳು**

ಸೋಲಿಗ ಸಮುದಾಯದಲ್ಲಿ ಮೊದಲು ಸಂಖ್ಯಾವಾಚಕಗಳು ಪ್ರತ್ಯಯಗಳು ಸೇರಿ ನಾಮಪದಗಳು ಹೇಗೆ ಬಳಕೆಯಲ್ಲಿವೆ ಎಂಬುದಕ್ಕೆ ಈ ಕೆಳಗಿನ ಉದಾಹರಣೆಯನ್ನು ಗಮನಿಸಲಾಗಿದೆ.

| **ಬರಹದನುಡಿ** | **ಸೋಲಿಗನುಡಿ** |
|---|---|
| ಇಪ್ಪತ್ತು | ಇಪ್‌ತು |
| ಮೂವತ್ತು | ಮುವತು |
| ನಲ್ವತ್ತು | ನಲ್ವತು |
| ಅರವತ್ತು | ಅರ್ವತು |
| ಎಂಬತ್ತು | ಎಂಬತು |
| ತೊಂಬತ್ತು | ತೊಂಬತು |

ನಲ್ವ/ಅಯ್ವ/ಅರ್ವ/ಇಪ್ಪ/ಎಂಬ/ತೊಂಬ ಈ ಸಂಖ್ಯಾವಾಚಕ ಪ್ರತ್ಯಯಗಳು ಉಪ ಆಕೃತಿಮಾಗಳಾಗಿ ಪ್ರಸಾರವಾಗುತ್ತವೆ. ಇವುಗಳು ದಶಮಾನ ಸಂಖ್ಯೆಯ ಪ್ರಯೋಗಕ್ಕೆ ಕಾರಣ ಆಗುತ್ತವೆ. ಈ ಸಂಖ್ಯಾ ಪ್ರತ್ಯಯಗಳು ಮುಖ್ಯವಾಗಿ ನಿರ್ದಿಷ್ಟವಾದ ಗುಣವನ್ನು ಒಳಗೊಂಡಿರುತ್ತವೆ. ಯಾಕೆಂದರೆ ಇಲ್ಲಿ ದಶಮಾನ ಸಂಖ್ಯೆಯಾಗಿರುವ ಹತ್ತು ಮುಂದಿನ ಇಪ್ ಎಂಬ ಸಂಖ್ಯಾ ಪ್ರತ್ಯಯ ಸೇರುವುದರಿಂದ ಇಪ್ಪತ್ತು ಎನ್ನುವ ಪೂರ್ಣ ಪ್ರಮಾಣದ ನಿರ್ದಿಷ್ಟವಾಗಿರುವ ಸಂಖ್ಯಾವಾಚಕ ಪ್ರಸಾರಗೊಳ್ಳುತ್ತದೆ. ಹಾಗೆಯೇ ನೂರರಿಂದ ಸಾವಿರದವರೆಗೆ, ಇನ್/ಮುನ್/ನಾಲ್/ಅಯ್/ಅರ್/ಎಳ್/ಎಂಟ್/ಒಂಬೈ ಈ ರೀತಿ ಉಚ್ಚಾರಣೆಯಲ್ಲಿರುವುದನ್ನು ಕಾಣಬಹುದು

| **ಬರಹದನುಡಿ** | **ಸೋಲಿಗ ನುಡಿ** |
|---|---|
| ನೂರು | ನೂರ್ |
| ಇನ್ನೂರು | ಇನೂರು |
| ಮುನ್ನೂರು | ಮುನೂರು |
| ನಾಲ್ಕುನೂರು | ನಾಲೂರು |
| ಐದುನೂರು | ಅಯ್ನೂರು |
| ಸಾವಿರ | ಚಾವಿರ/ಚಾವ್ರ/ಸಾವ್ರ |
| ಒಂದುವರೆಸಾವಿರ | ವಂದ್ವರೆಸಾವ್ರ |

ಒಂದುಲಕ್ಷ ವಂದ್ಲಕ್ಸ

ಎರಡುವರೆಲಕ್ಷ ಎಡುವರ್ಲಕ್ಸ

ಸೋಲಿಗರು ಆಧುನಿಕತೆಯ ಪ್ರಭಾವಕ್ಕೆ ಒಳಗಾದಂತೆ ಹಾಗೂ ಆ ಸಮುದಾಯದ ವಿದ್ಯಾವಂತರಲ್ಲಿ ಸಂಖ್ಯಾವಾಚಕಗಳ ಬದಲಾವಣೆಗಳಾಗಿವೆ. ಸಮುದಾಯವು ಶಿಕ್ಷಣ, ರಾಜಕೀಯ ಅಭಿವೃದ್ಧಿಯಾಗುತ್ತಿದ್ದಂತೆ ತನ್ನ ಮಾತೃಮೂಲ ನುಡಿಗಳನ್ನು ಕೈಬಿಡುತ್ತಾ ಬಂದಿದೆ. ಹಿಂದೆ ಇದ್ದಂತಹ ಹಲವು ಪ್ರಾಚೀನ ಪದಗಳು ಇಂದೂ ಸಮುದಾಯದಲ್ಲಿ ಬಳಕೆಯಾಗುತ್ತಿಲ್ಲ. ಇದಕ್ಕೆ ಪ್ರಭಾವಿ ಸಂಸ್ಕೃತಿಯ ಹೇರಿಕೆಯಾಗಿದೆ. ಶಿಕ್ಷಣದಲ್ಲಿ ಎಲ್ಲರಿಗೂ ಹತ್ತಿರವಾಗುವ ಭಾಷೆಯನ್ನು ಬಳಕೆ ಮಾಡಲಾಗುತ್ತದೆ. ಇದನ್ನು ಪ್ರಮಾಣಬದ್ಧ ಭಾಷೆಯೆಂದು ಕರೆಯುತ್ತಾರೆ. ಈ ಪ್ರಮಾಣಬದ್ಧ ಭಾಷೆಯು ಪ್ರಬಲವಾಗಿ ಬೇರೂರಿ ಕೇವಲ ಆಡುಭಾಷೆಯಾಗಿರುವ ಸಮುದಾಯ ಭಾಷೆಗಳು ನೆಲಕಚ್ಚಿ ಹೋಗುವಂತೆ ಮಾಡಿದೆ. ಮಾತೃ ಭಾಷೆಯು ಜೀವಂತವಾಗಿರಬೇಕೆಂದರೆ ಅದು ಕಲಿಕೆಯ ಭಾಷೆಯಾಗಿರಬೇಕು. ಹಾಗಿದ್ದಾರೆ ಪ್ರತಿಯೊಂದು ಭಾಷೆಗೂ ಅಸ್ತಿತ್ವ ಇರುತ್ತದೆ ಎನ್ನಬಹುದು.

**೫.೪. ಮಾರುಕಟ್ಟೆಯಲ್ಲಿ ಭಾಷೆ ಬಳಕೆ**

ಸೋಲಿಗರು ಮಾರುಕಟ್ಟೆಯಲ್ಲಿ ವಸ್ತುಗಳನ್ನು ಖರೀದಿಸುವ ಸಂದರ್ಭದಲ್ಲಿ ಸ್ಥಳೀಯ ಭಾಷೆಯನ್ನು ಮಾತನಾಡುವರೊಂದಿಗೆ ವ್ಯವಹರಿಸಬೇಕಾಗುತ್ತದೆ. ಇಲ್ಲಿ ಸಾಮಾವ್ಯವಾಗಿ ಮಾರುಕಟ್ಟೆಗಳು ನಗರ ಪ್ರದೇಶಗಳಲ್ಲಿ ಕಂಡುಬರುತ್ತವೆ. ಮಾರುಕಟ್ಟೆಯಲ್ಲಿ ಅನೇಕ ಭಾಷಾ ಸಮುದಾಯುದವರು ಸೇರಿರುತ್ತಾರೆ. ಅವರೊಂದಿಗೆ ವ್ಯವಹಾರ ಮತ್ತು ವಹಿವಾಟು ಮಾಡಬೇಕಾದಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ಸೋಲಿಗ ಸಮುದಾಯದವರು ವ್ಯವಹಾರಕ್ಕಾಗಿ ನಗರ ಪ್ರದೇಶಗಳಿಗೆ ಬಂದಾಗ ಇಲ್ಲಿನ ಸ್ಥಳೀಯ ಕನ್ನಡವನ್ನು ಕಲಿತು ವ್ಯವಹಾರ ಮಾಡಬೇಕಾಗುತ್ತದೆ. ಇತ್ತೀಚಿನ ತಲೆಮಾರಿನವರಲ್ಲಿ ಮಾರುಕಟ್ಟೆಗೆ ಬರುವುದು ಸಹಜ ಪ್ರಕ್ರಿಯೆಯಾಗಿದೆ. ದಿನನಿತ್ಯದ ಬದುಕಿನಲ್ಲಿ ಅವರ ಅಗತ್ಯ ಪೂರೈಕೆ ಸಾಮಗ್ರಿಗಳು ಎರಡು ಮತ್ತು ಮೂರನೇ ತಲೆಮಾರಿಗೆ ಅವಶ್ಯಕವಾಗಿರುತ್ತದೆ. ಹಿರಿಯ ತಲೆಮಾರಿಗೂ ಅವಶ್ಯಕತೆ ಇದ್ದರೂ ಸಹ ಅವರು ಹೆಚ್ಚು ಪಟ್ಟಣ ಪ್ರದೇಶಕ್ಕೆ ಬರಲು ಇಚ್ಚಿಸುವುದಿಲ್ಲ. ನೆಂಟರಿಷ್ಟರ ಬಳಿ ಅಥವಾ ಸಂಬಂಧಿಕರ ಬಳಿ ತೆಗೆಸಿಕೊಳ್ಳುವಂತಹ ಪರಿಪಾಟವಿದೆ. ಮಾರುಕಟ್ಟೆಯಲ್ಲಿ ಬಹುಭಾಷಿಕರು ಇಲ್ಲಿ ಬಂದು ವ್ಯವಹಾರ ಮಾಡುವಂತಹ ಸಂದರ್ಭದಲ್ಲಿ ಸೋಲಿಗರು ಕನ್ನಡದ ಪ್ರಾದೇಶಿಕ ನುಡಿಯಲ್ಲಿ ವ್ಯವಹಾರ ಮಾಡುವುದು ಕಂಡುಬರುತ್ತವೆ.

ಉದಾ:

| ಸೋಲಿಗ ಭಾಷೆ | ಸೋ.ವ್ಯ.ಭಾಷೆ | ಬರಹದ ನುಡಿ |
|---|---|---|
| ಎಟು | ರೈಟು | ಬೆಲೆ |

| | | |
|---|---|---|
| ಎಚ್ಚು | ಎಸ್ಟು | ಎಷ್ಟು |
| ಸೇರು | ಲೀಟ್ರು | ಲೀಟರು |
| ವಸಿಕಮ್ಮಿ | ಅಪ್ರಟು | ಅರ್ಧಬೆಲೆ |
| ಮುನಗಡ | ಅಡ್ವಾನ್ಸು | ಮುಂಗಡ |
| ಅನ್ಗಡಿ | ಅಂಗಡಿ | ಅಂಗಡಿ |
| ಯಾಪರ | ವ್ಯಾಪರ | ವ್ಯಾಪಾರ |
| ವಚಿ | ಸ್ವಲ್ಪ | ಸ್ವಲ್ಪ |
| ಬ್ಯಾಡಿಗೆ | ಬಾಡ್ಗೆ | ಬಾಡಿಗೆ |
| ಚಂತೆ | ಸಂತ್ಯೆ | ಸಂತೆ |
| ಚಾಮನು | ಸಾಮನು | ಸಾಮಾನು |
| ಸಿಪರೇಟು | ಚಿಪರ್ರೈಟು | ಕಡಿಮೆ ಬೆಲೆ |
| ದೇಸ್ತಿ | ಜೇಸ್ತಿ | ಹೆಚ್ಚು |
| ಅಡ್ಡೆಯಾಪರ | ಅಡ್ಯಾಪಾರ | ಅಡ್ಡ ವ್ಯಾಪಾರ |
| ಅಲೆಯದು | ಅಳೆದು | ಅಳೆಯುವುದು |
| ಕಮಿಚನ್ | ಕಮಿಸನ್ | ಕಮಿಷನ್ |
| ಒಚ್ದು | ಒಸದು | ಹೊಸದು |
| ಮೊಟ್ನಾ | ಪ್ಯಕೆಟ್ಟು | ಪೋಟ್ಟಣ |
| ಕಂಬ್ಲ | ಕೂಲಿ | ಕೂಲಿ |
| ತೆಕ್ಕಡಿ | ತಕ್ಕಡ್ಯೆ | ತಕ್ಕಡಿ |
| ದೆಲ್ಲಾಲಿ | ದಲ್ಲಾಲಿ | ದಲ್ಲಾಳಿ |
| ಕರಿದಿ | ಪರ್ಚೆಸ್ | ಖರೀದಿ |
| ನಚ್ಟ | ನಸ್ಟ | ನಷ್ಟ |
| ತೂಗು | ತೂಕ | ತೂಕ |
| ಎಗೆ | ಎನ್ಗೆ | ಎಷ್ಟು |

ಸೋಲಿಗರು ಮಾರುಕಟ್ಟೆಯ ವ್ಯವಹಾರ ಸಂದರ್ಭದಲ್ಲಿ ಅವರ ಸೋಲಿಗ ಕನ್ನಡವನ್ನು ಬಳಸಿ ಮಾತನಾಡುವುದಿಲ್ಲ. ಇಲ್ಲಿನ ಪ್ರಾದೇಶಿಕ ನುಡಿಯನ್ನು ಮಾರುಕಟ್ಟೆಯಲ್ಲಿ ಬಳಸುತ್ತಾರೆ. ಬಳಸುವಂತಹ ಸಂದರ್ಭದಲ್ಲಿ ಸೋಲಿಗರು ಇಂಗ್ಲೀಶ್ ಪದಗಳನ್ನು ನುಡಿಬೆರಕೆ ಮಾಡಿ ಮಾತನಾಡುವುದು ಇಲ್ಲಿ ಕಂಡುಬರುತ್ತದೆ. ಎರಡನೇ ತಲೆಮಾರು ಮತ್ತು ಹೊಸ ತಲೆಮಾರಿನಲ್ಲಿ

ಇಂಗ್ಲೀಶ್ ಪದಗಳ ಬಳಕೆ ಸಾಮಾನ್ಯವಾಗಿ ಕಂಡುಬರುತ್ತದೆ. ಸೋಲಿಗರು ಆಧುನಿಕತೆಯ ಕಡೆ ಮುಖ ಮಾಡಿಕೊಂಡಿರುವುದು ಇವುಗಳಿಂದ ತಿಳಿದುಬರುತ್ತದೆ.

**೫.೫. ಸುಡಿಬೆರಕೆ**

ಮನುಷ್ಯ ಸಂಘ ಜೀವಿ. ಅವನು ಸಮುದಾಯದ ಸುತ್ತ-ಮುತ್ತ ಜನರೊಡನೆ ಉತ್ತಮ ರೀತಿಯಲ್ಲಿ ಸಂಪರ್ಕವನ್ನಿಟ್ಟುಕೊಳ್ಳಬೇಕಾಗುತ್ತದೆ. ಬೇರೆ ಬೇರೆ ಸಮುದಾಯಗಳೊಂದಿಗೆ ಸಂಪರ್ಕ ಅನಿವಾರ್ಯವಾಗಿದೆ. ಕಾಲಕಾಲಕ್ಕೆ ತಕ್ಕಂತೆ ಸಮಾಜ ಬದಲಾವಣೆಗೊಂಡಂತೆ ಅವನ ಜೀವನ ಶೈಲಿಯು ಬದಲಾವಣೆಗೊಳ್ಳುತ್ತಾ ಹೋಗುತ್ತದೆ. ಹಾಗೆಯೇ ಸಮುದಾಯದ ಭಾಷೆಯನ್ನು ಬಿಟ್ಟು ಬೇರೆ ಬೇರೆ ಭಾಷಿಕರೊಂದಿಗೆ ಒಡನಾಟ ಬೆಳೆಸುವ ನಿಟ್ಟಿನಲ್ಲಿ ಆ ಭಾಷೆಯನ್ನು ಕಲಿತು ವ್ಯವಹರಿಸಬೇಕಾಗಿರುತ್ತದೆ. ಹೊಸ ಹೊಸ ಭಾವನೆಗಳು ಒಂದು ಮತ್ತೊಂದರಿಂದ ಅನೇಕ ವಿಷಯಗಳು ಸ್ವೀಕರಿಸಬೇಕಾಗುತ್ತವೆ. ಅವುಗಳ ಜೊತೆಯಲ್ಲಿಯೇ ಹೊಸ ಭಾಷೆಗಳು ಪ್ರವೇಶ ಪಡೆಯುತ್ತವೆ. ಯಾವುದೇ ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆಯ ಪ್ರಭಾವವಿರುತ್ತದೆ.

ಒಂದು ಭಾಷೆ ಮತ್ತೊಂದು ಭಾಷೆಯ ಪ್ರಭಾವಕ್ಕೆ ಒಳಗಾದಾಗ ತನ್ನದೇ ಆದಂತಹ ಭಾಷೆಗೆ ಸೀಮಿತವಾಗಿರುವುದಿಲ್ಲ. ಅದು ಒಂದು ಸಮುದಾಯಕ್ಕೆ ಬಹಳ ಹತ್ತಿರವಾದ ಭಾಷೆ ಹೆಚ್ಚು ಪ್ರಭಾವವನ್ನು ಬೀರುತ್ತದೆ. ಸಮುದಾಯದ ಸಮಾಜದ ವಿವಿಧ ಜಾತಿ ಮತ್ತು ವೃತ್ತಿ, ಧರ್ಮ ವಯೋಮಾನಗಳ ಆಧಾರದ ಮೇಲೆ ಭಾಷೆಯ ಮಿಶ್ರಣಗಳು ಸಹಜವಾಗಿ ನಡೆಯುತ್ತವೆ. ಸಮಾಜದಲ್ಲಿರುವಂತಹ ಯಾವುದೊಂದು ವರ್ಗಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಯಾವುದೊಂದು ಜಾತಿಗೆ ಸೀಮಿತವಾಗಿರುವುದಿಲ್ಲ. ಇದು ಸಮುದಾಯದ ಜನರ ಆಚಾರ, ವಿಚಾರ, ಜೀವನ ಶೈಲಿಯು ಆಧುನೀಕರಣ ನಗರೀಕರಣದ ಫಲವಂತಿಕೆಯ ಪರಿಣಾಮಕಾರಿಯಾಗಿ ಸಮುದಾಯದ ಭಾಷೆಯು ಬದಲಾವಣೆಗೊಳ್ಳುತ್ತದೆ.

ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆಯ ಪ್ರಭಾವ ಒಂದೇ ರೀತಿಯಾಗಿರುವುದಿಲ್ಲ. ಪದ, ವಾಕ್ಯರಚನೆ, ಅರ್ಥ, ವ್ಯಾಕರಣಾತ್ಮಕ ಅಂಶಗಳು ಯಾವ ರೀತಿಯಲ್ಲಾದರೂ ಮತ್ತೊಂದು ಭಾಷೆಯ ಪ್ರಭಾವಕ್ಕೆ ಒಳಗಾಗುತ್ತಾ ಹೋಗುತ್ತದೆ. ಅದಕ್ಕೆ ಅನುಗುಣವಾಗಿ ಭಾಷೆಯ ಪ್ರಭಾವವು ಬದಲಾವಣೆಯಾಗುತ್ತಿದ್ದು. ಸೋಲಿಗ ಸಮುದಾಯದ ಜನರ ಭಾಷೆಯಲ್ಲಿ ಸ್ಥಳೀಯರ ಭಾಷೆಯು ದಟ್ಟ ಪ್ರಭಾವ ಬೀರುತ್ತದೆ. ಯಾವುದೇ ಒಂದು ಉಪಭಾಷೆಯು ಮತ್ತೊಂದು ಪ್ರಭಾವಿ ಭಾಷೆಯ ಅಂಶಗಳನ್ನು ಅಥವಾ ಪದಗಳನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಉಪಭಾಷೆಯ ಮೇಲೆ ಅಲ್ಲಿನ ಬರಹದ ಭಾಷೆಯ ಮೇಲಿನ ಪ್ರಭಾವ ಸಹಜವಾಗಿರುತ್ತದೆ. ಇಂತಹ ಒಂದು ಸಂದರ್ಭದಲ್ಲಿ ಉಪಭಾಷೆಗಳನ್ನು ಬಳಸುವ ಸಮುದಾಯ ಬೇರೊಂದು ಭಾಷೆಯನ್ನು ಕಲಿತು ದಿನನಿತ್ಯ ಜೀವನದಲ್ಲಿ ವಿವಿಧ ವಲಯಗಳಲ್ಲಿ ವ್ಯವಹರಿಸಬೇಕಾಗಿರುವುದರಿಂದ ಸಾಮಾನ್ಯವಾಗಿ

ಹೆಚ್ಚು ಸ್ವೀಕರಣೆಯನ್ನು ಪಡೆಯುತ್ತದೆ. ಇಂತಹ ಒಂದು ಸಂದರ್ಭದಲ್ಲಿ ಬುಡಕಟ್ಟು ಸಮುದಾಯಗಳ ಭಾಷೆ ಸಾಮಾನ್ಯವಾಗಿ ಇಂತಹ ಪ್ರಭಾವಕ್ಕೆ ಒಳಗಾಗಿವೆ. ಉದಾಹರಣೆಗೆ ಸೋಲಿಗ ಸಮುದಾಯದಲ್ಲಿ ಮನೆಯ ವಸ್ತುಗಳನ್ನು ಬಳಕೆಗೆ ತರಲು ಹತ್ತಿರದ ಊರುಗಳಿಗೆ ಹೋಗುತ್ತಾರೆ. ಹಾಗೂ ಆ ವ್ಯಾಪಾರಸ್ಥರೇ ಸೋಲಿಗ ಪೋಡುಗಳಿಗೆ ಬಂದು ಪರಿಕರಗಳನ್ನು ಮಾರಾಟ ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಸೋಲಿಗರು ಬೇರೆ ಪದಗಳನ್ನು ಕಲಿತು ಅವರದೇ ಆದ ನುಡಿಯಲ್ಲಿ ಜರಾ ಈ ಪದವನ್ನು ಬಳಕೆ ಮಾಡುತ್ತಾರೆ. ಸೋಲಿಗರಲ್ಲಿ 'ಜರಾ ಬಂದಿಯದೆ' ಎನ್ನುವರು. ಬರಹ ರೂಪದಲ್ಲಿ ಜ್ವರ ಬಂದಿದೆ ಎಂದಾಗುತ್ತದೆ. ಹೊರ ಪ್ರಪಂಚದ ಮೂಲಕ ಜ್ವರ ಬಂದಿದೆ ಎಂದು ಮಾತನಾಡಲು ಕಲಿಯುತ್ತಾರೆ.

ಸಾಮಾನ್ಯವಾಗಿ ನುಡಿಬೆರಕೆಯಲ್ಲಿ ನೀಡುವ ಮತ್ತು ಪಡೆಯುವ ಭಾಷೆಗಳು ಪರಸ್ಪರ ಅಂತರಾಟಕ್ಕೆ ಒಳಗಾಗುತ್ತವೆ. ನುಡಿಬೆರಕೆ ಮತ್ತು ನುಡಿಪಲ್ಲಟಗಳು ಒಂದೇ ಎಂದು ಕಂಡರು ಇವರೆಡರ ಉದ್ದೇಶಗಳು ಬೇರೆ ಬೇರೆಯಾಗಿವೆ. ನುಡಿಬೆರಕೆ ಒಂದು ವಾಕ್ಯದಲ್ಲಿ ನಡೆಯುತ್ತದೆ. ನುಡಿ ಪಲ್ಲಟ ವಾಕ್ಯಗಳ ಮೇಲೆ ನಡೆಯುತ್ತದೆ. ನುಡಿಬೆರಕೆಯು ಒಂದು ಭಾಷೆಯನ್ನು ಬಳಸುವಂತಹ ಸಂದರ್ಭದಲ್ಲಿ ಬೇರೊಂದು ಭಾಷೆಯ ಪದಗಳನ್ನು ಸೇರಿಸಿ ಮಾತನಾಡುವುದನ್ನು ನುಡಿಬೆರಕೆ ಎಂದು ಕರೆಯುತ್ತೇವೆ.[೧]

ಇಂಗ್ಲೀಷಿನ ಕೋಡ್ ಮಿಕ್ಸಿಂಗ್ ನುಡಿಬೆರಕೆ ನುಡಿಮಿಶ್ರಣ ಕೋಡ್ ಸ್ವಿಚಿಂಗ್ ಎಂಬುದು ಭಾಷಾಶಾಸ್ತ್ರದಲ್ಲಿ ಬಳಕೆಯಲ್ಲಿದೆ. ಒಂದು ಭಾಷೆಯನ್ನು ಮಾತನಾಡುವಾಗ ಬರೆಯುವಾಗ ಇನ್ನೊಂದು ಭಾಷಾಂಶಗಳನ್ನು ಬೆರೆಸುವುದು ನುಡಿಬೆರೆಕೆ. ಇಡಿ ವಾಕ್ಯದ ನಿಯಮ ಒಂದು ಭಾಷೆಯಾದರೆ ವಾಕ್ಯಂಶಗಳು ಮಾತ್ರ ಬೇರೆ ಭಾಷೆಯಾದಾಗಿರುತ್ತದೆ. ಆದರೆ ನುಡಿಜಿಗಿತದಲ್ಲಿ ಸಾಮಾನ್ಯವಾಗಿ ಇಡಿ ವಾಕ್ಯದ ನಿಯಮ ಒಂದು ಭಾಷೆಯದಾಗಿದ್ದು, ವಾಕ್ಯಗಳು ಇನ್ನೊಂದು ಭಾಷೆಯಿಂದ ಸೇರುತ್ತವೆ.[೨] ಆ ಭಾಷೆಯನ್ನು ಆ ಭಾಷೆಯ ವ್ಯಾಕರಣಾತ್ಮಕ ಅಂಶಗಳಿಗೆ ಅನುಗುಣವಾಗಿ ರಚಿಸಲಾಗುತ್ತದೆ. ನುಡಿಮಿಶ್ರಣದಲ್ಲಿ ಭಾಷೆಯ ಹಿಡಿತದ ನಿರ್ಬಂಧವಿಲ್ಲ. ಒಬ್ಬ ವ್ಯಕ್ತಿಯು ದ್ವಿಭಾಷಿಕನಾಗಿದ್ದಲ್ಲಿ ಸಾಮಾನ್ಯವಾಗಿ ನುಡಿಜಿಗಿತದ ಪ್ರಕ್ರಿಯೆ ನಡೆಯುತ್ತದೆ.

ನುಡಿ ಪಲ್ಲಟವು ಮತ್ತು ನುಡಿ ಮಿಶ್ರಣಗಳು ಯಾವ ಕಾರಣದಿಂದ ನಡೆಯುತ್ತದೆ. ದ್ವಿಭಾಷಿಕರು ಯಾವ ಯಾವ ಉದ್ದೇಶಗಳನ್ನು ಪೂರೈಸಲು ನಡೆಯುತ್ತಿರುತ್ತದೆ ಎಂಬುದನ್ನು ಗಮನಿಸಿದಾಗ ಇಲ್ಲಿ ಭಾಷೆಯ ಆಯ್ಕೆಯು ಬಹಳ ಮುಖ್ಯವಾಗಿ ಕಂಡುಬರುತ್ತದೆ. ದ್ವಿಭಾಷಿಕತೆ ಸನ್ನಿವೇಶಗಳಲ್ಲಿ ಉಂಟಾಗುವಂತಹ ಭಾಷಾ ಮಿಶ್ರಣಗಳ ಪ್ರಕ್ರಿಯೆಗಳ ಹಿಂದೆ ಭಾಷಾ ಆಯ್ಕೆ ಮುಖ್ಯವಾಗಿ ಪ್ರಭಾವ ಬೀರುತ್ತದೆ. ದ್ವಿಭಾಷಿಕರು ಯಾವಾಗ ಎಷ್ಟು ಮತ್ತು ಹೇಗೆ ಆ ಭಾಷೆಯನ್ನು ಬಳಸುತ್ತಾರೆ ಎಂಬುದು ಬಹಳ ಗಮನಾರ್ಹವಾದ ಸಂಗತಿಯಾಗಿದೆ.

ಭಾಷಾ ಆಯ್ಕೆಯು ಪ್ರಾಮುಖ್ಯತೆಯಿಂದ ಉಂಟಾಗಬಹುದಾದ ಈ ಪ್ರಕ್ರಿಯೆಯಲ್ಲಿ ಸಮಾಜದ ಯಾವುದೇ ಒಂದು ವರ್ಗಕ್ಕೆ ಸೀಮಿತವಾಗಿರುವುದಿಲ್ಲ. ಸಮುದಾಯದ ಎಲ್ಲಾ ಜನರಲ್ಲಿಯೂ ನುಡಿಬೆರಕೆ ಪ್ರಕ್ರಿಯೆಯು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ಭಾಷಾ ಮಿಶ್ರಣ ಪ್ರಕ್ರಿಯೆಯು ಲಿಂಗ, ಶಿಕ್ಷಣ, ಆರ್ಥಿಕತೆ ಮತ್ತು ಪ್ರತಿಷ್ಠೆ, ಆತ್ಮೀಯತೆಗೆ ಅನುಗುಣವಾಗಿ ಬಳಸಿಕೊಳ್ಳಬಹುದಾಗಿದೆ. ಬಿಳಿಗಿರಿರಂಗನ ಬೆಟ್ಟದ ಸೋಲಿಗ ಸಮುದಾಯವು ಬಳಸುವಂತಹ ಕನ್ನಡವು ಶಿಷ್ಟ ಕನ್ನಡಕ್ಕಿಂತ ಭಿನ್ನತೆಯನ್ನು ಹೊಂದಿದ್ದು ಸಮುದಾಯದ ಸೋಲಿಗರು ತಮ್ಮ ಕೌಟುಂಬಿಕ ವಲಯದಲ್ಲಿ ಮಾತನಾಡುವಂತಹ ಸಂದರ್ಭದಲ್ಲಿ ಸೋಲಿಗ ಭಾಷೆಯನ್ನು ಬಳಸುತ್ತಾರೆ. ಸೋಲಿಗೇತರರೊಂದಿಗೆ ಅಥವಾ ನಾಡಿನ ಜನರೊಂದಿಗೆ ಸಂಪರ್ಕವನ್ನು ಹೊಂದುವಾಗ ಆ ಸಂದರ್ಭಕ್ಕೆ ಹೊಂದಿಕೊಂಡಂತೆ ಭಾಷಾ ಪ್ರಯೋಗವನ್ನು ಮಾಡುತ್ತಾರೆ. ಶಾಲಾ, ಕಾಲೇಜು, ವಿದ್ಯಾರ್ಥಿಗಳ ವಿದ್ಯಾಭ್ಯಾಸ ಸಂದರ್ಭದಲ್ಲಿ ಹೊರ ಸಮುದಾಯದ ಜೊತೆ ಮಾತನಾಡುವಾಗ ಇಲ್ಲಿನ ಕನ್ನಡವನ್ನು ಕಲಿತು ಬಳಸುವಂತಹ ಅನಿವಾರ್ಯತೆ ಇದೆ.

ಸಮುದಾಯದ ಭಾಷೆಯಿಂದ ಹೊರಬಂದು ಮತ್ತೊಂದು ಭಾಷೆಯನ್ನು ಕಲಿತು ವ್ಯವಹರಿಸುವ ಸಂದರ್ಭದಲ್ಲಿ ನುಡಿಬೆರಕೆಯು ಸಹಜವಾಗಿ ಉಂಟಾಗುತ್ತದೆ. ಈ ಅಧ್ಯಯನದಲ್ಲಿ ಸೋಲಿಗ ಬುಡಕಟ್ಟು ಸಮುದಾಯದ ನುಡಿ ಮಿಶ್ರಣ ಪ್ರಕ್ರಿಯೆಯನ್ನು ಚರ್ಚಿಸುವ ಅಗತ್ಯವಿದೆ. ಸಾಮಾನ್ಯವಾಗಿ ಇಲ್ಲಿನ ಸ್ಥಳೀಯ ಭಾಷಾ ಪ್ರಭಾವ ಈ ಸಮುದಾಯದ ಮೇಲೆ ಪ್ರಭಾವ ಬೀರಿರುವುದರಿಂದ ಆ ಸಮುದಾಯದ ಜನರಲ್ಲಿ ಸ್ಥಳೀಯ ಕನ್ನಡದ ದಟ್ಟ ಪ್ರಭಾವವನ್ನು ಕಾಣಬಹುದಾಗಿದೆ.

ಸೋಲಿಗ ಸಮುದಾಯದ ಜನರು ದ್ವಿಭಾಷಿಕತೆಯನ್ನು ಹೊಂದಿರುವವರೇ ಆಗಿದ್ದಾರೆ. ತಮ್ಮ ಸಮುದಾಯದ ಜನರೊಂದಿಗೆ ಮಾತನಾಡುವಂತಹ ಸಂದರ್ಭದಲ್ಲಿ ತಮ್ಮದೇ ಆದಂತಹ ಸೋಲಿಗ ಕನ್ನಡವನ್ನು ಬಳಸುವರು, ಬೇರೆ ಸಮುದಾಯದವರೊಂದಿಗೆ ಮಾತನಾಡುವಾಗ ಅಥವಾ ಮಾರುಕಟ್ಟೆ ಮತ್ತಿತರ ಸಂದರ್ಭಗಳಲ್ಲಿ ವ್ಯವಹರಿಸುವಾಗ ಇವರು ತಮ್ಮದೇ ಭಾಷೆಯನ್ನು ಮಿಶ್ರಣ ಮಾಡಿ ಮಾತನಾಡುವಂತಹ ಸಂದರ್ಭವು ಅನಿವಾರ್ಯವಾಗಿ ಕಂಡುಬರುತ್ತದೆ. ಇದು ಮಾತನಾಡುವವನ ಭಾಷಿಕ ಸಾಮಾರ್ಥ್ಯ ಅವನ ಮನೋಭಾವಕ್ಕೆ ಅನುಗುಣವಾಗಿರುತ್ತದೆ. ಇಲ್ಲಿ ಜನರ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನವನ್ನು ಆಧರಿಸಿ ಈ ಪ್ರಕ್ರಿಯೆಯು ನಡೆಯುತ್ತದೆ. ಇವರು ಕೌಟುಂಬಿಕ ವಲಯದಲ್ಲಿ ಸೋಲಿಗ ಭಾಷೆಯನ್ನು ಮಾತನಾಡುತ್ತಿದ್ದಾರೆ. ಹಾಗೆಯೇ ವ್ಯವಹಾರಿಕ ವಲಯಕ್ಕೆ ಬಂದಾಗ ಕನ್ನಡ ಭಾಷೆಯನ್ನಾಡುವ ಜನರ ಜೊತೆಯಲ್ಲಿ ಕನ್ನಡ ಬಳಸಿ ಮಾತನಾಡುವಂತಹ ಸಂದರ್ಭವು ಕಂಡುಬರುತ್ತದೆ. ಈ ಸಂದರ್ಭದಲ್ಲಿ ನುಡಿಬೆರಕೆ ಮತ್ತು ನುಡಿ ಪಲ್ಲಟಗಳು ಕಾಣುತ್ತವೆ. ಬರಹ ಕನ್ನಡದಲ್ಲಿ ಬಳಸುವಂತಹ ಸಂದರ್ಭದಲ್ಲಿ ಉಚ್ಚಾರಣೆ

ಮತ್ತು ಪದಪ್ರಯೋಗ ವ್ಯಾಕರಣಾತ್ಮಕ ಅಂಶಗಳಲ್ಲಿ ಸಾಮಾನ್ಯವಾಗಿ ಸೋಲಿಗ ಕನ್ನಡದ ಪ್ರಭಾವ ಉಂಟಾಗುತ್ತದೆ. ಸೋಲಿಗ ಕನ್ನಡದ ಮೇಲೆ ಶಿಷ್ಟ ಕನ್ನಡದ ಪ್ರಭಾವವನ್ನು ಕಾಣುತ್ತೇವೆ.

ಸೋಲಿಗ ಸಮುದಾಯವು ದಟ್ಟವಾದ ಅರಣ್ಯದಲ್ಲಿ ವಾಸವಾಗಿದ್ದು ಅನ್ಯಭಾಷಿಕ ಸಮುದಾಯಗಳೊಂದಿಗೆ ಸಂಪರ್ಕದಿಂದ ದೂರವಿದ್ದರೂ ಸಹ ಇತ್ತೀಚಿನ ದಿನಗಳಲ್ಲಿ ಇತರ ಸಮುದಾಯದವರೊಂದಿಗೆ ಒಡನಾಟ ಬೆಳೆಯುತ್ತಿದ್ದು ಕನ್ನಡದ ದಟ್ಟ ಪ್ರಭಾವವನ್ನು ಸೋಲಿಗ ಸಮುದಾಯದ ಜನರ ಭಾಷೆಯಲ್ಲಿ ಕಾಣಬಹುದಾಗಿದೆ. ಸುಮಾರು ಹಳೆಯ ತಲೆಮಾರಿನ ಸೋಲಿಗ ಸಮುದಾಯದ ಹಿರಿಕರಲ್ಲಿ ನುಡಿಬೆರೆಕೆ ಕಡಿಮೆ ಇದೆ. ಏಕೆಂದರೆ ಹಳೆಯ ತಲೆಮಾರಿನವರ ವಯಸ್ಕ ಗಂಡು ಮತ್ತು ಹೆಣ್ಣುಗಳಲ್ಲಿ ಇತರ ಸಮುದಾಯದವರೊಂದಿಗೆ ಸಂಪರ್ಕಗಳು ಕಡಿಮೆ ಇರುವುದರಿಂದ ಈ ಪ್ರಕ್ರಿಯೆಯ ಪ್ರಮಾಣ ಕಡಿಮೆಯಾಗಿರುವುದು ಕಂಡುಬರುತ್ತದೆ. ಎರಡನೆಯ ತಲೆಮಾರಿನ ಅನಕ್ಷರಸ್ಥ ಪುರುಷ ಅನಕ್ಷರಸ್ಥ ಮಹಿಳೆಯರಲ್ಲಿ ಬದಲಾವಣೆ ಕಂಡುಬಂದರೂ ಅಕ್ಷರಸ್ಥ ಪುರುಷ ಮತ್ತು ಅಕ್ಷರಸ್ಥ ಮಹಿಳೆಯರಲ್ಲಿ ಕನ್ನಡದ ಪ್ರಭಾವ ಅತೀ ಹೆಚ್ಚು ಕಾಣಬಹುದಾಗಿದೆ. ಇನ್ನೂ ಮೂರನೆಯ ತಲೆಮಾರಿನವರಲ್ಲಿ ನುಡಿಮಿಶ್ರಣ ಮತ್ತು ನುಡಿಜಿಗಿತ ಪ್ರಕ್ರಿಯೆಯನ್ನು ನೋಡಬಹುದಾಗಿದೆ. ವ್ಯವಹಾರಿಕ ಭಾಷೆಯಾಗಿ ಸ್ಥಳೀಯ ಕನ್ನಡ ಬಳಕೆಯಲ್ಲಿರುವುದು ಕಂಡುಬರುತ್ತದೆ. ಸಮುದಾಯದ ಜನರು ಸಾಮೂಹಿಕ ಸಮಾರಂಭಗಳು, ಆಚರಣೆಗಳು ಇತ್ಯಾದಿ ಕಡೆಗಳಲ್ಲಿ ಭಾಷಿಕರೊಂದಿಗೆ ಗುಂಪುಗೂಡಿ ಸಂಭಾಷಿಸುವ ಸಂದರ್ಭದಲ್ಲಿ ಹಾಗೂ ತಮ್ಮನ್ನು ಇತರರೊಡನೆ ಗುರುತಿಸಿಕೊಳ್ಳುವಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನುಡಿ ಬೆರಕೆ ಮತ್ತು ನುಡಿ ಪಲ್ಲಟಕ್ಕೆ ಅವಕಾಶವಾಗಿರುವಂತಹ ಸಂದರ್ಭವನ್ನು ಕಾಣಬಹುದಾಗಿದೆ.

ಸಮುದಾಯದಲ್ಲಿ ಕೆಲವರು ಅಕ್ಷರಸ್ಥ ವರ್ಗ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವ ಕೆಲವು ಸೋಲಿಗ ಸಮುದಾಯದವರಲ್ಲಿ ಇಂಗ್ಲೀಷಿನ ವ್ಯಾಮೋಹ ಎಷ್ಟು ಎಂದರೆ ಆ ಭಾಷೆಯನ್ನು ಮಾತನಾಡಲು ಬರದಿದ್ದರೂ ಸಹ ಮಾತಿನ ನಡುವೆ ಕೆಲವು ಪದಗಳನ್ನಾದರೂ ಬಳಸುತ್ತಿರುವುದು ಕಂಡುಬರುತ್ತದೆ.

**ಸೋಲಿಗ ಭಾಷೆ ಮೇಲೆ ಇಂಗ್ಲೀಷ್ ಭಾಷೆಯ ಪ್ರಭಾವ**

- ಇಂದೆ ಇತ್ತು ಸಾ **ಪ್ಲಂಟೇಸನ್ನರು** ಸಿಕ್ಕಾ ಪಟ್ಟೆ ಕೆಲ್ಸ ಕೊಡ್ತಿದ್ರು ಸಾ

  ಸೋಲಿಗರ ಮಾತಿನಲ್ಲಿ ಇಂಗ್ಲೀಶ್‌ನ ಪದವಾದಂತಹ ಪ್ಲಾಂಟೇಷನ್ ಈ ಪದವು ಪ್ಲಾಂಟ್ನ ಮಾಲಿಕರನ್ನು ಪ್ಲಾಂಟೆಸನ್ನರು ಎಂಬುದಾಗಿ ಬಳಸುತ್ತಿರುವುದನ್ನು ಗಮನಿಸಬಹುದಾಗಿದೆ. ಇಲ್ಲಿ ವಾಕ್ಯಗಳ ಮಧ್ಯೆ ಇಂಗ್ಲೀಶ್ ಭಾಷೆಯ ಪ್ರಭಾವ ಆಗುತ್ತಿರುವುದನ್ನು ನೋಡಬಹುದಾಗಿದೆ.

ಈ ಒಂದು ಕಾರ್ಯವು ಎರಡು ಮತ್ತು ಮೂರನೆಯ ತಲೆಮಾರಿನ ವಿದ್ಯಾವಂತ ಮತ್ತು ಅವಿದ್ಯಾವಂತರಲ್ಲೂ ಸಹ ಕಂಡುಬರುತ್ತದೆ.

- **ಪಿಲಮ್** ಬಾಲ ಸಂದಾಕಿತ್ತು

  ಪಿಲಮ್ ಈ ಪದವು ಕನ್ನಡದ ನುಡಿಯಲ್ಲಿ ಸಿನಿಮಾ ಎಂಬ ಪದದ ಬದಲಾಗಿ ಇಂಗ್ಲೀಶ್ ಭಾಷೆಯ ಫಿಲಂ>ಪಿಲಮ್ ಎಂಬುದಾಗಿ ಬಳಸುವುದನ್ನು ಗಮನಿಸಬಹುದಾಗಿದೆ.

- **ಪಾರೆಸ್ನಲ್ಲಿ ಲಾಂಟೆನಾ** ಬಂದು ಎಲ್ಲಾ ಆಳ್ಮಾಡ್ತಿದೆ ಸಾ.

  ಸೋಲಿಗ ಸಮುದಾಯದವರ ನುಡಿಯಲ್ಲಿ ಪಾರೆಸ್ಟ್ ಮತ್ತು ಲಾಂಟೆನಾ ಎನ್ನುವ ಇಂಗ್ಲೀಶ್‌ನ ಪದವು ಅವರು ಬಳಕೆ ಮಾಡುವಂತಹ ಕನ್ನಡ ನುಡಿಯ ಕಾಡ್ಗ ಎನ್ನುವಂತಹ ಪದವು ಪಾರೆಸ್ಟ್ ಎಂಬುದಾಗಿ ಸಂಬೋಧನೆ ಮಾಡುತ್ತಾರೆ. ಸೋಲಿಗರ ಇಂಗ್ಲೀಶಿನ ಪ್ರಭಾವ ಹೆಚ್ಚು ಹೊಸ ತಲೆಮಾರಿನ ಅಕ್ಷರಸ್ಥ ಮತ್ತು ಅನಕ್ಷರಸ್ಥರಲ್ಲೂ ಕಂಡುಬರುತ್ತದೆ.

- **ಅರ್ಜೆಂಟಿ**ಗೆ ಮಾಡಲ್ಲ ಸಾ ನಾವ್ ನಮ್ ಮಗಾನ **ಜೇಬ್** ಗೆ ಕಳ್ಸಬೇಕ್ಸಾ ಇನ್ನ ಒದ್ಸಬೇಕ್ಸಾ ಇಗ್ಲೇ ಮದ್ವೆ ಮಾಡಲ್ಲಾ ಸಾ.

  ಸಮುದಾಯದ ಎರಡನೇ ತಲೆಮಾರಿನವರ ಮಾತಿನಲ್ಲಿ ಅರ್ಜೆಂಟಾಗಿ ಎನ್ನುವಂತಹ ಶಬ್ದವು ಅರ್ಜೆಂಟಿಗೆ ಎಂದು ಸಂಬೋಧನೆ ಮಾಡುತ್ತಾರೆ. ಹಾಗೆಯೇ ಜಾಬ್ ಎನ್ನುವಂತಹ ಪದವು ಇಂಗ್ಲೀಶಿನ ಪದವಾಗಿದ್ದು ಜೆಬ್ ಎಂದು ಸಂಬೋಧಿಸುತ್ತಾರೆ.

- ನಮ್ತವಾ **ಅಮೌಟ್** ಇಲ್ಸಾ **ಪೊಟು,** ವಿಡಿಯಾ ತೆಗ್ಸಾಕು, ಸುಮ್ನೆ ಹುಡಗರು **ಮೊಬೊಲ್** ನಲ್ಲಿ ತೆಕ್ಕೊತ್ತಾರೆ.

  ಸೋಲಿಗರ ಕನ್ನಡ ನುಡಿಯಲ್ಲಿ ಇಂಗ್ಲೀಶ್‌ನ ಅಮೌಂಟ್, ಪೋಟೋ, ವಿಡಿಯೋ ಈ ಪದಗಳು ಅಮೌಟ್, ಪೊಟು ವಿಡಿಯಾ ತೆಗ್ಸಾಕು ಎಂದು ಅರ್ಥವ್ಯತ್ಯಯವಾಗುತ್ತದೆ. ಇಲ್ಲಿ ಎರಡು ಮತ್ತು ಮೂರನೇ ತಲೆಮಾರಿನ ಅಕ್ಷರಸ್ಥ ಮತ್ತು ಅನಕ್ಷರಸ್ಥರಲ್ಲಿ ಕಂಡುಬರುತ್ತದೆ.

- **ಸೊಸೇಟಲಿ** ೧೫೦ ಕ್ಕೆ **ಕೆ.ಜಿಗ** ತೆಕ್ಕೊತ್ತಾರೆ ಇಲ್ಲಿ ಎಲ್ಲಾ **ವರ್ಜ್ನಿಲ್** ಇರ್ತೆ ಕೆಂದ್ರದಲ್ಲಿ **ಮಿಕ್ಸ್** ಮಾಡ್ತಾರೆ.

  ಸಮುದಾಯದಲ್ಲಿ ಮಾತನಾಡುವಂತಹ ಸಂದರ್ಭದಲ್ಲಿ ಸೊಸೈಟಿ, ವರ್ಜಿನಲ್, ಮಿಕ್ಸ್ ಎನ್ನುವಂತಹ ಇಂಗ್ಲೀಶ್‌ನ ಪದವಾಗಿದ್ದು ಎರಡನೇ ತಲೆಮಾರು ಮತ್ತು ಮೂರನೇ ತಲೆಮಾರಿನವರ ನುಡಿಯಲ್ಲಿ ಬೆರಕೆ ಕಂಡುಬರುತ್ತದೆ.

- **ತಿಂಗ್ಳೊಂದಸಾತಿ ರೇಸನ್** ಕೊಡ್ತಾರೆ

  ರೇಷನ್ ಎನ್ನುವುದು ಇಂಗ್ಲೀಶ್ ಪದ ಸೋಲಿಗರ ಎರಡನೆಯ ತಲೆಮಾರು ಮತ್ತು

ಮೂರನೆಯ ತಲೆಮಾರಿನಲ್ಲಿ ಈ ರೀತಿ ಮಾತಿನ ಮಧ್ಯ ಇಂಗ್ಲೀಶ್ ಪದ ಬಳಕೆಯನ್ನು ಮಾಡಿ ಮಾತನಾಡುತ್ತಾರೆ

- ಅಯ್ಯನೆ **ಕ್ಲಾಸು** ಮುಗಿತು ಸಾ ಮುಂದೊಗ್ಲಿಲ್ಲ ಇಲ್ಲೆ **ಇಚ್ಚೂಲ್ನಲ್ಲಿ** ಅಡ್ಗೆ ಮಾಡ್ಕೊಂಡು ಇದ್ದೀನಿ ಸಾ
- ಧರ್ಮಸ್ಥಳಕ್ಕೆ ನಮ್ಮ **ಅಪಿಸಿಂದ ಬಸ** ಕಳ್ಸತಾರೆ ಎಲ್ಲಾ ರೆಡಿ ಮಾಡ್ಕೊಂಡು ಒಗಿ **ಲಾಡ್ಜ್ನಲ್ಲಿ ನೇಟೆಲ್ಲಾ** ಮಲ್ಗಿದ್ದು ಬೆಳಗಾನ ನದಿಗೊಗಿ ಸಾನ ಮಾಡ್ಕೊಂಡು ಪೂಜೆಗಿಜೆ ಮಾಡ್ಸಿಕೊಂಡು ಬಂಧ್ಬಿಡತ್ತವೆ.
- **ಇನಿಟ್ಟೈಂ ನೇಟ್** ನಮ್ಮ ಬಿಂಕಿ ಬೇಕ್ಸಾ.
- **ಜಿನ್ಸ ಪ್ಯಾಂಟು ಸರ್ಟು** ತೆಕ್ಕೊತಾರೆ **ಪ್ರಂಡ್ಸ**ಗಳೆಲ್ಲಾ ಸೆರಿ **ಚಿಟಿ**ನಲ್ಲಿ
- ಇ ಅಬ್ಬದಲ್ಲಿ ನಾವ್ ಮರಿ**ಕಟ್** ಮಾಡಿತ್ತಿವಿ ಇಲ್ಲಾಂದ್ರೆ **ಟೌನ್**ಗೊಗಿ **ಚಿಕನ್** ತರ್ತೀವಿ
- ಇವಾಗ **ಬಿಪಿಲ್ ಕುಪನ್**ಗೆ ಅಕ್ಕಿ ಕಮ್ಮಿಸಿಕ್ತದೆ
- ನಮ್ಮ ಪೋಡ್ನಲ್ಲಿ ಎಸೆಲ್ಸಿ ತಕ್ಕ ಒದಿರೊರು **ಪಾರೆಸ್ಟ**ನಲ್ಲಿ **ಗಾರ್ಡ** ಆಗ **ವಾಚರ್** ಆಗ ಕೆಲ್ಸಕೊತಾರೆ.
- ಟೇಮ್ ಎಸ್ಟು ಬಸ್ ಬಂತಾ ಯಳಂದೂರಕ ಮಾರ್ಕೆಟ್‌ಗೆ ಅಜೆಂಟಾಗೊಗಬೇಕು.
- ಲೆ ನರ್ಸು ಬಂದವ್ರೆ ಇಂಜಕ್ಷನ್ನ ಜರಕ್ಕೆ ತೆಕ್ಕೊ
- ಎಟ್ರಿ ಸಿದ್ದಪ್ಪನರು ಮೇಟಿಂಗ್ ಬಂದು ನನ್ನ ತಬ್ಕಂಡ್ರು
- ಎಸಿಎಪ್ ಸಾಎಬ್ರ ಡಿಸಿಎಪ್ ಸಾಎಬ್ರು ಪೋಟು ಎಸರು ಮಾಡಿ ಐಡೆಟಿಕಾರ್ಡ ಕೊಟ್ಟು ಕಾಡಿಗೆ ಒಗೊಕೆ ಪರಿಮಿಸನ್ ಸಿಗ್ತದೆ.
- ಟೆಗರ್ ಪರ್ಜೆಟ್ ಇರೊದ್ರಿಂದ ನಾವು ಪಾರೆಸ್ಟ್‌ನಲ್ಲಿ ಏನು ತರೊದಿಕಾಗಲ್ಲ.
- ಡಿಸಿಎಪ್ ಲೆಡಿಸ್ ಬಂದಾರೆ ತುಂಬಾ ಸಿಟ್ಟು
- ನನ್ನೆದೊನೊ ಕಪ್ಲೆಟ್ ಒತ್ತದೆ
- ಅಪ್ರಿಲ್ಲ ಅಂದ್ರ ಕೆನ್ಸಲ್
- ಡೆರಟ್ರು ಸೊಸೆಟಿಗೆ ಒಬ್ಬರೆ ಇನ್ನೆಲ್ಲಾ ಮೆಂಬ್ರು
- ಸೊಲಗ್ರ ಅಂತ ಬರಸ್ಕೊಂಡ್ರು ಎಲ್ಲಾ **ಲೊನ** ಒಡಿತಾರೆ ಅವರ್ಗಿಲ್ಲಾ **ಪೆಸಿಟಿಲಿಯಾ** ತೆಕ್ಕೊತಾರೆ
- ೧೯೬೩ ರಲ್ಲಿ ಪಾರಸ್ ಮಿನಿಸ್ಟ್ರ ನಮ್ಗೆಲ್ಲಾ ಕಾಲನಿ ಕಟ್ಟಕೊಟ್ಟರು
- **ಆಲ್ಬುಕ್** ಇತ್ತು ಅದ್ನ ತರ್ನ ನೊಡಾಕು
- ನಮ್ಮಿಚ್ಚೂಲ್ಗೆ ಕಮ್ಟಿ ಮೆಂಬ್ರು ಮಾಡ್ವರೆ ಬೇಗ ಮೇಟಿಂಗ್ ಒಗ್ಬೇಕು ಮೇಡಮೊರು ಬರ್ಲಿಕೆಳೊರೆ
- ಜಡೇಯ ನಿ ಸ್ಯಕಲ್ ತೆಕ್ಕೊಂಡು ಬಸ್ ಸ್ಟಾಪ್ಗೆ ಒಗ್ಬೇಕು ಬಾನ

- ಸರ್ ಡ್ರೆಸ್ ಆಕೊಂಡ ಬನ್ನಿ ಸ್ವಲ್ಪ ಸಿಟಿಗೆ ಒಗನ
- ರಾಮು ಪಿಸ್ ಬಾಲೆಲಿ
- ಸಾ ಇವಕೆಲ್ಲಾ ರಿಜಿಸ್ಟರ್ ಮೇರೆಜ್ ಅಂತ ಇತಲ್ಲಾ ಒಡೋಗಿ ಮಾಡಕೊತ್ತಾರೆ ಸಾ ಇವ್ರಗೆಲ್ಲ
- ಬಸ್ ಗೆ ಕಂಡ್ರಕಟರ್ ಬನ್ನಿಲ್ಲ ತುಮಾ ಲೇಟಾತು
- ನಮ್ಮ ಕಲಾತಂಡ ಬೆಂಗ್ಳೂರಿಗೆ ಒಗಿ ರೆಕಾರ್ಡಗೆ ಮಾಡ್ಟೆಕು ಒಂಟವಿ ಸಾ ರೆಕಾಡ್ರಿಂಗ್ ಮುಕಸ್ಕೊಂಡು ಮಂಡೆ ಬಂದ್ಬಿಡ್ತಿವಿ ಸಾ

ಸೋಲಿಗ ಭಾಷೆಯ ಮೇಲೆ ಇಂಗ್ಲೀಶ್ ಭಾಷಾ ಬಳಕೆಯು ಇತ್ತೀಚಿನ ತಲೆಮಾರಿನವರಲ್ಲಿ ಕಂಡುಬರುತ್ತದೆ. ಆಧುನಿಕತೆಯ ಪ್ರಭಾವದಿಂದ ಇಂಗ್ಲೀಶ್ ಭಾಷೆಯು ವ್ಯವಹಾರಿಕ ಭಾಷೆಯಾಗಿ ಬಳಕೆಯಾಗುತ್ತಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಹಳೆಯ ತಲೆಮಾರಿನವರನ್ನು ಬಿಟ್ಟು ಎರಡನೆ ಮತ್ತು ಮೂರನೆಯ ತಲೆಮಾರಿನವರಲ್ಲಿ ಕೆಲವೊಂದು ಮಾತಿನ ಮಧ್ಯದಲ್ಲಿ ಬಳಕೆ ಮಾಡುವುದನ್ನು ಕ್ಷೇತ್ರಕಾರ್ಯ ಮಾಡುವಂತಹ ಸಂದರ್ಭದಲ್ಲಿ ಕಂಡುಬಂದಿದೆ. ಸೋಲಿಗ ಪರಿಸರದಲ್ಲಿ ಮೇಲ್ವರ್ಗ ಮತ್ತು ವಿದ್ಯಾವಂತರು ಮತ್ತು ಪ್ರವಾಸಿಗರು ಹೆಚ್ಚಾಗಿ ಬರುವುದರಿಂದ ಇಂಗ್ಲೀಶ್, ತಮಿಳು ತೆಲಗು ಮತ್ತು ಉರ್ದು ಭಾಷಿಕರು ವ್ಯಾಪಾರ ಮತ್ತು ಪ್ರವಾಸ ತಾಣಗಳಿಗೆ ಭೇಟಿ ನೀಡುವುದರಿಂದ ಅವರು ಮಾತನಾಡುವುದನ್ನು ಗಮನಿಸಿ ಮತ್ತು ಅವರೊಡನೆ ಸಂಪರ್ಕವನ್ನು ಮಾಡಿಕೊಂಡಿರುವುದರಿಂದ ಇದರ ಪ್ರಭಾವವು ಹೆಚ್ಚಾಗಿದೆ ಎಂದು ಹೇಳಬಹುದಾಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಸೋಲಿಗ ಕನ್ನಡವು ಅನ್ಯ ಭಾಷೆಯೊಂದಿಗೆ ಬೆರಕೆ ಯಾಗುವುದನ್ನು ಗಮನಿಸಲಾಗಿದೆ. ಕೆಲವು ವಿದ್ವಾಂಸರು ಕನ್ನಡ ಸದಾ ಹರಿಯುತ್ತಿರುವ ನೀರು ಮತ್ತು ಯಾವ ಭಾಷೆ ಹೆಚ್ಚು ಬದಲಾವಣೆಗೊಳ್ಳುತ್ತಾ ಸಾಗುತ್ತದೆಯೋ ಅಂತಹ ಭಾಷೆ ಚಲನಶೀಲವಾಗಿರುತ್ತದೆ. ಹೊಸ ಹೊಸ ಪದಗಳನ್ನು ಸ್ವೀಕರಿಸಿಕೊಳ್ಳುವ ಮೂಲಕ ಭಾಷೆಯು ತನ್ನ ಅಂದವನ್ನು ಹೆಚ್ಚಿಸಿಕೊಳ್ಳುತ್ತದೆ ಎಂದಿದ್ದಾರೆ. ಈ ಹಿನ್ನಲೆಯಲ್ಲಿ ಕನ್ನಡ ಭಾಷೆಯು ತನ್ನ ಸ್ವರೂಪವನ್ನು ಕಾಲದಿಂದ ಕಾಲಕ್ಕೆ ಬದಲಾಯಿಸಿಕೊಂಡಿರುವುದನ್ನು ಚಾರಿತ್ರಿಕವಾಗಿ ಗಮನಿಸಬಹುದಾಗಿದೆ. ಹೀಗೆ ಸೋಲಿಗರಲ್ಲಿಯೂ ಸಹ ಕನ್ನಡದೊಂದಿಗೆ ಅವರ ಮಾತಿನ ಜೊತೆ ಇಂಗ್ಲೀಶ್ ಪದ ಬಳಕೆಯನ್ನು ಪ್ರಸ್ತುತ ಸಂದರ್ಭದಲ್ಲಿ ಮಾತನಾಡುತ್ತಿರುವುದನ್ನು ನುಡಿಬೆರಕೆಯಾಗುತ್ತಿರುವುದನ್ನು ಇಲ್ಲಿ ವಿವರಿಸಲಾಗಿದೆ.

**ನುಡಿಬೆರಕೆ ಎಲ್ಲಿ ಕಂಡುಬರುತ್ತದೆ**

ಸೋಲಿಗರ ಸಮುದಾಯದಲ್ಲಿ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಬಿಳಿಗಿರಂಗನ ಬೆಟ್ಟದ ಸುತ್ತಮುತ್ತಲ್ಲಿರುವ ಒಟ್ಟು ಜನಸಂಖ್ಯೆಯ ಪ್ರಮುಖ ಭಾಗವಾಗಿರುವುದರಿಂದ ಈ ಪರಿಸರದ ಎಲ್ಲಾ ಜನರಿಗೂ ಸೋಲಿಗರೆಂದು ಪರಿಚಿತರಾಗಿದ್ದಾರೆ. ಇವರ ಭಾಷೆ ಬೇರೆ

ಸಮುದಾಯದವರಿಗೆ ತಿಳಿದಿದೆ. ಆದರೆ ಮಾತನಾಡುವುದು ಕಷ್ಟಕರವಾಗಿದೆ. ಸೋಲಿಗರು ಸಾಮಾಜಿಕ ಪರಿಸರದಲ್ಲಿರುವ ಗ್ರಾಮಗಳಲ್ಲಿ ಸ್ಥಳೀಯರೊಂದಿಗೆ ಸೋಲಿಗರು ಸಹಬಾಳ್ವೆ ನಡೆಸುವರು. ಇದರಿಂದಾಗಿ ಕೃಷಿ ಸಂಬಂಧಿ ಕೆಲಸಗಳಲ್ಲಿ ಭಾಗಿಯಾಗಿರುವುದು. ಇಂತಹ ಸಂದರ್ಭ ಹಾಗೂ ಬಿಳಿಗಿರಿರಂಗನ ಬೆಟ್ಟದ ಜಾತ್ರೆ ವಿಶೇಷ ಸಮಾರಂಭಗಳಲ್ಲಿ ಚಾಮರಾಜನಗರ, ಯಳಂದೂರು, ಇತ್ಯಾದಿ ಸುತ್ತಮುತ್ತಲಿನ ಊರಿನ ಜನರು ಸೋಲಿಗ ಪೋಡುಗಳಿಗೆ ಹೋಗಿ ದಿನನಿತ್ಯದ ಸರಕು ಸಾಮಗ್ರಿಗಳನ್ನು ಅವರಿಗೆ ಮಾರಾಟ ಮಾಡುತ್ತಾರೆ. ಈ ಸಂದರ್ಭದಲ್ಲಿ ಕೂಡ ಎಲ್ಲರೂ ಜೊತೆಗೂಡಿದಾಗ ನುಡಿಬೆರಕೆಗಳು ಉಂಟಾಗುತ್ತದೆ. ಸುತ್ತಮುತ್ತ ಪರಿಸರದಲ್ಲಿ ಶೈಕ್ಷಣಿಕವಾಗಿ ಮುಂದುವರೆದಿರುವುದರಿಂದ ಅವರ ಪ್ರಭಾವವು ಕೂಡ ಸೋಲಿಗ ಭಾಷೆಯ ಮೇಲೆ ಪ್ರಭಾವ ಬೀರಿರುವುದು ಕಂಡುಬರುತ್ತದೆ.

## ಕೊನೆಟಿಪ್ಪಣಿಗಳು

೧. ಎಸ್.ಎನ್. ಶ್ರೀಧರ್, ೨೦೦೯, ಇಂದಿನ ಕನ್ನಡ:ರಚನೆ ಮತ್ತು ಬಳಕೆ.ಪುಟ ಸಂಖ್ಯೆ ೪

೨ ಡಾ. ಸಿ.ಪಿ.ಲಾವಣ್ಯ, ೨೦೧೫, ಗೌಡ ಕನ್ನಡ ಭಾಷಿಕ ನೆಲೆಗಳು ಪುಟ ಸಂಖ್ಯೆ ೧೯೨

# ಅಧ್ಯಾಯ-ಆರು

# ಸಮಾರೋಪ

ಸೋಲಿಗ ಭಾಷೆಯು ಕನ್ನಡದ ಒಂದು ಸಾಮಾಜಿಕ ಉಪಭಾಷೆಯಾಗಿದೆ. ಈ ಸಮುದಾಯವು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಜಾನಪದೀಯವಾಗಿ ಮತ್ತು ಪ್ರಾದೇಶಿಕವಾಗಿಯೂ ತನ್ನದೇ ಆದಂತಹ ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ. ಪ್ರಸ್ತುತ ಅಧ್ಯಯನ ಚಾಮರಾಜ ನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟದ ಸೋಲಿಗ ಸಮುದಾಯವನ್ನು ಅನುಲಕ್ಷಿಸಿ ಇವರ ಜೀವನ ಆಚರಣೆ, ಭಾಷೆ , ಸಂಪ್ರದಾಯ ಇವುಗಳ ಕುರಿತದ್ದಾಗಿದೆ. ಒಂಬತ್ತು ಪೋಡುಗಳಲ್ಲಿರುವ ಸೋಲಿಗ ಸಮುದಾಯವು ತಮ್ಮದೇ ಆದಂತಹ ಕಟ್ಟುಪಾಡು ಆಚಾರ-ವಿಚಾರ, ಸಂಸ್ಕೃತಿಗಳಿಂದ ಕೂಡಿದವರಾಗಿದ್ದರೆ. ಇವರು ಬಳಸುವ ಭಾಷೆಯು ಶಿಷ್ಟಕನ್ನಡಕ್ಕಿಂತ ಭಿನ್ನವಾಗಿದೆ. ಕನ್ನಡದ ಸಾಮಾಜಿಕ ಉಪಭಾಷೆಯಾಗಿದ್ದು ಇದು ತನ್ನದೇ ಆದ ವಿಶಿಷ್ಟತೆಯನ್ನು ಈಗಲೂ ಕಾಪಾಡಿಕೊಂಡಿದೆ.

ಪ್ರಸ್ತತ ಅಧ್ಯಯನಕ್ಕಾಗಿ ಈ ಸಮುದಾಯ ಬಳಸುವ ಭಾಷೆಯನ್ನು ಸಮಾಜೋಭಾಷಿಕ ಹಿನ್ನಲೆಯಲ್ಲಿ ಅಧ್ಯಯನವನ್ನು ಮಾಡಲಾಗಿದೆ. ಸೋಲಿಗರ ಸಾಂಸ್ಕೃತಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು. ಇಲ್ಲಿ ವಿವರಿಸಿದೆ. ಸೋಲಿಗ ಸಮುದಾಯ ವಾಸವಿರುವಂತಹ ಬಿಳಿಗಿರಿ ರಂಗನ ಬೆಟ್ಟದ ತಪ್ಪಲಿನಲ್ಲಿರುವಂತಹ ೧೩ ಪೋಡುಗಳಿಗೆ ಭೇಟಿ ನೀಡಿ, ಮಾಹಿತಿಯನ್ನು ಸಂಗ್ರಹಿಸಿ. ಭಾಷಿಕ ದತ್ತಾಂಶವನ್ನು ಸಮಾಜೋಭಾಷಿಕ ಹಿನ್ನಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸೋಲಿಗ ಬುಡಕಟ್ಟು ಸಮುದಾಯದಲ್ಲಿ ಸಾಮಾಜಿಕ ವ್ಯತ್ಯಾಸಗಳಿಗೆ ಅನುಗುಣವಾಗಿ ಭಾಷಾ ಬಳಕೆಯು ಹೇಗೆ ವ್ಯತ್ಯಾಸವಾಗಿರುತ್ತದೆ ಎಂಬುದರ ಕಡೆ ಗಮನಹರಿಸಲಾಗಿದೆ.

ಸೋಲಿಗರು ಕೌಟುಂಬಿಕವಾಗಿ ಮತ್ತು ವ್ಯವಹಾರಿಕವಾಗಿ ಭಾಷಾಬಳಕೆಯಲ್ಲಿ ಉಂಟಾಗುವಂತಹ ಬದಲಾವಣೆಗಳು ಹಾಗೂ ಸೋಲಿಗರು ಭಾಷೆಯನ್ನು ಬಳಸುವಾಗ ಉಂಟಾಗುವಂತಹ ನುಡಿಬೆರಕೆ ಮತ್ತು ನುಡಿಜಿಗಿತವು ಹೇಗಿರುತ್ತದೆ ಅದರ ವ್ಯತ್ಯಾಸಗಳೇನು ಎಂಬುದನ್ನು ಹಾಗೆಯೇ ಅವರು ಬಳಸುವಂತಹ ಭಾಷಿಕ ಪರಿಸರದಲ್ಲಿ ಧಾರ್ಮಿಕ ಪರಿಸರದಲ್ಲಿ ಹೇಗೆ ಬಳಕೆ ಮಾಡುತ್ತಾರೆ ಎಂಬುದುನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗಿದೆ. ಸೋಲಿಗ ಭಾಷೆಯ ಸಮಾಜೋಭಾಷಿಕ ಅಧ್ಯಯನದ ಪ್ರಮುಖ ಫಲಿತಗಳನ್ನು ಈ ಕೆಳಕಂಡಂತೆನೋಡಬಹುದು.

೧. ಸೋಲಿಗರು ಬಳಸುವ ಭಾಷೆಯು ಶಿಷ್ಟಕನ್ನಡಕ್ಕಿಂತ ತುಂಬ ಭಿನ್ನತೆಯನ್ನು ಹೊಂದಿದ್ದು. ಹಿರಿಯ ತಲೆಮಾರಿನವರು ಸೋಲಿಗ ಭಾಷೆಯನ್ನು ಮಾತನಾಡಿದರೆ ಇದು ಕನ್ನಡ ಭಾಷೆಯೇ ಎಂದು ಸಂಶಯದಿಂದ ನೋಡುವಷ್ಟು ಭಿನ್ನವಾಗಿ ಕಂಡುಬರುತ್ತದೆ. ಅಂದರೆ ಸೋಲಿಗರಲ್ಲಿ ಮೂಲ ಕನ್ನಡದ ಅಂಶಗಳು ಇಂದಿಗೂ ಉಳಿದುಕೊಂಡು ಬಂದಿದೆ. ಆದರೆ ಇತ್ತೀಚಿನ ಹೊಸ ತಲೆಮಾರಿನ ೧೬ ರಿಂದ ೩೫ ವಯಸ್ಸಿನವರಲ್ಲಿ ಸೋಲಿಗ ಭಾಷೆಯ ಬಳಕೆಯಲ್ಲಿ ಬದಲಾವಣೆ ಕಂಡುಬರುತ್ತದೆ. ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

೨. ಸೋಲಿಗರು ಕೌಟುಂಬಿಕ ವಲಯದಲ್ಲಿ ಮಾತೃ ಭಾಷೆಯಲ್ಲಿ ವ್ಯವಹರಿಸುವುದು. ಆದರೆ ಇತ್ತೀಚಿನ ದಿನಗಳಲ್ಲಿ  ಜಾಗತೀಕರಣ, ನಗರೀಕರಣದ ಪ್ರಭಾವದಿಂದಾಗಿ ಕೌಟುಂಬಿಕ ವಲಯದ ಭಾಷಾ ಬಳಕೆಯಲ್ಲಿ ಬದಲಾವಣೆಯಾಗುತ್ತಿರುವುದು. ಈ ಅಧ್ಯಯನದಿಂದ ತಿಳಿದುಬಂದಿದೆ.

೩. ಸೋಲಿಗ ಸಮುದಾಯವು ದಟ್ಟವಾದ ಅರಣ್ಯದಲ್ಲಿ ವಾಸವಾಗಿದ್ದು ಅನ್ಯಭಾಷಿಕ ಸಮುದಾಯಗಳ ಸಂಪರ್ಕದಿಂದ ದೂರವಿದ್ದರೂ ಸಹ ಇತ್ತೀಚಿನ ದಿನಗಳಲ್ಲಿ ಬೇರೆ ಬೇರೆ ಕಾರಣಗಳಿಂದಾಗಿ ಸೋಲಿಗ ಸಮುದಾಯದ ಜನರ ಭಾಷೆಯಲ್ಲಿ ಬದಲಾವಣೆ ಗೋಚರಿಸಿದೆ ಎಂಬುದನ್ನು ಅಧ್ಯಯನದಲ್ಲಿ  ಸಾದರಪಡಿಸಲಾಗಿದೆ

೪. ಹಳೆಯ ತಲೆಮಾರಿನ ಸೋಲಿಗ ಸಮುದಾಯದ ಹಿರಿಕರಲ್ಲಿ  ನುಡಿಬೆರೆಕೆ ಪ್ರಮಾಣ ಕಡಿಮೆ, ಏಕೆಂದರೆ ಹಳೆ ತಲೆಮಾರಿನವರ ವಯಸ್ಕ ಗಂಡು ಮತ್ತು ಹೆಣ್ಣುಗಳು ಇತರ ಸಮುದಾಯಗಳ ಜನರೊಂದಿಗೆ ದಿನ ನಿತ್ಯದ ವ್ಯವಹಾರ ಸಂಪರ್ಕಗಳು ಕಡಿಮೆ ಇರುವುದರಿಂದ ಈ ಪ್ರಕ್ರಿಯೆಯು ಕಡಿಮೆ ಪ್ರಮಾಣದಲ್ಲಿದೆ.

೫. ಎರಡನೇ ತಲೆಮಾರಿನ ಅನಕ್ಷರಸ್ಥ ಪುರುಷ ಮತ್ತು ಅನಕ್ಷರಸ್ಥ ಮಹಿಳೆಯರಲ್ಲಿ ಬದಲಾವಣೆ ಕಂಡುಬಂದರೂ ಅಕ್ಷರಸ್ಥ  ಪುರುಷ ಮತ್ತು ಅಕ್ಷರಸ್ಥ ಮಹಿಳೆಯರಲ್ಲಿ ಕನ್ನಡದ ಪ್ರಭಾವ ಹೆಚ್ಚಾಗಿ ಕಾಣಬಹುದಾಗಿದೆ.

೬. ಸೋಲಿಗರಲ್ಲಿ ನುಡಿಮಿಶ್ರಣ ಪ್ರಕ್ರಿಯೆಯು ಎರಡನೆ ಮತ್ತು ಮೂರನೇ ತಲೆಮಾರಿನವರ ಕನ್ನಡ ಮತ್ತು ಇಂಗ್ಲೀಶ್ ಭಾಷಿಕಾಂಶಗಳ ಮಿಶ್ರಣವನ್ನು ಮಾಡಿಕೊಂಡು ಸ್ಥಳೀಯ

ಕನ್ನಡಿಗರೊಂದಿಗೆ ಬಳಸುತ್ತಾರೆ. ಇವರು ಮಾರುಕಟ್ಟೆಯಲ್ಲಿ ವ್ಯವಹಾರಿಕ ಭಾಷೆಯಾಗಿ ಸ್ಥಳೀಯ ಕನ್ನಡದ ಪ್ರಭಾವವನ್ನು ಕಾಣಬಹುದು. ಆದರೆ ಸೋಲಿಗರಲ್ಲಿ ನುಡಿಜಗಿತ ಪ್ರಕ್ರಿಯೆಯನ್ನು ಕಾಣಲಾಗುವುದಿಲ್ಲ.

ಉದಾ: ಎಟ್ರೆ ಸಿದ್ದಪ್ಪನೊರು ಮೇಟಿಂಗ್ ಕರ್ರದರೆ

ನಮ್ತವಾ ಅಮೌಟ್ ಇಲ್ಲಾ ಪೊಟು ವಿಡಿಯಾ ತೆಗ್ನಾಕು, ಹುಡುಗರು ಮೊಬೆಲ್ ನಿಲ್ಲಿ ತೆಕ್ಕೊತ್ತಾರೆ.

೭. ಹಳೆಯ ತಲೆಮಾರಿನ ಅನಕ್ಷರಸ್ಥ ಗಂಡು ಮತ್ತು ಹೆಣ್ಣು ಕೂಲಿ ಕಾರ್ಮಿಕರು ಮತ್ತು ಕೃಷಿಕರು ತಮ್ಮ ಸೋಲಿಗ ಮಾತೃಭಾಷೆಯಲ್ಲಿ ಹೆಚ್ಚಾಗಿ ವ್ಯವಹರಿಸುವವರು. ಆದರೆ ಹೊಸ ತಲೆಮಾರಿನ ಅಕ್ಷರಸ್ಥರು ಗಂಡು ಮತ್ತು ಹೆಣ್ಣುಗಳ ಮಾತು ಕನ್ನಡ ಭಾಷೆಗೆ ಹತ್ತಿರವಿದ್ದು ಇವರಲ್ಲಿ ಕೆಲವರು ಬೇರೆ ಬೇರೆ ಭಾಷೆಯನ್ನು ಬಲ್ಲವರಾಗಿದ್ದಾರೆ. ಕಾರಣ ಬದಲಾದ ಸಾಮಾಜಿಕ ಆರ್ಥಿಕ, ಶೈಕ್ಷಣಿಕ ವ್ಯವಸ್ಥೆಗಳು ಮತ್ತು ನಗರ ಗಡಿ ಭಾಗದ ಪ್ರಭಾವಗಳು ಇದಕ್ಕೆ ಕಾರಣವಾಗಿದೆ. ಹಾಗೂ ಸಮುದಾಯದ ಕೌಟುಂಬಿಕ ವಲಯದ ಭಾಷೆಗಿಂತ ವ್ಯವಹಾರಿಕ ಭಾಷೆ ಭಿನ್ನವಾಗಿದ್ದು, ವ್ಯವಹಾರಿಕ ವಲಯದಲ್ಲಿ ಸಾಮಾನ್ಯವಾಗಿ ಇಲ್ಲಿನ ಸ್ಥಳೀಯ ಕನ್ನಡವನ್ನು ಬಳಸುತ್ತಾರೆ.

೮. ಬಿಳಿಗಿರಿರಂಗನ ಬೆಟ್ಟದ ಭೌಗೋಳಿಕ ವಾತಾವರಣ ಸೋಲಿಗ ಬುಡಕಟ್ಟು ಸಮುದಾಯವನ್ನು ಒಂದು ಪ್ರತ್ಯೇಕ ಭಾಷಾ ಗುಂಪನ್ನಾಗಿ ರಚಿಸಿ ಅವರದೇ ಭಾಷೆಯನ್ನು ಉಳಿಸಿ ಬೆಳಸಿಕೊಳ್ಳಲು ಸಹಾಯಕವಾಗಿತ್ತು. ಆದರೆ ಇತ್ತೀಚೆಗೆ ನಿರ್ಧಿಷ್ಟವಾದ ಭಾಷಿಕ ದ್ವೀಪಕ್ಕೆ ನಗರ ಕೇಂದ್ರಿತ ಜನರ ಪ್ರವೇಶದಿಂದಾಗಿ ಸೋಲಿಗರ ಮಾತಿನಲ್ಲಿ ಬದಲಾವಣೆ ಕಂಡುಬರುತ್ತದೆ.

೯. ಸೋಲಿಗ ಭಾಷೆಯಲ್ಲಿ ಅನುನಾಸೀಕರಣ ಪ್ರತ್ಯೇಕ ಧ್ವನಿಮಾವಾಗಿದ್ದು. ಇದು ಅರ್ಥವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಅನುನಾಸಿಕರಣವು ಸಾಮಾನ್ಯವಾಗಿ ಸೋಲಿಗ ಸಮುದಾಯದ ಎಲ್ಲಾ ಸಾಮಾಜಿಕ ವ್ಯತ್ಯಾಯದವರಲ್ಲಿ ಕಂಡುಬರುತ್ತದೆ. ಆದರೆ ಅಕ್ಷರಸ್ಥ ೧೬ ರಿಂದ ೩೫ ವಯಸ್ಸಿನ ಮೂರನೇ ತಲೆಮಾರಿನವರಲ್ಲಿ ಕಂಡುಬರುವುದಿಲ್ಲ.

೧೦. ಹಳೆಗನ್ನಡದ ಶಕಟರೇಪೆ ಸೋಲಿಗ ಭಾಷೆಯಲ್ಲಿ ಒಂದು ಸ್ವತಂತ್ರ ಧ್ವನಿಯಾಗಿದೆ. ಇದು ಸೋಲಿಗ ಸಮುದಾಯದಲ್ಲಿ ಇಂದಿಗೂ ಬಳಕೆಯಲ್ಲಿದೆ. ಆದರೆ ಇತ್ತೀಚಿನ ಹೊಸ ತಲೆಮಾರಿನಲ್ಲಿ ಇದರ ಬಳಕೆ ಕಡಿಮೆಯಾಗಿದೆ.

ಉದಾ: ಮರ್ರ – ಮರ

ಅರ್ರೆ – ಅರೆ

೧೧. ಸೋಲಿಗ ಭಾಷೆಯಲ್ಲಿ ಕಂಡುಬರುವ ಸೋಲಿಗ ಭಾಷೆಯ ವೈವಿಧ್ಯತೆಗಳು ಇತ್ತೀಚಿನ ತಲೆಮಾರಿನವರಲ್ಲಿ ಕಣ್ಮರೆಯಾಗುತ್ತದೆ. ಸೋಲಿಗ ಭಾಷೆಯಲ್ಲಿ ವಿಶೇಷವಾಗಿ ಕಂಡುಬರುವ ಹಳಗನ್ನಡದ ಪದಗಳನ್ನು ಸೋಲಿಗ ಬುಡಕಟ್ಟಿನ ಹಳೆಯ ತಲೆಮಾರಿನವರು ಮಾತ್ರ ಬಳಸುತ್ತಾರೆ. ಇತ್ತೀಚಿನ ತಲೆಮಾರಿನಲ್ಲಿ ಬಳಕೆಯಲ್ಲಿಲ್ಲ.

೧೨. ಬರಹ ಭಾಷೆಯ ಪ್ರಭಾವ, ನೆರೆ ಭಾಷೆಯ ಒತ್ತಡ ಇದ್ದರೂ ತನ್ನದೇ ಭಾಷಾ ಮೇಲ್ಮೆ ವೈಶಿಷ್ಟ್ಯತೆ ಹಾಗೂ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡಿರುವ ಸೋಲಿಗ ಭಾಷೆಯು ಕನ್ನಡದ ಸಾಮಾಜಿಕ ಉಪಭಾಷೆಯಾಗಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಸಾಧಿಸಿ ತೋರಿಸಲಾಗಿದೆ.

೧೩. ಸೋಲಿಗ ಸಮುದಾಯದಲ್ಲಿ ಇತ್ತೀಚಿನ ತಲೆಮಾರಿನವರು ಸೋಲಿಗ ಭಾಷೆಯನ್ನು ಕೇವಲ ಅರ್ಥ ಮಾಡಿಕೊಳ್ಳುತ್ತಾರೆ. ಆದರೆ ಅವರು ಸೋಲಿಗ ಭಾಷೆಯನ್ನು ತಮ್ಮ ಕೌಟುಂಬಿಕ ವಲಯದಲ್ಲೂ ಬಳಸುವುದಿಲ್ಲ. ಹೀಗಾಗಿ ಸೋಲಿಗ ಭಾಷೆಯು ಅವನತಿಯ ಹಾದಿಯಲ್ಲಿದೆ. ಈ ಭಾಷೆಯನ್ನು ಕುರಿತು ಇನ್ನೂ ಹೆಚ್ಚಿನ ಅಧ್ಯಯನ ವಿಭಿನ್ನ ವಲಯಗಳಲ್ಲಿ ನಡೆಯಬೇಕಾಗಿದೆ. ಸೋಲಿಗ ಭಾಷೆಯು ವಿಶಿಷ್ಟವಾಗಿದ್ದು, ದಾಖಲೆಯಾಗಿ ಸಂಗ್ರಹಿಸಿ ಇಡಬೇಕಾದ ಅಗತ್ಯವಿದೆ.

೧೪. ಸೋಲಿಗರಲ್ಲಿ ಲಿಂಗಾಧಾರಿತವಾಗಿ ಭಾಷಾಬಳಕೆಯಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲ. ಆದರೆ ವಯೋಮಾನ ಆಧಾರಿತವಾಗಿ ವಿಭಿನ್ನ ವಯಸ್ಸಿನವರಲ್ಲಿ ಮತ್ತು ಅಕ್ಷರಸ್ಥ ಮತ್ತು ಅನಕ್ಷರಸ್ಥ ಸಮುದಾಯದವರಲ್ಲಿ ಮತ್ತು ವಿಭಿನ್ನ ವಯಸ್ಸಿನವರಲ್ಲಿ ಮತ್ತು ಅಕ್ಷರಸ್ಥ ಮತ್ತು ಅನಕ್ಷರಸ್ಥ ಸಮುದಾಯದವರಲ್ಲಿ ಮತ್ತು ವಿಭಿನ್ನ ವೃತ್ತಿಯವರಲ್ಲಿ ಭಾಷಾ ಬಳಕೆಯಲ್ಲಿ ಹೆಚ್ಚಿನ ವ್ಯತ್ಯಾಸ ಕಂಡುಬರುತ್ತದೆ.

೧೫. ಸೋಲಿಗ ಹಿರಿಯ ತಲೆಮಾರಿನ ಅವಿದ್ಯಾವಂತ ಪುರುಷ ಮತ್ತು ಸ್ತ್ರೀಯರ ಭಾಷಾ ಬಳಕೆಯಲ್ಲಿ ಭಿನ್ನತೆಯಿದ್ದು ಅಥವಾ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಇದಕ್ಕೆ ಕಾರಣವೆಂದರೆ ಶಿಕ್ಷಣದ ಕೊರತೆಯಿಂದಾಗಿ ಹಿರಿಯ ತಲೆಮಾರಿನವರಲ್ಲಿ ಭಿನ್ನತೆ ಕಂಡುಬರುತ್ತದೆ. ಹಾಗೆಯೇ ಇತ್ತೀಚಿನ ವಿದ್ಯಾವಂತ ಪುರುಷ ಮತ್ತು ಸ್ತ್ರೀಯರನ್ನು ಎರಡನೆ ಮತ್ತು ಮೂರನೆ ತಲೆಮಾರಿನವರಲ್ಲಿ ಆಧುನೀಕರಣ, ನಗರೀಕರಣ, ರಾಜಕೀಯ ಸಾಮಾಜಿಕ ಸಾಂಸ್ಕೃತಿಕ ಶೈಕ್ಷಣಿಕ ಅಂಶಗಳ ಪ್ರಭಾವದಿಂದ ಬದಲಾವಣೆಗೊಂಡಿದೆ. ಒಟ್ಟಾರೆಯಾಗಿ ಹೇಳುವುದಾದರೆ ಸೋಲಿಗರ ವ್ಯವಹಾರಿಕ ಭಾಷೆಯನ್ನು ಗಮನಿಸಿದಾಗ ಧ್ವನಿ ನಿಯಮಗಳು ಬರಹಕನ್ನಡಕ್ಕಿಂತ ಭಿನ್ನವಾಗಿ ಬಳಕೆಯಾಗಿವೆ ಎಂಬುದು ತಿಳಿದುಬರುತ್ತದೆ.

೧೬. ಸೋಲಿಗ ಕನ್ನಡದ ಬಳಕೆಯ ನೆಲೆಗಳನ್ನು ಗಮನಿಸಿದಾಗ ಸೋಲಿಗ ಕನ್ನಡ ಭಾಷೆಯನ್ನಾಡುವ ಜನರ ಸಾಮಾಜಿಕ ಲಕ್ಷಣ, ಸಾಂಸ್ಕೃತಿಕ ಹಿನ್ನಲೆ, ಅವರ ಬದುಕಿನುದ್ದಕ್ಕೂ ನಡೆಸುವ ಚಟುವಟಿಕೆಗಳಲ್ಲಿ ಇರುವ ಭಾಷಿಕ ವೈವಿಧ್ಯತೆಗಳಾದ ಗಾದೆಗಳು, ಒಗಟುಗಳು, ಸ್ಥಳನಾಮಗಳು, ಸಂಬಂಧವಾಚಕಗಳು, ಸಂಭೋದನಾ ರೂಪಗಳು, ವ್ಯಕ್ತಿನಾಮಗಳು ಆಧುನಿಕ ಸಂದರ್ಭ ಇವುಗಳ ಅಧ್ಯಯನದ ಮೂಲಕ ಸೋಲಿಗ ಸಮುದಾಯದ ಸಮಾಜ ಮತ್ತು ಸಂಸ್ಕೃತಿ ಸಂಬಂಧ ಮತ್ತು ಭಾಷೆಯನ್ನು ಕಂಡುಕೊಳ್ಳಲಾಗಿದೆ. ಸೋಲಿಗ ಸಮುದಾಯದಲ್ಲಿ

ಸ್ಥಳೀಯ ಭಾಷೆಗಳಲ್ಲಿರುವಂತ ಸಮಾನವಾದಂತಹ ಗಾದೆಗಳು ಕಂಡುಬರುತ್ತವೆ. ಗಾದೆಗಳನ್ನು ಲಿಂಗ, ವರ್ಗ, ಪ್ರಾಣಿ, ಭೌತಿಕ, ನೀತಿ ಪ್ರಧಾನ ಗಾದೆಗಳನ್ನು ಪಟ್ಟಿ ಮಾಡಿ ವಿಶ್ಲೇಷಣೆ ಮಾಡಲಾಗಿದೆ.

೧೭. ಳ್, ಣ್, ಷ್, ವ್ಯಂಜನಗಳು ಪದಾದಿ ಪರಿಸರದಲ್ಲಿ ಸೋಲಿಗ ವ್ಯವಹಾರಿಕ ಕನ್ನಡದಲ್ಲಿ ಕಂಡುಬರುವುದಿಲ್ಲ

೧೮. ಸೋಲಿಗರ ಹಿರಿಯ ತಲೆಮಾರಿನವರಲ್ಲಿ ವಿದ್ಯಾವಂತ ಸ್ತ್ರೀ ಪುರುಷರ ಭಾಷಾ ಬಳಕೆಯಲ್ಲಿ ಬಿನ್ನತೆ ಇದೆ, ಅರ್ಥ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಇದಕ್ಕೆ ಕಾರಣ ಶಿಕ್ಷಣದ ಕೊರತೆ, ಆರ್ಥಿಕ, ಸಾಮಾಜಿಕ ಅಂಶಗಳ ಕೊರತೆ ಮುಖ್ಯವಾಗಿ ಮಾತೃಭಾಷೆಯ ಪ್ರಭಾವವೇ ಆಗಿದೆ ಎಂದು ಹೇಳಬಹುದು.

೧೯. ಇತ್ತೀಚಿನ ವಿದ್ಯಾವಂತ ಸ್ತ್ರೀ-ಪುರುಷರನ್ನು ಗಮನಿಸಿದಾಗ ಅವರು ಬರಹದಕನ್ನಡಕ್ಕೆ ಹತ್ತಿರವಾಗುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿಯನ್ನು ಪಡೆಯುವಂತಹ ವೇಳೆಯಲ್ಲಿ ಕಂಡುಕೊಳ್ಳಲಾಗಿದೆ. ಇದಕ್ಕೆ ಕಾರಣ ಆಧುನಿಕರಣ, ನಗರೀಕರಣ, ರಾಜಕೀಯ, ಸಾಮಾಜಿಕ, ಮತ್ತು ಸಾಂಸ್ಕೃತಿಕ, ಶೈಕ್ಷಣಿಕ ಅಂಶಗಳ ಪ್ರಭಾವವೆಂದು ಹೇಳಿದರೆ ತಪ್ಪಾಗಲಾರದು. ಒಟ್ಟಾರೆಯಾಗಿ ಸೋಲಿಗರ ವ್ಯವಹಾರಿಕ ಕನ್ನಡ ಬಳಕೆ ಸ್ವರೂಪವನ್ನು ಧ್ವನಿ ನಿಯಮಗಳನ್ನು ಅನುಲಕ್ಷಿಸಿ ಗಮನಿಸಿದಾಗ ಬರಹಕನ್ನಡಕ್ಕಿಂತ ಭಿನ್ನವಾಗಿ ಬಳಕೆ ಆಗಿರುವುದು ಕಂಡುಬರುತ್ತದೆ.

೨೦. ಸೋಲಿಗರ ಸಮುದಾಯದ ಆಚರಣೆ ಮತ್ತು ಸಂಪ್ರದಾಯಗಳನ್ನು ಗಮನಿಸಿದಾಗ ಜನನ ನಾಮಕರಣ, ಋತುಮತಿ, ವಿವಾಹ, ಶವಸಂಸ್ಕಾರ, ನಂಬಿಕೆ, ದೈವಗಳನ್ನು ಆಚರಿಸುವಂತಹ ಸಂದರ್ಭದಲ್ಲಿ ಯಾವ ರೀತಿ ವಿಶೇಷವಾಗಿ ಆಚರಣೆಯನ್ನು ಮಾಡುತ್ತಾರೆ ಮತ್ತು ಅವರು ಮಾಡುವಂತಹ ಆಚರಣೆಯಲ್ಲಿ ಬಳಸುವಂತಹ ವಿಶೇಷ ಪದಗಳ ಜೊತೆಗೆ ವಿವರಣೆ ಮಾಡುವುದರ ಮೂಲಕ ಸಮುದಾಯದ ವಿಭಿನ್ನತೆಯನ್ನು ಗುರುತಿಸಲಾಗಿದೆ.

೨೧. ಸೋಲಿಗ ಸಮುದಾಯದಲ್ಲಿ ವ್ಯಕ್ತಿನಾಮಗಳ ಸ್ವರೂಪವನ್ನು ಗಮನಿಸಿದಾಗ ಮೊದಲನೆ ತಲೆಮಾರಿನ ಸೊಲಿಗ ಸಮುದಾಯವನ್ನು ಪ್ರತಿನಿಧೀಕರಿಸುವ ವ್ಯಕ್ತಿನಾಮಗಳು ಬಳಕೆಯಲ್ಲಿದೆ. ಎರಡನೆ ತಲೆಮಾರಿನಲ್ಲಿ ಮುಂದುವರೆದಿದ್ದು ಮೂರನೇ ತಲೆಮಾರಿನಲ್ಲಿ ಬದಲಾವಣೆ ಕಂಡುಬರುತ್ತದೆ.

| ಉದಾ : | ಒಂದನೆ ತಲೆಮಾರು | ಎರಡನೆ ತಲೆಮಾರು | ಮೂರನೆ ತಲೆಮಾರು |
|---|---|---|---|
| | ಜಡೇಗೌಡ | ಜಡೇಯ | ರಾಘು |
| | ಮಾಸ್ತಮ್ಮ | ಮಾದೇವಿ | ಜ್ಯೋತಿ |

೨೨. ಸೋಲಿಗ ಸಮುದಾಯವು ವಾಸಿಸುತ್ತಿರುವಂತಹ ಸ್ಥಳನಾಮಗಳು ಮೊದಲನೆ ತಲೆಮಾರಿನಲ್ಲಿ ಪೋಡುಗಳು ಎಂಬ ಹೆಸರಿನಿಂದ ಬಳಕೆಯಲ್ಲಿದ್ದು ಇತ್ತೀಚಿನ ದಿನಗಳಲ್ಲಿ ಪೋಡುಗಳ ಜಾಗದಲ್ಲಿ ಕಾಲೋನಿಗಳಾಗಿ ಬಳಕೆಯಲ್ಲಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದುಬರುತ್ತದೆ.

ಉದಾ: ಯರಕನಗದ್ದೆ ಕಾಲೋನಿ, ಕೆ.ಗುಡಿ, ಹೊಸಪೋಡು,

೨೩. ಸೋಲಿಗ ಕನ್ನಡ ಭಾಷೆಯಲ್ಲಿ ಸಂಖ್ಯಾವಾಚಿಗಳು ತುಂಬಾ ವಿಶಿಷ್ಟ. ನಾಮಪದಗಳಲ್ಲಿ ಸಂಖ್ಯಾನಾಮಗಳೆಂದು ಕರೆಯಲಾಗುತ್ತದೆ. ಸೋಲಿಗರ ಕೃಷಿ ಅಳತೆಮಾಪನಗಳು ಮತ್ತು ದಾನ್ಯ ತೂಕ ಮಾಪನವು ಬರಹಕನ್ನಡಕ್ಕಿಂತ ಭಿನ್ನವಾಗಿ ಕಂಡುಬರುತ್ತದೆ.

ಉದಾ: ಅರೆ–ಅರ್ಧ, ಇಬ್ಬಳಿಗೆ–ಐದುಸೇರು, ಚಟಾಕು– ಕಾಲು

೨೪. ಸೋಲಿಗರ ಕನ್ನಡದಲ್ಲಿ ವಚನಗಳ ರೂಪದಲ್ಲಿ ವಿಶಿಷ್ಟವಾಗಿ ಕಂಡುಬರುವುದು ಬಹುವಚನದ ರೂಪಗಳಲ್ಲಿ ಸೋಲಿಗ ಸಮುದಾಯದ ಸಾಮಾಜಿಕ ಭಿನ್ನಾಂಶದವರಲ್ಲಿ ಬಹುವಚನ ಪ್ರತ್ಯಯವು ಗ/ದಿರು/ರು/ಕ ಈ ರೀತಿಯಾಗಿ ಬಳಕೆಯಾಗುತ್ತದೆ. ಇತ್ತಿಚಿನ ತಲೆಮಾರಿನವರಲ್ಲಿ ಬದಲಾವಣೆ ಕಂಡುಬಂದಿದೆ. ಉದಾ: ಆನೆಗ– ಆನೆಗಳು, ಅಕ್ಕದಿರು–ಅಕ್ಕಂದಿರು, ತಂಗೆರು– ತಂಗಿಯರು, ಮಕ್ಕ–ಮಕ್ಕಳು

೨೪. ಸೋಲಿಗ ಕನ್ನಡದ ವಿಭಕ್ತಿ ಪ್ರತ್ಯಯಗಳು ಬರಹಕನ್ನಡಕ್ಕಿಂತ ಭಿನ್ನವಾಗಿದೆ. ಎಂದು ಕಂಡುಕೊಳ್ಳಲಾಗಿದೆ. ಇಲ್ಲಿ ದ್ವಿತೀಯ ಮತ್ತು ಷಷ್ಠಿ ವಿಭಕ್ತಿ ಪ್ರತ್ಯಯಗಳು ಏಕ ರೂಪದಲ್ಲಿರುವುದನ್ನು ಕಾಣುತ್ತೇವೆ.

ಉದಾ: ಎವದ–ಯಾವುದನ್ನು, ಆಲಿನ–ಹಾಲಿನ

ಪ್ರಸ್ತುತ ಅಧ್ಯಯನವು ಹಿಂದೂಳಿದ ಸಮುದಾಯಗಳೆಲ್ಲಾ ನಸಿಸಿ ಹೋಗುವಂತಹ ಸಂದರ್ಭವನ್ನು ನಾವಿಲ್ಲಿ ನೋಡುತ್ತಿದ್ದೇವೆ. ಕರ್ನಾಟಕದಲ್ಲಿ ಅನೇಕ ಬುಡಕಟ್ಟು ಸಮುದಾಯಗಳಿದ್ದು ಅದರಲ್ಲೂ ಕನಾಟಕದ ಸೋಲಿಗ ಬುಡಕಟ್ಟು ಸಮುದಾಯವು ಒಂದಾಗಿದೆ. ಸೋಲಿಗ ಸಂಸ್ಕೃತಿ ಹಾಗೂ ಅವರ ಆಚಾರ ವಿಚಾರಗಳು ಮರೆಮಾಚಿ ಹೋಗುತ್ತಿವೆ. ಇಂತಹ ಒಂದು ಸಂದರ್ಭದಲ್ಲಿ ಸಮುದಾಯದ ಲಕ್ಷಣಗಳನ್ನು ಕುರಿತು ಅಧ್ಯಯನ ನಡೆಸಿದಾಗ ಇವರಲ್ಲಿರುವಂತಹ ಸಮುದಾಯದ ಭಾಷೆಯು ಸಂಕಷ್ಟಕ್ಕೆ ಸಿಲುಕಿರುವಂತಹ ಪರಿಸ್ಥಿತಿ ಎದುರಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಅವರು ಆಡುವಂತಹ ಭಾಷೆಯನ್ನು ಉಳಿಸುವ ನಿಟ್ಟಿನಲ್ಲಿ ಇನ್ನೂ ಮತ್ತಷ್ಟು ಅಧ್ಯಯನ ನಡೆಯಬೇಕಿದೆ. ಸಮುದಾಯದ ಉಳುವಿಗಾಗಿ ಸಮಾಜ ಮತ್ತು ರಾಷ್ಟ್ರಕ್ಕೆ ಇದರ ಅವಶ್ಯಕತೆ ಹೆಚ್ಚು ಕಂಡುಬರುತ್ತದೆ. ಇದರ ನೈಜಬದುಕನ್ನು ಮತ್ತು ಸಂಸ್ಕೃತಿ ಮತ್ತು ಭಾಷೆಯನ್ನು ಹೊರಜಗತ್ತಿಗೆ ಅನಾವರಣ ಗೊಳಿಸುಬೇಕಾಗುತ್ತದೆ.

**ಸೋಲಿಗರು**

ಸೋಲಗ್ರು ಎಂದು ಏಕ ಹೆಸ್ರು ಬಂತು ಎಂದ್ರೆ ಎಜ್ಜಿದಿರನಲ್ಲಿ ಕಳಲೆ ಮುಡ್ತದೆ ಕಳಲೆ ಮೂಡಿ ಅದ ಮೆಲಕ ಬರ್ತದೆ ಎರುವಾಗ ಅದ್ರಲ್ಲಿ ಸೋಗು ಇರ್ತದಲ್ಲದು ಎಡೆದು ಎಡೆದು ಬೀಳ್ತದೆ. ನಮ್ಮ ಸೋಲಿಗ್ರ ಕೂಸ ಸಿವನು ಉತ್ಪತ್ತಿ ಮಾಡಿ ಆ ಸೋಗಿನ ಒಳಕ ಹಾಕ್ಬಿಟ್ಟ. ಗೌಡ್ರು ಅಂತ ಇರ್ತರೆ ಸಾಮಿ ನಾಡಿನವರಲ್ಲಿ. ಗೌಡರ ಸೆಟ್ಟಿ ಗೌಡಗ ಸೆಟ್ಟಿ ಅಂತ ಸರ ಅವ ಕತ್ತಿ ತೆಕದುಕೊಂಡು ಇಲ್ಲಿಗ ಬಿದಿರನ ಅಚ್ಚೆ ಬೇಕಲ್ಲ, ಅದ್ಕೆ ಕಾಡಿಗೆ ಬಂದನಂತೆ. ಬಂದು ಒಂದು ಬಿದಿರನ್ನು ಕಡಿದ ಒಂದು ಬಿದಿರನ್ನು ಕಡಿದು ಅದನ್ನು ಎಳೆದು ಅಲ್ಲಿ ಇಟ್ಟು ಬುಡತಾನೆ ಒಂದು ಕಟ್ಟು ಬಿದರಾಗತ್ತದೆ. ತೊಗಟೆ ತೆಗೆದು ತೊಗಟೆ ತೆಗೆದು ಇನ್ನೂ ಹೊರೆ ಆಗಿ ಬಿದಿರನ್ನು ಸೇರಿಸಿ ಕಟ್ಟಬೇಕಲ್ಲ ಕಟ್ಟಾಗಿ ತೊಗಟ ಎಡೆದಾಗ ನಾರು ಬರ್ತದೆ ಅದಕ್ಕಾಗಿ ಬಿದಿರನ್ನು ಮಚ್ಚಿನಲ್ಲಿ ತರಿದು, ಗೌಡಸೆಟ್ಟಿ ಕೆಳಕ್ಕೆ ಇಟ್ಟ, ಆ ಸೋಗಿನ ಒಳಗ ಸಿವನು ಉತ್ಪತ್ತಿ ಮಾಡಿ ಒಂದು ಇಷ್ಟು ಎತ್ತರದ ಗೊಂಬೆಯನ್ನು ಹಾಕ್ದ ಆ ಸೋಗು ಹಿಡಿದು ಹಿಡಿದು ಗಿಣ್ಣು ತೆಗೆದು ಹಾಕಿ ಮೆಲ್ಕ ಗೌಡಸೆಟ್ಟಿ ಹೋಗತ್ತಿರಬೇಕಾದ್ರ ಸೋಗಿನಿಂದ ಕೂಸು ಜರ್ರನೆ ಜಾರಿ ಕೆಳಕ ಬಿತ್ತು ಆಗ ಬಿದ್ದ ಕೂಸು ಒರಳಾಡ್ತಿತ್ತು ಓ ಇದೆನಿದು ಇಲ್ಲಿ ಹೊರ್ಳಾಡ್ತಿರೊದು ಎಂದು ಗೌಡಸೆಟ್ಟಿ ನೊಡ್ವಾಗ ಅದು ಕುಚು ಓ ಇದೇನಪ್ಪ ಓ ಸೊಗಿನ ಒಳಗೊಂದು ಕೂಸು ಇದೆಯಲ್ಲ. ಓ ಓ ಇದನ್ನು ಹಾಳುಮಾಡ್ಬಾರದು. ಇದನ್ನು ತೆಗೆದುಕೊಂಡು ಹೋಗಿ ಸಾಕ್ಬೇಕು ಎಂದು ಎತ್ತಿಕೊಮಡು ಹೋದನಂತೆ ಗೌಡಸೆಟ್ಟಿ ನಮ್ಮಸಾಕಿದವ ಗೌಡಸೆಟ್ಟಿ ಮಹಾಸ್ವಾಮಿ ತೆಗೆದುಕೊಂಡು ಓಗಿ ಅದಕ್ಕೆ ನಿರು ಗಿರು ಆಕಿ ಚೆಂದಾಕಿ ಆರೇಕೆ ಜೋಪಾನ ಮಾಡಿದನಂತೆ ಮಾಡಿದ ನಂತರ ನೀನು ಯಾರಪ್ಪ ಎಂದು ಕೇಳ್ದಾಗ ಆ ಕೂಚು ನಾ ಕಾಡ ಸೋಲಿಗ ಶಿವನು ನನ್ನನ್ನು ಸೃಷ್ಟಿಮಾಡಿ ಆ ಸೋಗಿನ ಒಳಗೆ ಆಕಿದ್ದ ಅದಕ ನಮ್ಮಕ ಸೋಲಿಗ ಎಂದು ಕರೆದುಬಿಡಿ ಎಂದು ಹೇಳಿತು ಓ ಸರಿಯಪ್ಪ ನೀನು ಸೋಲ್ಗನೆ ಹೌದು ನಾನು ಸೋಲೆಲಿ ಉಟ್ಟಿದವನ ನಾ ಸೋಲ್ಗ ಆ ಚಿಕ್ಕ ಕೂಚನ್ನು ದೊಡ್ಡದು ಮಾಡಿ ಕಾಡಗ ನೀನು ಒಗಪ್ಪ ಎಂಬುದಾಗಿ ಗೌಡಸೆಟ್ಟಿ ಬಿಟ್ಟು ಅಂದ್ನಿಂದ ನಾವು ಕಾಡ್ನಲ್ಲಿ ವಾಸ ಮಾಡ್ತಿದೇವೆ. ಸೋಲ್ಗ ಜಾತಿ ಎಂದು ಉತ್ಪತ್ತಿ ಆಗಿದೆ.

**ಚೋಲಿಗರು**

ಚೋಲಿಗ್ರು ಎಂದು ಏಕ ಹೆಚರು ಬಂದತ್ತು ಎಂದಲೆ, ಹೆಜ್ಜಿದಿರನಲ್ಲಿ ಕಳಲೆ ಮೂಡ್ತದೆ ಕಳಲೆ ಮುಡಿ ಅದು ಮೇಲ್ಕೆ ಎತ್ರದೆ. ಆಗ ಏರರತು ಒಗಾಗ ಅಡರಲ್ಲಿ ಪಟ್ಟೆ ಇರ್ತದಲ್ಲ ಎಡ್ದ

ಎಡ್ದ ಜಿಳ್ತದೆ ಚಿವನು ಉತ್ಪತ್ತಿ ಮಾಡಿ ಆ ಪಟ್ಟೆ ಒಳ್ಗ ಆಕು ಬುಟ್ಟ ನಮ್ಮ ಚೋಲಿಗ್ರ ಕೂಚ ಗವ್ರಗರು ಅಂತ ಇರ್ತವರೆ ಚಾಮಿ ನೆಲೆಗಾಡಿನಲ್ಲಿ ಗವ್ರರ ಚೆಟ್ಟಿ ಗವರಗಚೆಟ್ಟಂತ ಚರಿ ಅವ ಕತ್ತಿ ಎತ್ತರು ಇಲ್ಲಿ ಜಿದಿರ್ಬ ಬೇಕ್ಲ್ಲ, ಅದಕ ಕಾಡಿಗಿತ್ತಿ ಬನ್ನತೆ ಒಮದು ಒಂದು ಜಿದಿನ ತರಿನ ಒಂದು ಜಿದಿರ ತರ್ತ ಅದವ ಹಿರ್ತು ಅಲ್ಲಿಟ್ಟು ಬುಟ್ಟ ಒಂದು ಆಕೆ ಜಿದಿರು ಒಯ್ತಿತಲ್ಲ ಪಟ್ಟೆ ಎಡ್ದರು ಪಟೆ ಎಡ್ದರು ಇನ್ನೂ ಆಕೆ ಎಡೆದು ಜಿದಿರ ಚೇರಿಚೆ ಕಟ್ಟಕಲ್ಲ ಆಕೆ ಎಡ್ದಮಲೆ ತಾ ನಾರು ಬರ್ತದೆ, ಆಗೆಂದು ಬುಟ್ಟವ, ಅಕೆ ಜಿದಿರ ತರ್ತ ಮಚ್ಚಿನಲ್ಲಿ ಗವ್ರಗ ಚೆಟ್ಟ ಕೆಳಕ ಹಿರ್ತ ಆ ಪಟ್ಟೆ ಒಳಕ ಚಿವನು ಉತ್ಪತ್ತಿ ಮಾಡಿ ಒಂದು ಇಚ್ಚ ಎತ್ರದ ಗೊಂಬೆಯ ಹಾಕಿದ್ದ ಆ ಪಟ್ಟೆ ಒಳಗೆ ಚಿವನು ಉತ್ಪತ್ತಿ ಮಾಡಿ ಒಂದು ಇಚ್ಚು ಎತ್ರದ ಗೊಂಬೆಯ ಹಾಕಿದ್ದ ಆ ಪಟ್ಟೆ ಹಿಡ್ತುರು ಹಿಡ್ತುರು ಗೆಣ್ಣ ಚವರು ಬುಟ್ಟು ಮೇಲಕ ಒಯ್ತಿದ್ದನಲ್ಲ ಗವ್ರಗ ಚೆಟ್ಟ ಆ ಪಟ್ಟೆಂದ ಕೂಚು ಜರನೆ ಜಾರಿ ಕೆಳಕ ಬಿದ್ದತ್ತು ಆಗ ಬಿದ್ದು ಅದು ಮರಳಿಯಾಡಿತ್ತಿತ್ತು ಓ ಇದೇನಪ್ಪ ಇಲ್ಲ ಮರಳಿಯಾಡಾದು ಆಗೆಂದು ಬುಟ್ಟು ಗವ್ರಗ ಚೆಟ್ಟ ನೋಡನೆಗಟ ಕೂಚು ಓ ಇದೆನಪ್ಪ ಈ ಪಟ್ಟೆ ಒಳಗೊಮದು ಕೂಚು ಅದೆಲ್ಲ ಓ ಓ ಇದಾ ಕಾಲಿ ಮಾಡ್ಬಾರದ ಇದವ ಎತ್ತರು ಒಗಿ ಚಾಕಾಕು ಎಂದು ಬುಟ್ಟು ಎತ್ತರು ಒದನತೆ ಗವರಗ ಚೆಟ್ಟಕಿ ನಮ್ಮ ಚಾಕಿದವ ಗವರಗ ಚೆಟ್ಟಿ ಮಚಾಮಿ ಹೊಗಿ ಅದಕ ನಿರ ಗಿರ ಆಕಿ ಸಚಿದಾಗಿ ಆರಯ್ಕೆ ಜೋಪಾನ ಮಾಡಿದ್ನಂತೆ. ಮಾಡು ಬುಟ್ಟ ಆಗ ನೀನ ಆರಪ್ಪ ಆಗೆಂದು ಕೆಲನೆಗಟ ಆ ಕುಚು ನಾ ಕಾಡ ಚೋಲಗ ಚಿವನು ನನ್ನ ಉತ್ಪತ್ತ ಮಾಡಿ ಆ ಪಟ್ಟೆ ಒಳಗೆ ಹಾಕಿದ್ದ ಅದಕ ನಮ್ಮ ಚೊಲೆಗ ಎಂದು ಕರ್ದ ಬುಡಿ ಎಂದು ಎಳ್ತು ಓ ಚರಿಯಪ್ಪ ನಿನು ಚೋಲಿಗನ ಆ ನಾ ಚೊಲಿಲಿ ಉಟ್ಟಿದವ ನಾ ಚೊಲಿಗ ಆ ಚಿಕ್ಕದ ದೊಡ್ಡದು ಮಾಡಿ ಕಾಡಗ ನೀನು ಹೊಗಪ್ಪ ಹಾಗೆಂಬುದಾಗಿ ಗವ್ರಗ ಚೆಟ್ಟಿ ಬುಟ್ಟು ಬುಟ್ಟು ಆಗ ನಾವು ಕಾಡಿನಲ್ಲಿ ಮಾಡರು ಚೋಲೆಗ ಜಾತಿ ಎಂದು ಉತ್ಪತ್ತಿ ಆಗುರಿದ್ದೊ.

ಬಿದಿರು ಕಳಲೆ

ಕಿರುಬಿದುರು ಹುಟ್ಟುತ್ತದೆ ಕಾಡಿನಲ್ಲಿ ಅದು ಹುಟ್ಟಿ ಬೆಳ್ತದೆ ಸೆಂದಾಗಿ ಬೆಳ್ದಾಗ ಅದರಲ್ಲಿ ಕಳಕೆಂತ ಆಡೆತದೆ ಮೊಕ್ಕಿನಾಗಿ. ಒಂದಿಚ್ಚು ಮಟ್ಟಿಗೆ ಬಂತೆಂಬೊತ್ತಿಗೆ. ಹೋ ನಾವಿನ್ನು ಕಳಲೆ ಉಣ್ಣಾಕು ಚರಿ ನಡೆಂತ ಆ ಒಯ್ತಿವಿ ಎರ್ಡಾಳು ಮೂರಾಳು ಚೇರಿರು. ಆಗೋಗಿ ಬಿದಿರಿನ ಕಳ್ಳೆನೆಲ್ಲ ಮುರ್ತಿವಿ ಕಿರಿ ಜಿದಿರು ಕಳ್ಳೆಯ ಮುರಿದು ಬುಟ್ಟು ಕುಳಿತರು ಪಟ್ಟೆಲ್ಲ ಉಗುರಿನಲ್ಲಿ ಎಡಿತಿವಿ ಪಟ್ಟೆಲ್ಲ ಎಡಿತಿವಿ ಆಗ ಅದರೊಳಗೆ ದಿಂಡಿರುತ್ತದೆ ಆ ಗೆಣ್ಣೆಲ್ಲ ಮುರಿದು ಮುರಿದು ಬಿಚಾಕಿ ಬುಡದು. ಈ ದಿಂಡ ಮುರಿದು ಬುಟ್ಟಿಗ ಆಕುಮಾಕು ಆಕುರು ತೆಗೆದ್ರು ಬರ್ತಿವಿ ಆಗ ಕುಡಗಿಲೆ ಮಡ್ಡುಗರು ನಮ್ಮ ಪೊಡಿನ್ಲ್ಲಿ, ಮಚರ ತೆಗ್ದುದ್ರಿತ್ತಿವಿ ಮೊರಕ ಎಲೆ ಆಚೆ ಬುಡ್ತಿವಿ. ಕುಡುಗಿಲೆಯ

ತೊಡೇಲಿ ಮೆಟ್ಟಿರು ಚಂದಾಗಿ ಚಣ್ಣಾಗಿ ಕೊರೆಯಾದು, ಕೊರ್ದು ಬುಟ್ಟು ಆಗ ನೀರಿಗೆತ್ತಿ ಉಣ್ಣೆ ಹಾಕು ಬುಡ್ತಿವಿ ಆಗ ಸಚಿದಾಗಿ ಉಂದತ್ತಂಬೊತ್ತಿಗ ಹಿಚಕಿ ಹಿಚಿಕಿ ತೆಗೆದು ನೀರೆಲ್ಲ ಬೊಗ್ಗಿತು ಬುಟ್ಟು ಒಲೇ ಮೇಲಿತ್ತಿ ಮಡಗು ಬುಡ್ತಿವಿ ಒಲೆ ಮೇಲೆ ಮಡಗು ಬುಟ್ಟು ನೀರಾಕು ಬುಟ್ಟು ಚರಿ ಆಡಿಲಿ ಬಿಂಕಿ ಆಕ್ತಿವಿ ಆಗ ಬಿಂಕಿಯೆಲ್ಲ ಜೊರಾಗಿ ನಿರೆಲ್ಲಾ ಮಳ್ಳಿ ಬೆಂದಂತೆಂಬೊತ್ತಿಗ ನೀರ ಬೊಗ್ಗಿಚಿ ಚಲ್ಲುಬುಟ್ಟು ಪತಿ ನೀರ ಆಕಿ ಉಪ್ಪಾರು ಆಕ್ತಿವಿ ಇಲ್ಲಿ ಕಾರುರು ಆಕಿ ಕಾರಿಲ್ಲದಲೆ ಉಪ್ಪನೇ ಆಕುತಿವಿ ಚರಿ ಮಾಡು ಬುಟ್ಟು ಉಪ್ಪ ಕಾರೆಲ್ಲ ಹಾಕುಬುಟ್ಟು ಆ ಕಾವಿನಲ್ಲಿ ಎರಕಿ ಮಡಗು ಬುಟ್ಟು ಅಳೆಲ್ಲ ಕುಲ್ತು ಊಟ ಮಾಡ್ತಿವಿ ಬುದ್ದಿ.

ಬಿದಿರು ಕಡಲೆ

ಕಿರುಬಿದಿರು ಹುಟ್ಟುತ್ತದೆ ನಮ್ಮ ಕಾಡಿನಲ್ಲಿ ಅದು ಹುಟ್ಟಿ ಚೆಂದಾಗಿ ಬೆಳೆತದೆ ಚೆಂದಾಗಿ ಬೆಳೆದಾಗ ಅದರಲ್ಲಿ ಕಡಲೆ ಅಂತ ಮೂಡ್ತದೆ ಚಿಗುರಿನಲ್ಲಿ ಒಂದಿಷ್ಟು ಮಟ್ಟಿಗ ಬಂದಾಗ. ಓಹೋ ನಾವು ಇನ್ನು ಕಡಲೆ ಊಟ ಮಾಡಕು ನಡಿರಿ ಎಂದು ಹೊರ್ಡ್ತೇವೆ ಸರಿ ನಡಿರಿ ಎಂದು ಆಗ ಒಗ್ತೇವೆ. ಎರಡು ಮೂರು ಜನ ಸೇರಿಕೊಂಡು. ಆಗ ಹೋಗಿ ಬಿದಿರಿನ ಕಡಲೆಯನ್ನೆಲ್ಲಾ ಮುರಿಯುತ್ತೇವೆ. ಕಿರುಬಿದಿರು ಕಡಲೆಯನ್ನು ಮುರಿದಾದ ನಂತರ ಕುಳಿತುಕೊಂಡು ಸೋಗನೆನಲ್ಲ ಉಗುರಿನಲ್ಲಿ ಎಡೆಯುತ್ತದೆವೆ. ಸೋಗನೆನಲ್ಲಾ ಎಡೆದಮೇಲೆ ಆಗ ಅದರೊಳಗೆ ದಿಂಡು ಇರುತ್ತದೆ ಆ ಗಿನ್ನೆಲ್ಲ ಮುರ್ದು ಮುರ್ದು ಬಿಸಾಕಿ ಬಿಡುವುದು. ಈ ದಿಂಡನ್ನು ಮಿರಿದು ಬಟ್ಟೆಗೆ ಹಾಕಬೇಕು ಹಾಕಿದಮೇಲೆ ಕುಡುಗೊಲು ತೆಗೆದುಕೊಂಡು ಬರ್ತಿವಿ. ಆಗ ಕುಡುಗೋಲು ಮಡಗಿ ನಮ್ಮ ಪೋಡಿನಲ್ಲಿ ಮೊರ ತೆಗೆದುಕೊಂಡು ಬರುತ್ತೇವೆ. ಮೊರಕ್ಕೆ ಎಲೆ ಹಾಸುತ್ತೇವೆ. ಕುಡುಗೋಲನ್ನು ತೊಡೆಯಲ್ಲಿ ಮೆಟ್ಟಿಕೊಂಡು ಚಂದಾಗಿ ಸಣ್ಣಾಗಿ ಕೊರೆಯುತ್ತವೆ. ಕೊರೆದಾದ ನಂತರ ಆಗ ನೀರಿಗೆ ನೆನೆ ಆಕ್ತೇವಿ ಆಗ ಚೆಂದಾಗಿ ನೆನ್ದ ನಂತ್ರ ಇಸುಕಿ ಇಸುಕಿ ತೆಗ್ದು ನೀರೆಲ್ಲ ಬೊಗ್ಗಿಸಿ ನಂತ್ರ ಒಲೆ ಮೇಲೆ ಎತ್ತಿ ಇಡ್ತೀವೆ ಒಲೆ ಮೇಲೆ ಆಕಿದ ನಂತ್ರ ಅದಕ ನೀರು ಆಕ್ತಿವಿ ಅಡಿಯಲ್ಲಿ ಬಿಂಕಿ ಆಕ್ತಿವಿ ಆಗ ಬಿಂಕಿಯೆಲ್ಲಾ ಜೊರಾಗಿ ನೀರೆಲ್ಲ ಕುದಿದ ನಂತರ ನೀರನ್ನು ತೆಗೆದುಬಿಡುವುದು. ಮತ್ತೆ ನೀರನ್ನು ಹಾಕಿ ಉಪ್ಪುಕಾರ ಆಕ್ತೆವೆ ಕಾರವನ್ನದ್ರು ಆಕ್ತಿವಿ ಕಾರಿಲ್ಲ ಅಂದ್ರೆ ಉಪ್ಪನ್ನೆ ಆಕಿ ಆ ಸಾಕದಲ್ಲೆ ಇರಲು ಬಿಟ್ಟು ಮೆನೆರೆಲ್ಲಾ ಕೂತು ಊಟ ಮಾಡ್ತಿವಿ.

**ಸೋಲಿಗರಿಗೆ ಭಾವನಾದ ಬಿಳಿಗಿರಿರಂಗಪ್ಪನ ಕಥೆ**

ಸೋಲಿಗ ಮತ್ತು ಬಿಳಿಗಿರಿ ರಂಗಪ್ಪನ ಸಂಬಂಧವು ತುಂಬಾ ವಿಶೇಷವಾಗಿದೆ. ಭಾವ ಮತ್ತು ಮೈದುನಂದಿರ ಸಂಬಂಧವಾಗಿದೆ. ಆ ಒಂದು ಕಾರಣಕ್ಕಾಗಿಯೇ ಬಿಳಿಗಿರಿರಂಗನನ್ನು ತಮ್ಮ ಕುಲದೇವರಾಗಿ ಮಾಡಿಕೊಂಡಿದ್ದಾರೆ. ತಮ್ಮ ಮೂಲಸ್ಥಾನವು ಮಲೆಯಮಹಾದೇಶ್ವರ ಬೆಟ್ಟವಾದರು

ತಾವು ಬಿಳಿಗಿರಿರಂಗನ ಬೆಟ್ಟದಲ್ಲಿ ನೆಲಸಿ ಬಿಳಿಗಿರಿರಂಗಸ್ವಾಮಿಯ ಆರಾಧನೆಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಬಿಳಿಗಿರಿರಂಗನು ಸೋಲಿಗರ ಭಾವನಾದ ಬಗ್ಗೆ ಸೋಲಿಗರಲ್ಲಿ ಒಂದು ಕಥೆಯನ್ನು ಹಿರಿಕರು ಹೇಳಿದ್ದಾರೆ.

ನಮ್ಮ ಸೊಲುಗ್ರ ಮೂಲ ಪುರುಸ ದೇವಸೊಲಿಗ ಮತ್ತು ನಿಲಯ್ಯನ ಮಗನಾದ ಕಾರಯ್ಯ ಮಕ್ಳು ಸಂಸಾರ ಮಾಡಕೆಂತ ರಂಗಪ್ಪನಬೆಟ್ಟಕ್ಕೆ ಬಂದ್ರು. ಇದ್ರಲ್ಲಿ ಬೊಮ್ಮೆಗೌಡ ಹಿರಿಕ ಮುಂದೆ ಅವಾ ಬೆಟ್ಟದ ಸೊಲುಗ್ರಗೆಲ್ಲ ಹಿರಿಕನಾದ ಮತ್ತೆ ಗುರುವಾದ. ಈಗ ಗುರುವಿನಗದ್ದೆ ಅಂತೈತಲ್ಲ ಅದೇ ಮಿಣ್ಣೆ ಬೆಟ್ಟದ್ ಪೊಡ್ನಲ್ಲಿ ವಾಸವಾಗ್ತಾರೆ. ಇವಂತಾವ ಏಳುಉಂಡಿ ಆಡು ಏಳುಉಂಡಿ ಕುರಿ ಮತ್ತು ಏಳುಹುಂಡಿ ದನಗಳಿರ್ತಾವೆ. ಇವನು ಒನ್ ಕಾಲ್ಕೆ ಶ್ರೀಮಂತ ಅವಾಂ ಹಿರಿಕ ಬೊಮ್ಮೆಗೌಡನ್ಗೆ ಗಂಡು ಐಕ್ಳರಿಲ್ಲ ಅಯ್ದು ಜನ ಹೆಣ್ಣ್ ಮಕ್ಕಗ ಅವ್ವೆಸ್ರು ದೊಡ್ಡಕಾಡಿ, ಚಿಕ್ಕಕಾಡಿ, ಮರಿಬೊಮ್ಮಿ, ಗುಂಗ್ರುತಲೆ ಮತ್ತು ಕುಸ್ಮಾಲೆ ಅಂತ ಕೊನೆಕೆ ವುಟ್ದೊಲು ಕುಸ್ಮಾಲೆ ಬಾಲ ಸೆಂದಾಕಿದ್ಲು. ಒನ್ಸಾರಿ ಕಾಡ್ನಲ್ಲಿ ಆಟ ಆಡ್ತಿದ್ದ ಕುಸ್ಮಾಲೆನ ಬಿಳಿಗಿರಿರಂಗಪ್ಪ ನೊಡ್ಬಿಡ್ತಾನೆ. ಅಮ್ಯಾಕೆ ಅವನ್ಗ ಆಸೆಯಾಗ್ಬಿಡತ್ತದೆ. ಇಂತ ಸುಂದ್ರಿಯನ್ನ ನಾ ಮದ್ವೆಯಾಗ್ಲೆಬೇಕಂತ ತಿರ್ಮಾನ ಮಾಡ್ಕೊಬಿಟ್ಟ. ಬಿಳಿಗಿರಿರಂಗಪ್ಪ ಏನ್ಮಾಡ್ತಾನೆಂದ್ರ ಊರಮೇಲಬರೊ ದಾಸಯ್ಯನ ಯಾಸ ಅಕೊಮ್ಬುಡ್ತಾನೆ. ಆಯಾಸದಲ್ಲಿ ಬೊಮ್ಮೆಗೌಡನ ಅಟ್ಟಿಗೆ ಒತಾನೆ. ಆಗ ದ್ಯಾಸ್ತಿ ಮಳೆ ಬರಕೆ ಸುರುವಾಗ್ತೈತೆ .ಅಗ ದಾಸಯ್ಯನು ಬೊಮ್ಮೆಗೌಡನಿಗೆ ಕೇಲ್ತಾನೆ ಅಂಯ್ಯಾ ನನಕ ಸ್ವಲ್ಪ ಮಲ್ಕಲಿಕೆ ವಸಿ ಜಾಗ ಕೊಡ್ರಪ್ಪ ಅಂತ ಕೆಲ್ತಾನೆ. ಬೊಮ್ಮೆಗೌಡ ಬಾಗ್ಲ ಸಂದಿ ಮೂಲೆ ತೊರಿಸ್ತ ಒಗಿ ಕುಂತ್ಕೊಳಸ್ರಲ್ಲಿ ಕೊಲಿಟ್ಟ ಆ ಕೊಲು ಪೂರ್ತಿ ಜಾಗ ಅವರಸ್ಕೊಂಬಿಡ್ತು ಆಗ ಬೊಮ್ಮೆಗೌಡಂಗೆ ಆಸರ್ಯ ಆತು. ನಂತ್ರ ಗೌಡ ಇನ್ನೊಂದು ಮೂಲೆ ತೊರ್ಸ್ತಾ ಅ ಮೂಲೆಲ್ಲ ದಾಸಯ್ಯನ ಕೃಷ್ಣಂಜಿನ ಆವರಸ್ಬಿಡುತ್ತು ಗೌಡ ಆಸರ್ಯಗೊಂಡು ದಾಸಯ್ಯನನ್ನು ನಡುಮೆನ್ಲಿ ಕುಂತ್ಕೊಂತೇಳ್ದ ಅಲ್ಲಿ ದಾಸಯ್ಯ ತನ್ ಜಾಗ್ವೆ ನಿಟ್ಟ ಜಾಗ್ವೆ ನಡುಮೆನೆನೆಲ್ಲ ಆವರಸ್ಕೊಬುಡ್ತು ಗೌಡ ಇದೇನ್ ಸೊಜ್ಗೆಎಂದು ದೊಡ್ಡಕಾಡಿಯ ಕ್ವಾಣೆ ತೊರ್ಸ್ತಾ ದಾಸಯ್ಯ ತನ್ನ ಮೈಮ್ಯಾಲಿದ್ದ ಬಟ್ಟೆಬೆರೆ ತೆಗ್ದಿಟ್ರೆ ಕ್ವಾನೆಯಲಾ ತುಂಬೊಯ್ತು ಸಾಲ್ದಕ್ಕೆ ಬಟ್ಟಲ್ಲಿದ್ದ ನಿರೆಲ್ಲಾ ಸೆಲ್ಲಿ ಅಟ್ಟಿಯೆಲ್ಲ ತೆಪ್ಪವಾಯ್ತು. ಇದೆ ರೀತಿ ಚಿಕ್ಕಾಡಿ ಕೊನೆ ದಾಸ್ಯೆನಾ ತುಲಸಿಮನಿಂದ ತುಂಬೊಯ್ತು.ಅವ್ನು ಗುಂಗ್ರುತಲೆ ದಾಸ್ಯೆನ ಬನವಾಸಿ ಬರ್ತಿಯಾಯ್ತು ಮರಿಬೊಮ್ಮಿ ಕೊನೆ ಗಂಟೆಯಿಂದ ತುಂಬೊಯ್ತು, ಕಟ್ಟಕಡೆಗೆ. ಕುಸ್ಮಮಾಲೆ ಕ್ವಾನೆಗೆ ಒದ ಅಲ್ಲಿ ಕಸ್ತಳ್ಳುವ ಮೂಲೆಯಲ್ಲಿ ನಿಲ್ಲಿಸ್ತ್ರು ದಾಸ್ಯೆಯ್ಯ ಅಲ್ಲಿ ಸಂಕ ಇಟ್ಟಕೊಡ್ಲೆ ಮೂಲೆನೆಬರ್ತಿಆಗೊಯ್ತು. ಆಗ ಮೊದ್ಲೆ ನಾಲ್ವರು ಅಕ್ಕತಂಗೆರು ಕ್ವಾಪದಿಂದ ದಾಸ್ಯೆನ ಒಡೆಲೊದ್ರು ಆಗ ಕುಸ್ಮಾಲೆ ಪಾಪ ಮುದ್ಯ ಅಂತೆಳಿ ತನ್ ಮಂಚದತ್ರ ನಿಲ್ಲಕೆಳಿದ್ಲು. ದಾಸ್ಯೆಯ ತಲೆಎತ್ತಿ

ನೊಡ್ತ ಮಾಳಿಗೆ ತೂತಾಗಿ ಮೆಲಿಂದ ಮಳೆ ನಿರು ಜರ್‍ರಂದು ಸುರಿಯಲಾರಂಜಿಸಿತು. ಕ್ಷನೇಕ ಕುಸ್ಮಾಲೆ ಮುದಿಯನ್ನ ತನ್ ಮಂಚದ್ ಕೆಳ್ಗ ಕೂಡ್ಲು ಎಳೆದ್ಲು. ಇಸ್ಟೊತ್ತಿಗೆ ಕತ್ತಲಾತು ಎಲ್ಲರ್ರು ಮಲಗಿದ್ರು.

ಕುಸ್ಮಲಿಯು ಮಂಚದ್ ಮ್ಯಾಲೆ ಮಲ್ಗಿದ್ಲು. ಆದ್ರು ನಿದ್ರೆ ಬರ್‍ಲಿಲ್ಲ ದಾಸ್ಯೆಯ ಎನ್ ಮಾಡ್ತವನಂತ ಮಂಚ್ಚಡಿ ಬಗ್ಗಿ ನೋಡಿದ್ಲು ಅಲ್ಲಿ ದಾಸ್ಯೆನಿಲ್ಲ. ಬದ್ಲಿಕಾ ಸುಂದ್ರ ರೂಪಿನ ಯುವಕನೊಬ್ಬನಿದ್ದ. ಅವ್ನು ಕುಸ್ಮಾಲೆಯನ್ನು ನೊಡಿ ಮಂಚ್ಚಡಿಯಿಂದ ಹೊರ್‍ಬಂದ. ಕುಸ್ಮಾಲೆಗೆ ಅವನ್ನ ಕಂಡು ಪ್ರಿತಿಯಾತು. ಇಬ್ಬರು ಒತ್ತುಟೊಕ್ಕೊಂಚೇನೆ ಒಡಿಒಗೊನಂತ ಸಂಕಲ್ಪಮಾಡಿದ್ರು. ಯುವಕ ಮತ್ತೆ ದಾಸ್ಯೆಯನಾದ. ಇಬ್ಬರು ಒರಗ್ಬಂದ್ರು.

ಒರಗ್ಮಲಿಗಿದ್ದ ಬೊಮ್ಮೇಗೌಡನಿಗೂ ನಿದ್ದೆ ಬಂದಿರ್‍ಲಿಲ್ಲ, ಆದಿನ ದಾಸ್ಯೆನ ಬಂದಲಾಗಾಯ್ತು ನಡೆದಿದ್ನಲ್ಲಾ ನೆನೆದು ಇದ್ಯಾನು ವಿಚಿತ್ರವಾಗ್ಗಬಿಡ್ತು ಅಂತ ಯಾಚನೆ ಮಾಡ್ತ ಮಲ್ಗಿದ್ದ ಕುಸ್ಮಾಲೆ ಮತ್ತು ದಾಸ್ಯೆಯ ಒರ್‍ಗೆ ಬರ್‍ತಿದ್ದನ್ನು ಕಂಡ. ತನ್ ಮುದ್ದು ಮಗ್ಳನ್ನು ದಾಸ್ಯೆನು ಅಪರ್‍ಸಕೊಂಡು ಒಂಟ್ವನಲ್ಲಾ ಎಂಬ ಕ್ವಾಪದಿಂದ ತನ್ ಅವ್ರನೆಲ್ಲಾ ಎಬ್ಸಿ ಈ ದಾಸ್ಯೆಯನನ್ನ ವರಗಟ್ಟಿ ಎನ್ದ ಎಲ್ರೂ ದಾಸ್ಯೆನನ್ನ ವರಗೆ ದಬ್ಬಿದ್ರು ಕುಸ್ಮಾಲೆ ಮನಿಯಲ್ಲೀ ಉಳ್ದುಲು.

ದಾಸ್ಯೆಯನ ರೂಪಿನ ಮಾಯಾವಿ ವರಟೇಬುಟ್ಟ ಇತ್ಲಗ ನೋಡಿದ್ರ ಮನಿಯಲ್ಲ ತುಂಬಿದ್ದ ಅವ್ನ ಕೊಲು ಜಾಗ್ಟೆ ಬವನಾಸಿ, ಸಂಕ, ಗಂಟೆ ತುಳ್ಸಿಮಣಿಹಾರ, ವಸ್ತ್ರ ಎಲ್ಲ ಇಟ್ಕಡೆಮಾಯ. ಇದೇನಂತ ತಿರ್‍ಗಿ ನೊಡೊವ್ಸಟ್ರಲ್ಲಿ ಬೊಮ್ಮೆಗೌಡ ಅಟ್ಟಿಯಲ್ಲಿದ್ದ ಆಡಿನ ಮಂದೆ ಕುರಿಮಂದೆಗಳೆಲ್ಲಾ ನಿಂತ್ಗ್ಗನಿಂತ ಬುಟ್ಟವೆ. ಇದೆನಪ್ಪ ಅಂತ ಬೊಮ್ಮೆಗೌಡ ಕುಸಿದು ಕುಳ್ತ. ಎಸ್ಟು ಒತ್ತು ಕುಸ್ತದು ಕುಳ್ತಾನು ಮೆನೆಲ್ಲೆಲ್ಲಾ ಉಪಾಸ ಅಸ್ವು ಎನ್ಮಾಡ್ದ ಅಂದ್ರೆ ತನ್ನ ಮೊದ್ಲ ನಾಕು ಮಕ್ಕಳನ್ನ ಕರ್‍ದು ಕಾಡಿಂದ ಗೆಡ್ಡೆ ಗೆಣ್ಸು ತರಕೆ ಎಳ್ದಾ. ಒತ್ತಮುಳ್ಗೊತ್ತಿಗೆ ಗೆಡ್ಡೆ–ಗೆಣ್ಸು ಎಲ್ಲಾ ಸೊಪ್ಪು ಸದೆ ಎಲ್ಲಾತಂದ್ರು ಅದನ್ನ ಬೇಸಿ ತಿಂದ್ರು. ಮಾರನೆ ದಿನ ಕುಸ್ಮಾಲೆಯ ಕಾಡಿಬೇಡಿ ಕಾಡ್ಗೊರಟ್ಲು ಅಯ್ವರು ಒಗಬೇಕಾದ್ರೆ ಕಲ್ಯಾನಿ ಅತ್ರ ಅಂಗಡಿ ಅರೆ ಅಂತ ಇಗ್ಲೂ ಇದೆ. ಗುಡ್ಡದಲ್ಲಿ ವಂದ್ ಬಿದ್ರು ಹೊಟ್ಟೆಲಿ ಕೊಲ್ಜೇನು ಕಟ್ಟಿತ್ತು. ಕುಸ್ಮಾಲೆ ಜೇನ ಕಂಡ್ರೆ ಆಸೆ ಎಲ್ಲರ್‍ರ ಸೇರಿ ಜೇನ ಕಿತ್ರು ಬಿದ್ರು ಆಳೆಲಿ ಅಯ್ದು ದೊನ್ನೆ ಮಾಡ್ಕೊಂಡು ಯಾರಾದ್ರು ಬಂದ್ರ ಎಂಜ್ಲು ಕೊಡೊದೇಗ ಅಂತ ಎಳಿ ನಾಕು ಜನ ಅಕ್ಕಂದ್ರು ಜೆನ ಕೀಳಬೆಕಾದ್ರೆ ಯಾರ್‍ನೊ ಕಾಯ್ತಯಿದ್ಲು. ಮುದಿಯ ಬಂದ ಕುಸ್ಮಾಲೆ ಆರನೆ ದೊನ್ನೆಯನ್ನ ಆ ಮುದಿಯ ದಾಸ್ಯೆಯನಿಗೆ ಕೊಟ್ಲು ಕೂಡ್ಲೆ ಅವಾಂ ಮಾಯಾದ.

ನಂತ್ರ ಜೆನು ಕುಡ್ದ ನಾಲ್ವರು ಅಕ್ಕಂದ್ರು ಹುಮ್ಮಸಿನಿಂದ ಗೆಣ್ಸನ್ನು ಕಿತ್ತರು. ಪಾಪ ಕುಸ್ಮಾಲೆಗೆ ಸರಿಯಾಗಿ ಗೆಣ್ಸು ಸಿಕ್ಕಲೇ ಇಲ್ಲ. ತಾನು ಬರಿಗೈಲಿ ಒಗುವುದು ಅವಮಾನ ಅದಕ ಅವ್ಳು ಒಂದು

ಮೂಟೆ ಗೆಣ್ಸು ಸಿಗೋವರ್ಗು ಬರವುದಿಲ್ಲವೆಂದು ಅಗೆಲು ಒದ್ಲು ಇಂದಿಗೆ ಆಗಲ್ಲಾ ಅಂತೇಳಿ ಛಾಪ್ಲಿ ಒರಟ್ರು, ಕೊನೆಕಾ ಕುಸ್ಮಾಲೆಗೆ ಒಂದು ಹುಬ್ಬೆ ಕಾಣಸ್ತು ಕೂಡ್ಲೆ ಅಗೆಲಾರಂಜಿಸ್ದಲು. ಸುಲಬ್ಕೆ ದಪ್ಪ ದಪ್ಪ ಗೆಡ್ಡೆಗಳು ಸಿಕ್ಕವು. ಸಂತಸದಿಂದ ತೆಕ್ಕಂಡು ರಾಸಿ ಅಕಿ ಮೂಟೆ ಕಟ್ಟದ್ಲು. ಅಂವು ಎತ್ತುವುದಕೊದ್ರ ತುಂಬಾ ಭಾರ. ಸುತ್ತ ನೋಡುದ್ಲು ಯಾರು ಇಲ್ಲ ಕತ್ಲು ಬೆರೆ ಮುತ್ತತಿದೆ. ತನ್ನನುನ ಬಿಟ್ಟು ಓಗಿದ್ದಕ್ಕೆ ಅಕ್ಕಂದಿರಮೇಲೆ ಕ್ವಾಪ ಬಂತು. ಬ್ಯಾಸರ ತನ್ನ ಅಕ್ಕಂದ್ರಮೆಲೆ ಇವಳು ಮೊರೆಯನ್ನು ಲಾಲಿಸಿದಂತೆ ಮುದಿ ದಾಸ್ಯೆಯ ಪ್ರತ್ಯಕ್ಷನಾದ.

ಕುಸ್ಮಾಲೆಗೆ ದೇರ್ಯ ಬಂತು ದಾಸ್ಯೆಯ ನಾನು ನಿನಗೆ ಜೆನು ಕೊಟ್ಟ ಉಪಕಾರಕ್ಕೆ ಈ ಮುಟೆ ಎತ್ತಿ ನನ್ನ ತಲೆ ಮೆಲೆ ಮಡುಗಲಾರ್ಯಾ ಎಂದು ಕೇಳಿದಳು ಅದ್ಕ ದಾಸ್ಯೆಯ ಆಗ್ಬದವ್ವಾ ಆದ್ರೆ ಈ ಉಪ್ಕಾರಕ್ಕೆ ನೀನು ನನಗೆ ಏನಾಗ್ತಿ? ಎಳು ಮೊದಲು ಎಂದ ತಂಗಿ ಆಗ್ತೆನೆ ಅಂದ್ಲು ದಾಸ್ಯೆಯ ಅದು ಬೇಡ ಅಂದ ಬೇರೇನಾದ್ರು ಹೇಳು ಅಂದ ಮೊಮ್ಮಗಳಾಗ್ತೀನಿ ಅಂದಲು ದಾಸ್ಯೆಯ ಒಪ್ಪಲಿಲ್ಲ, ಮಗಳಾಗ್ತಿನಿ ಅಂದ್ಲು ಅದ್ಕೂ ಒಪ್ಪಲಿಲ್ಲೆ ಹಾಗಾದ್ರ ನಿನ್ನೊಳಗೆನೆತೆ ಏಳು ಅಂದ್ಲು ಅದಕ್ಕೆ ದಾಸ್ಯೆಯ ಮಡದಿ ಆಗು ಎಂದ. ಕುಸ್ಮಾಲೆ ಎಗಾದ್ರಮಾಡಿ ಮೂಟೆ ತಲೆಗೇರಿಸ್ಕೊಳ್ಬೇಕಲ್ಲ ಆಮೇಲ ನೊಡೊಣ ಮೂಟೆ ಎರಿದಮ್ಯಾಕೆ ಅಂದ್ಲು ಓಡಿ ಒಗಿ ಮೆನೆಸೇರ್ಕೊಳೋಣ ಅಂತ ಯಾಚನೆ ಮಡಿ ಅಗಲಿ ಅಂದ್ಬಿಟ್ಳು. ದಾಸ್ಯೆಯ ನಾಮದಕಡ್ಡಿ ,ಗುರುಮಣಿ ಮುಟ್ಟಿಸಿ ಸತ್ಯಮಾಡಿಸ್ಕೊಂಡ. ದಾಸ್ಯೆಯ ಮೂಟೆ ಎತ್ತಿ ಕುಸ್ಮಾಲೆ ತಲೆ ಮೇಲಿಡುತ್ತಾ ನನ್ನ ವಸಿ ದೂರ ವರ್ಬೇಕು ಮೂಟೆ ಮ್ಯಾಲೆ ಕೂತ್ಕೊತ್ತಿನಿ ಅನ್ನುತ್ತಾ ಕುಳಿತು ಬಿಟ್ಟ, ಕುಸ್ಮಾಲೆಗೆ ಮೊದಲು ಬಾರ ಗೊತಾಗ್ತಿಲ್ಲ ಬರಬರ್ತಾ ತಲೆಯಮೇಲೆ ಬಾರಹೊರ್ದಾಗಿ ಕಂಡಿತು ಕಗ್ಗಲ್ಲ ವರಬೊದು ಕರಿಕಲ್ಲ ವರಬೊದು ಈ ಆಳ್ ದಾಸ್ಯೆಯನ ವರಬಾರ ನಾ ವರನಾರಿ ಅಂದವಲೆ ದೊಪ್ಪಗೆ ದಾಸ್ಯೆಯನ ಸಹಿತ ಮೂಡೆ ಎತ್ತಾಗ್ಬಟ್ಲು. ಕೂಡ್ಲೆ ಎದ್ರುಗೆ ಅಂದು ರಾತ್ರಿ ಕಂಡ ಯುವಕ ನಸು ನಗುತ್ತಾ ನಿಂತಿದ್ದಾನೆ. ಇಬ್ಬರಿಗೂ ಸಲ್ಲಾಪ ಮಾತ್ಕತೆ ನಡ್ಯತೆ ಯವಕ ಬಿಳಿಗಿರಿರಂಗಪ್ಪ ಕುಸ್ಮಾಲೆ ಕೈಯಿಡಿದು ಈಗ ಕುಂಬಾರನಕೊಳ ಅಂತ ಇದ್ಯಲ್ಲಾ ಅಲ್ಲಿ ಗವಿ ಒಡ್ಡಿನ ಬಳಿಗೆ ಬಂದು ಅಲ್ಲಿದ ಗವಿಯೊಳೊಕ್ಕೊದ. ಇತ್ತ ಬೊಮ್ಮೆಗೌಡನ ಮೆನೆಯಲ್ಲಿ ಕುಸ್ಮಾಲೆಬರ್ಲಿಲವೆಂದು ಎಲ್ಲರೂಗೆ ಕಳವಳ ಇತ್ತ ಬೊಮ್ಮೆಗೌಡ ಅಣೆ ಮಟ್ಟದ ಕೊಲನ್ನು ತೆಕ್ಕೊಂಡು ಆಳುಗಳನ್ನು ಕರ್ಕೊಂಡುಬುಟ್ಟು ಬಿಂಕಿ ಕೊಳ್ಳಿ ಇಡ್ಕೊಂಡು ಮಗಳನ್ನು ವುಡ್ಕುತ್ತಾ ಅತ್ತಿತಾ ಕಾಡ್ನಲ್ಲಿ ಅಲೆದು ಕೊನೆಕ ಗವಿ ಬಡ್ಡಿನ ಬಳಿಕ ಬಂದು ಅಲ್ಲಿ ಬೆಳ್ಕ ಬಿಟ್ಟು ಇದೇನಪ್ಪ ಅಂತ ಗವಿಯೊಳ್ಗ ನುಗ್ಗಿ ನೋಡ್ತಾನೆ ತನ್ನ ಮಗಳು ಕುಸ್ಮಾಲೆ ಮೂಲೆಲಿ ಜತೆಯಾರೊ ಯುವಕ ನಿಂತಿದ್ದ ಕೊಲ್ನತ್ತಿದಾ ಒಡೆಯಾಕು ಎದ್ರುಗೆ ಸಂಕ ಸಕ್ರದಾರಿನಿಂತಿದ್ದಾನೆ. ಪರಮಾತ್ಮ ಕುಸ್ಮಾಲೆ ಪಾದಕಮಲಗಲಿಗೆ

